ಕರ್ಣಾಟಕ ಕಾವ್ಯಮಂಜರಿ

# ಮಹಾಕವಿ
# ಶ್ರೀದುರ್ಗಸಿಂಹವಿರಚಿತಂ,
# ಕರ್ಣಾಟಕ ಪಂಚತಂತ್ರಂ

[೧೩]

ಎಸ್. ಜಿ. ನರಸಿಂಹಾಚಾರ್,

ಲೈಬ್ರೇರಿಯನ್ ಮೈಸೂರು ಗೌರ್ನಮೆಂಟ್ ಓರಿಯಂಟಲ್ ಲೈಬ್ರರಿ.

ಮ. ಆ. ರಾಮಾನುಜೈಯಂಗಾರ್,

ಅ. ಮಾ. ವೆಸ್ಲಿಯನ್ ಮಿಷನ್ ಹೈಸ್ಕೂಲ್, ಮೈಸೂರು.

ಇವರಿಂದ ಪರಿಷ್ಕರಿಸಲ್ಪಟ್ಟು ಟಿಪ್ಪಣಿಯೊಡನೆ

:o:

ಕರ್ಣಾಟಕ ಕಾವ್ಯಮಂಜರಿ ಪ್ರೊಪ್ರೈಟರುಗಳಾಗಿ

ಮೈಸೂರು

ವೆಸ್ಲಿಯನ್ ಮಿಷನ್ ಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟಿತು.

೧೮೯೮.

೪—೦



# ಉಪೋದ್ಘಾತ.

ಮೂರು ಪ್ರತಿಗಳ ಸಹಾಯದಿಂದ ಈ ಗ್ರಂಥವನ್ನು ಮುದ್ರಿಸಲಾಯಿತು. ಈ ಪ್ರತಿಗಳಲ್ಲಿ—

೧. ಮದ್ರಾಸ್ ಗವರ್ನಮೆಂಟು ಓರಿಯಂಟಲ್ ಮೆನ್ಯುಸ್ಕ್ರಿಪ್ಟ್ ಲೈಬ್ರರಿ ಎಂಬ ಪ್ರಾಚೀನ ಪುಸ್ತಕಾಗಾರದಲ್ಲಿದ್ದ ಕೈ ಬರೆಹದ ಪುಸ್ತಕದ ನಕಲು. ಇದು ಕ॥ ಪ್ರತಿ.

೨. ಮೈಸೂರು ಶ್ರೀಮನ್ಮಹಾರಾಜರವರ ಅರಮನೆಯ ಸರಸ್ವತೀ ಭಂಡಾರದಲ್ಲಿದ್ದ ಓಲೆಯ ಪುಸ್ತಕದ ನಕಲು. ಇದು ಗ॥ ಪ್ರತಿ.

೩. ಮಿರ್ಲೆ ಸಾಲಿಗ್ರಾಮದ ಆಂಗ್ಲೋ ವರ್ನಾಕ್ಯುಲರ್ ಸ್ಕೂಲ್ ಮೇಸ್ಟರ್ ಮಹಾರಾಜಶ್ರೀ॥ ವೆಂಕಟರಮಣಯ್ಯನವರು ಕಳುಹಿಸಿದ ಓಲೆಯ ಪ್ರತಿ. ಇದು ಖ॥ ಪ್ರತಿ.

ಇವುಗಳಲ್ಲಿ—

೧. ಕ॥ ಪ್ರತಿ ಕಳಲೆಯ ನಂಜರಾಜ ಅರಸಿನವರು ಪರಿಷ್ಕರಿಸಿದ ಪುಸ್ತಕ. ಇದರಲ್ಲಿ ಗ್ರಂಥಕರ್ತನ ಕಾಲ ದೇಶ ಮುಂತಾದುವನ್ನು ತಿಳಿಸುವ ೨—೫೧ ವರೆಗಿನ ಪದ್ಯಗಳಿಲ್ಲ. ಈ ಪ್ರತಿಯ ಮೊದಲಲ್ಲಿ,

ಶ್ಲೋ॥ ಮನವೇ ವಾಚಸ್ಪತಯೇ ಶುಕ್ರಾಯ ಪರಾಶರಾಯ ಸಸುತಾಯ।
ಚಾಣಕ್ಯಾಯ ಚ ವಿದುಷೇ ನಮೋಸ್ತುವೋ ನೀತಿಶಾಸ್ತ್ರಕರ್ತೃಭ್ಯಃ॥

ಷ॥ ಸಾತಿಶಯವಾಗ್ದುರ್ಗಸಿಂಹೋಕ್ತಿತಂತ್ರಮಂ।
ನೀತಿಮನ್ಮಹಿಶೂರ ದಳವಾಯಿ ದೇವರಾ।
ಡ್ಭೂತಳಾಧಿಪನಮಿತವಿದ್ವಜ್ಜನಾಲಾಪನಾತ್ತಸದ್ಗುಣಕಲಾಪಂ॥
ಪ್ರೀತಿಯಿಂ ಮಿಗೆ ಕೇಳಿ ಪದವಾಕ್ಯಪದ್ಧತಿಯ।
ರೀತಿ ತಪ್ಪದವೋಲು ತಾನೆ ತಿದ್ದಿಸಿ ಬರೆಸ।
ಲೋತಾನು ಪ್ರೇಮದಿಂದೀಕಥಾಸರಣಿವಿದರೊಲಿದು ನೋಲ್ಪುದು
[ಚದುರರು॥

ಎಂಬ ಪದ್ಯಗಳಿವೆ. ಮತ್ತು ೧೯ನೆಯ ಪುಟದಲ್ಲಿರುವ ೧ನೆಯ ನರಿಯ ಕಥೆ ಈ ಪ್ರತಿಯಲ್ಲಿ ಮಾತ್ರವಿದೆ, ಇತರ ಪ್ರತಿಗಳಲ್ಲಿಲ್ಲ.

೨. ಗ॥ ಪ್ರತಿ.—ಇದರ ಮೂಲಪ್ರತಿ ಅರಮನೆಯ ಸರಸ್ವತೀ ಭಂಡಾರದಲ್ಲಿ ಸುಟ್ಟುಹೋಯಿತು. ಇದರಲ್ಲಿಯೂ ೨—೫೧ ರ ವರೆಗಿನ ಪದ್ಯಗಳಿಲ್ಲ. ಇದು ಅಸಮಗ್ರಪ್ರತಿ. ಇದರಲ್ಲಿ ಸಂಸ್ಕೃತಶ್ಲೋಕಗಳಿಗೆ ಇತರ ಎರಡು ಪ್ರತಿಗಳಲ್ಲಿ ಕೊಟ್ಟಿರುವಂತೆ ತಾತ್ಪರ್ಯವು ಕೊಡದೆ ಶ್ಲೋಕಗಳಿಗೆ ಪ್ರತಿಪದಾರ್ಥವು ಕೊಟ್ಟಿದೆ ;

ಅದೂ ಸಮಗ್ರವಾಗಿಲ್ಲ; ಮೊದಲನೆಯ ತಂತ್ರದ ಅರ್ಧದ ವರೆಗೆ ಮಾತ್ರ ಇದೆ. ಮುಂದಕ್ಕೆ ತಾತ್ಪರ್ಯವೂ ಕೊಟ್ಟಿಲ್ಲ. ಈ ಪ್ರತಿ ಆವುದೋ ಒಂದು ತ್ರುಟಿತವಾದ ಬಹಳ ಪುರಾತನ ಪ್ರತಿಯನ್ನು ನೋಡಿ ಬರೆದಂತೆ ಕಾಣುತ್ತದೆ.

೩. ಖ॥ ಪ್ರತಿ.—ಇದು ಅಸಮಗ್ರವಾದ ಓಲೆಯ ಪ್ರತಿ; ಶುದ್ಧವಾದುದು; ಇದರಲ್ಲಿ ಟಿಕಾರವು ಬರೆದಿದೆ; ಪುರಾತನ ಪ್ರತಿ. ಇದರ ಆಧಾರದ ಮೇಲೆಯೇ ಈ ಗ್ರಂಥವು ಮುದ್ರಿತವಾಯಿತು.

ಈ ಪಂಚತಂತ್ರದ ಮೊದಲು ಮೂರು ಪ್ರಕರಣಗಳನ್ನು ಈ ಮೂರು ಪ್ರತಿಗಳ ಸಹಾಯದಿಂದಲೂ, ನಾಲ್ಕು ಐದನೆಯ ಪ್ರಕರಣಗಳನ್ನು ಕ॥ ಪ್ರತಿಯೊಂದರ ಆಧಾರದ ಮೇಲೂ ಮುದ್ರಿಸಿದ್ದೇವೆ.

ಈ ಗ್ರಂಥದ ಮುದ್ರಣದಲ್ಲಿನ ವಿಶೇಷವು:—ಪಾಠಾಂತರವು ಎಲ್ಲಿಂದ ಎಲ್ಲಿಯವರೆಗೆ ಎಂಬುದನ್ನು ತೋರಿಸುವದಕ್ಕೆ ಆದಿಯಲ್ಲಿಯೂ ಅಂತದಲ್ಲಿಯೂ ಒಂದೇ ಸಂಖ್ಯೆ ಕೊಟ್ಟಿದೆ. ಕನ್ನಡ ಪದ್ಯಗಳಿಗೆ ಕ್ರಮವಾಗಿ ಇಂಗ್ಲೀಷು ಅಂಕಗಳೂ ಸಂಸ್ಕೃತ ಶ್ಲೋಕಗಳಿಗೆ ಕನ್ನಡ ಅಂಕಗಳೂ ಉಪಯೋಗಿಸಿವೆ. ಸಂಸ್ಕೃತಶ್ಲೋಕಗಳಿಗೆ ಗ್ರಂಥದಲ್ಲಿ ಕೆಲವುಕಡೆ ಪದ್ಯರೂಪವಾದ ಟೀಕೆ ಇರುವುದರಿಂದ ಶ್ಲೋಕಗಳ ಟೀಕೆ ಗ್ರಂಥಕರ್ತನದಲ್ಲವೆಂದು ಭಾವಿಸಿ ಶ್ಲೋಕಗಳಿಗೂ ಟೀಕೆಗೂ ಪೈಕಾ ಅಕ್ಷರವು ಉಪಯೋಗಿಸಿದೆ. ಪಾಠಾಂತರಕ್ಕೂ ಟೀಕೆಗೂ ಭೇದ ಕಾಣುವಂತೆ ಬೇರೆಬೇರೆ ಅಕ್ಷರಗಳು ಉಪಯೋಗಿಸಿವೆ. ಕಠಿನ ಪದಗಳಿಗೆ ಮಾತ್ರ ಅಲ್ಲಲ್ಲಿ ಟೀಕೆಯೂ ಸಂಸ್ಕೃತ ಶ್ಲೋಕಗಳಿಗೆ ಎಲ್ಲಿ ಟೀಕೆಯಿರಲಿಲ್ಲವೊ ಆ ಕಡೆ ಟೀಕೆಯೂ ಕೊಟ್ಟಿದೆ. ಅಲ್ಲದೆ ಸುಖವಾಗಿ ಬೋಧೆಯುಂಟಾಗುವಂತೆ ಕಥೆಗಳೂ ಅವುಗಳ ನೀತಿಯೂ ಪ್ರತ್ಯೇಕಿಸಲ್ಪಟ್ಟಿವೆ. ಕಥೆಗಳ ಹೆಸರು ಮೂಲ ಪ್ರತಿಗಳಲ್ಲಿಲ್ಲ.

ಖ॥ ಪ್ರತಿಯನ್ನು ದಯವಿಟ್ಟು ಕಳುಹಿಸಿಕೊಟ್ಟ ಮ. ರಾ. ಸಾಲಿಗ್ರಾಮದ ಸರಾಫ್ ಪದ್ಮರಾಜಯ್ಯನವರಿಗೆ ಬಹಳವಾಗಿ ಕೃತಜ್ಞರಾಗಿರುತ್ತೇವೆ.

December, 1898.<br>Mysore.

S. G. N.<br>M. A. R.

# ಪೀಠಿಕೆ.

—ಕವಿಚರಿತ್ರೆ—

ಈ ಗ್ರಂಥಕರ್ತನಿಗೆ ದುರ್ಗಸಿಂಹನೆಂದು ಹೆಸರು. ಈತನು ಕರ್ಣಾಟ ಕದೇಶದ ಕಿಸುಕಾಡನಾಡಿನಲ್ಲಿ (ಪದ್ಯ. ೪೧) ಬಹಳ ಪ್ರಸಿದ್ಧನಾಗಿದ್ದ ದುರ್ಗಮಯ್ಯನೆಂಬ (೪೩) ಬ್ರಾಹ್ಮಣನ ಮಮ್ಮಗನು; ಈಶ್ವರಾರ್ಯನ ಮಗನು (೪೪). ಇವನ ತಾಯಿ ರೇವಾಂಬಿಕೆ (೪೮). ಇವನು ಸ್ಮಾರ್ತಬ್ರಾಹ್ಮಣನು; ಕಮ್ಮೆ ಕುಲದವನು; ಗೌತಮಗೋತ್ರದವನು (೪೮), ಇವನ ಗುರುಗಳು 'ಮಹಾಯೋಗಿ'ಗಳಾದ ಶಂಕರಭಟ್ಟರು (೫೭).

†"ಚಾಳುಕ್ಯ ರಾಜರಲ್ಲಿ 'ಕಲಿಕಾಲಕರ್ಣಂ,' 'ನೃಪಚಕ್ರವರ್ತಿತಿಲಕಂ,' 'ಶ್ರೀಕೀರ್ತಿವಿದ್ಯಾಧರಂ,' 'ಸತ್ಯಾಶ್ರಯ ಕುಲ ತಿಲಕಂ,' 'ಚೋಳಕಾಳಾನಲಂ' ಎಂಬ ಬಿರುದುಗಳುಳ್ಳ ಜಗದೇಕಮಲ್ಲ ಅಥವಾ ಜಯಸಿಂಹನೆಂಬ ರಾಜನಲ್ಲಿ ಶ್ರೀ ಗಂಡಭೂರಿಶ್ರಯನೆಂಬ ಬಿರುದುಳ್ಳ ಸಿಂಹಸನ್ನಾಹನೆಂಬ ದಂಡನಾಯಕನಿದ್ದನು (೩೪), ತಚ್ಚರಣಕಮಲಭೃಂಗನಾದ (೩೫) 'ಚಕ್ರವರ್ತಿದಂಡಾಧೀಶ,' 'ಕೋದಂಡರಾಮಾಧಿಪ' ಮೊದಲಾದ ಬಿರುದುಗಳುಳ್ಳ ಕುಮಾರಸ್ವಾಮಿ ಆ ಜಗದೇಕಮಲ್ಲನಲ್ಲಿ ಈ ಕವಿಗೆ 'ಸಂಧಿವಿಗ್ರಹಿ' ಪದವಿಯನ್ನು ಕೊಡಿಸಿದನು (೩೯).

"ಕವಿ ಜಗದೇಕಮಲ್ಲನ ಆಜ್ಞೆಯಂತೆ ಸೈಯಡಿಯಲ್ಲಿ ಹರಿಹರಭವನಂಗಳನ್ನು ಕಟ್ಟಿಸಿದನು (೫೦).

"ಮಲ್ಲಿಕಾರ್ಜುನನು (ಸುಮಾರು. ಕ್ರಿ. ಶ. ೧೨೪೫) ದುರ್ಗಸಿಂಹನ ಈ ಗ್ರಂಥದಿಂದ ಪದ್ಯಗಳನ್ನು ಉದ್ಧರಿಸಿ ಬರೆದಿರುವುದರಿಂದ, ಈತನು ೧೧೪೫ಕ್ಕೆ ಹಿಂದೆ ಇದ್ದನೆಂಬುದು ಸ್ಪಷ್ಟವಾಗಿದೆ. ಪೂರ್ವಕವಿಸ್ತವಾವಸರದಲ್ಲಿ ಅಭಿನವಪಂಪನನ್ನು (ಸು ೧೧೦೫) ಹೇಳುವುದರಿಂದ ಆತನ ಕಾಲಕ್ಕೆ ಈಚೆಯವನಾಗಿ ಇರಬೇಕು. ಆದುದರಿಂದ ೧೧೩೯ ರಿಂದ ೧೧೪೯ ರ ವರೆಗೆ ಆಳಿದ ಜಗದೇಕಮಲ್ಲನೆಂಬ ಚಾಳುಕ್ಯರಾಜನಲ್ಲಿಯೇ ಈತನು ಸಂಧಿವಿಗ್ರಹಿಯಾಗಿದ್ದಿರಬೇಕು; ಸುಮಾರು ೧೧೪೫ ರಲ್ಲಿ ಇದ್ದಿರಬಹುದು.

"ವರರುಚಿ ಕಾಳಿದಾಸ ಸುಕುಮಾರಕುಮಾರಕ ವ್ಯಾಸ ಬಾಣನುಂ।
ಹರಿಹರ ಸಾರ್ವಭೌಮ ಕವಿರನ್ನನು ರೇಚಗ ದುರ್ಗಸಿಂಹನುಂ॥
ವರಕವಿಬತ್ತಲೇಶ್ವರನು ರಾಘವನಗ್ಗಳ ರುದ್ರಭಟ್ಟನುಂ।
ತುರಗ ಮಯೂರ ಹಂಪುಗನು ಕುಂತಿಚವುಂಡಿಯರೇ ಕವೀಂದ್ರರು॥

ಎಂಬ ಒಂದು ಪದ್ಯವು ದೊರೆಯುತ್ತದೆ. ಇದು ಯಾವ ಕವಿಯಿಂದ ರಚಿತವಾದುದೋ ತಿಳಿಯದು. ಇದರಲ್ಲಿ ದುರ್ಗಸಿಂಹನನ್ನು ಕವೀಂದ್ರರ ಗೋಷ್ಠಿಯಲ್ಲಿ ಸೇರಿಸಿ ಹೇಳಿದೆ."

† ಇದು ಕರ್ಣಾಟಕ ಕವಿಚರಿತೆಯಿಂದ ಉದ್ಧರಿಸಿದೆ.

## —ಗ್ರಂಥ ವಿಚಾರ—

ಈ ಗ್ರಂಥವು ಚಂಪೂರೂಪವಾಗಿದೆ. ಇದರಲ್ಲಿ (೧) ಭೇದಪ್ರಕರಣವರ್ಣನಂ, (೨) ಪರೀಕ್ಷ್ಯಾವ್ಯಾವರ್ಣನಂ, (೩) ವಿಶ್ವಾಸಪ್ರಕರಣಂ, (೪) ವಂಚನಾಪ್ರಕರಣಂ, (೫) ಮಿತ್ರಕಾರ್ಯವರ್ಣನಂ ಎಂಬ ಐದು ತಂತ್ರಗಳಿವೆ. ಒಂದನೆಯ ಪ್ರಕರಣದಲ್ಲಿ ಎತ್ತಿಗೂ ಸಿಂಹಕ್ಕೂ ಉಂಟಾದ ಸ್ನೇಹವನ್ನು ನರಿ ಕೆಡಿಸಿತೆಂಬ ಕಥೆಯೂ, ಎರಡನೆಯ ಪ್ರಕರಣದಲ್ಲಿ ಬ್ರಾಹ್ಮಣನು ಮುಂಗುರಿಯನ್ನು ಕೊಂದ ಕಥೆಯೂ, ಮೂರನೆಯ ಪ್ರಕರಣದಲ್ಲಿ ಗೂಗೆಗಳ ಗುಹೆಯನ್ನು ಕಾಗೆಗಳು ಸುಟ್ಟ ಕಥೆಯೂ, ನಾಲ್ಕನೆಯ ಪ್ರಕರಣದಲ್ಲಿ ಮೊಸಳೆಯನ್ನು ಕಪಿ ವಂಚಿಸಿದ ಕಥೆಯೂ, ಐದನೆಯ ಪ್ರಕರಣದಲ್ಲಿ ಕಾಗೆ, ಆಮೆ, ಸಾರಂಗ, ಇಲಿ ಇವುಗಳ ಸ್ನೇಹದ ಕಥೆಯೂ ಹೇಳಿವೆ.

ಈ ಪಂಚತಂತ್ರದ ಕಥೆಯನ್ನು ವಸುಭಾಗಭಟ್ಟನು ಗುಣಾಢ್ಯನ ಪೈಶಾಚಕ ಭಾಷೆಯಲ್ಲಿದ್ದ ಬೃಹತ್ಕಥೆಯನ್ನು ನೋಡಿ "ಪಂಚರತ್ನಮಪ್ಪೈದು ಕಥೆಗಳನಾಯ್ದುಕೊಂಡು" ಬರೆದನೆಂದೂ, ಆ ಪಂಚತಂತ್ರವನ್ನು ಈ ಕವಿ ತಾನು ಕನ್ನಡಿಸಿದನೆಂದೂ ಹೇಳುತ್ತಾನೆ. (೧೨—೧೩ ಪುಟಗಳು).

ಕವಿ ಗ್ರಂಥಾದಿಯಲ್ಲಿ ತ್ರಿಮೂರ್ತಿಗಳನ್ನೂ, ಸರಸ್ವತಿ, ಚಂದ್ರ, ಮನ್ಮಥ, ಸೂರ್ಯ, ವಿನಾಯಕ, ದುರ್ಗಿ ಇವರನ್ನೂ ಸ್ತುತಿಸಿ; ವಾಲ್ಮೀಕಿ ವ್ಯಾಸಾದಿಗಳನ್ನೂ, ನೀತಿಶಾಸ್ತ್ರಪ್ರವರ್ತಕರನ್ನೂ, ಚಂದ್ರಗುಪ್ತನಿಗೆ ರಾಜ್ಯವನ್ನು ಕೊಡಿಸಿದ ವಿಷ್ಣುಗುಪ್ತನನ್ನೂ ಹೊಗಳಿ, ಬಳಿಕ ಗುಣಾಢ್ಯ, ವರರುಚಿ, ಕಾಳಿದಾಸ, ಬಾಣ, ಮಯೂರ, ಧನಂಜಯ, ಭವಭೂತಿ, ಭಾರವಿ, ಭಟ್ಟಿ, ಮಾಘ, ರಾಜಶೇಖರ, ಕಾಮಂದಕ, ದಂಡಿ ಎಂಬ ಸಂಸ್ಕೃತ ಕವಿಗಳನ್ನೂ; ಶ್ರೀವಿಜಯ, ಕನ್ನಮಯ್ಯ, ಚಂದ್ರ, ಪೊನ್ನ, ಪಂಪ, ಗಜಾಂಕುಶ, ಕವಿತಾವಿಲಾಸ—ಈ ಕರ್ಣಾಟಕ ಕವಿಗಳನ್ನೂ ಸ್ತುತಿಸಿದ್ದಾನೆ. ತನ್ನ ಗ್ರಂಥವನ್ನು "ಕವಿಗಮಕಿವಾದಿವಾಗ್ಮಿಪ್ರವರಂ ಶ್ರೀವಾದಿರಾಜಮುನಿಪುಂಗವರು ॥ ತ್ಸವದಿಂ ತಿರ್ದಿದರ್" ಎಂದು ಹೇಳುತ್ತಾನೆ. ಮತ್ತು ಸೋಮದೇವನೆಂಬ ಕವಿಯ ನೀತಿ ಗ್ರಂಥದಿಂದ ಒಂದು ವಾಕ್ಯವನ್ನು (ಪುಟ. ೨೧೧) ತೆಗೆದು ಬರೆದಿರುತ್ತಾನೆ. ತನ್ನ ಗುಣಾದಿಗಳನ್ನು 51—57, 255, 449—451, 455 ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ.

ಈ ಗ್ರಂಥದಲ್ಲಿ 457 ಪದ್ಯಗಳೂ ೨೩೦ ಶ್ಲೋಕಗಳೂ, ೪೮ ಆಂತರಾಳಿಕ ಕಥೆಗಳೂ ಇವೆ.

ಈ ಪಂಚತಂತ್ರಕ್ಕೂ ಪ್ರಕೃತದಲ್ಲಿ ಪ್ರಚಾರದಲ್ಲಿರುವ ಪ್ರಖ್ಯಾತವಾದ ವಿಷ್ಣುಶರ್ಮನ ಪಂಚತಂತ್ರಕ್ಕೂ ತಂತ್ರಗಳ ಹೆಸರುಗಳಲ್ಲಿಯೂ, ಆಂತರಾಳಿಕ

ಕಥಾಭಾಗಗಳಲ್ಲಿಯೂ, ಉದ್ಧೃತವಾಗಿರುವ ಶ್ಲೋಕಗಳಲ್ಲಿಯೂ ಹಲವು ಭೇದಗಳಿವೆ. ಈ ಕವಿ ವಿಷ್ಣುಶರ್ಮನ ಪ್ರಸಿದ್ಧವಾದ ಪಂಚತಂತ್ರವನ್ನು ಬಿಟ್ಟು ವಸುಭಾಗಭಟ್ಟನ ಪಂಚತಂತ್ರವನ್ನು ಕನ್ನಡಿಸುವದಕ್ಕೆ ಕಾರಣವೇನೋ ತಿಳಿಯಲಿಲ್ಲ.

ಈ ಪಂಚತಂತ್ರದಲ್ಲಿ ಒಂದೆರಡು ಕಡೆ ಸ್ವಲ್ಪ ಜೈನಮತಾನುಸಾರವಾದ ಅಭಿಪ್ರಾಯಗಳಿವೆ. ಆದುದರಿಂದ ಒಂದು ವೇಳೆ ವಸುಭಾಗಭಟ್ಟನು ಜೈನಕವಿಯಾಗಿರಬಹುದು. ಹೀಗಿದ್ದರೂ ಜೈನಮತಾವಲಂಬಿಯಲ್ಲದ ರಾಜನ ಕಾಲದಲ್ಲಿ ಸ್ಮಾರ್ತ ಬ್ರಾಹ್ಮಣನಾದ ಕವಿ ಇದನ್ನು ಕನ್ನಡಿಸಿದುದನ್ನು ನೋಡಿದರೆ, ಆ ಕಾಲದಲ್ಲಿ ಜೈನಮತವು ಈಗಿನ ಕ್ಷೀಣಸ್ಥಿತಿಗೆ ಬಾರದೆ ಪಂಪಾದಿಗಳ ದಿವಸದಲ್ಲಿದ್ದಂತೆ ಉನ್ನತಸ್ಥಿತಿಯಲ್ಲೇ ಇದ್ದಂತೆ ತೋರುತ್ತದೆ.

ಈ ಗ್ರಂಥವು ಚಂಪೂರೂಪವಾಗಿದ್ದರೂ ಇದರಲ್ಲಿ ಗದ್ಯಭಾಗವೇ ವಿಶೇಷವಾಗಿರುವುದರಿಂದಲೂ, ಇದು ಬಹಳ ಸರಳವಾಗಿಯೂ ಮನೋಹರವಾಗಿಯೂ ಇರುವ ಶೈಲಿಯಲ್ಲಿಯೇ ಬರೆಯಲ್ಪಟ್ಟಿರುವುದರಿಂದಲೂ, ಚಮತ್ಕಾರವಾದ ಕಥೆಗಳಿಂದಲೂ ನೀತಿ ಬೋಧಕವಾದ ಅನೇಕ ಶ್ಲೋಕಗಳಿಂದಲೂ ಪದ್ಯಗಳಿಂದಲೂ ಪರಿಪೂರ್ಣವಾಗಿರುವುದರಿಂದಲೂ, ಸರ್ವ ಪರಿಗ್ರಾಹ್ಯವಾಗಿದೆ.

ಕರ್ಣಾಟಕ ಕವಿಚರಿತೆಯಿಂದ ಕೆಲವು ಭಾಗವನ್ನು ಅನುವಾದ ಮಾಡಿಕೊಳ್ಳುವದಕ್ಕೆ ಅಪ್ಪಣೆಯನ್ನು ಕೊಟ್ಟದ್ದಕ್ಕಾಗಿ, ಆ ಗ್ರಂಥಕರ್ತರಿಗೆ ಬಹಳ ಕೃತಜ್ಞರಾಗಿರುತ್ತೇವೆ.

# ವಿಷಯ ಸೂಚಿಕೆ.

——:o:——



## ಭೇದ ಪ್ರಕರಣ ವರ್ಣನಂ ಪ್ರಥಮತಂತ್ರಂ.

ಸಿಂಹಕ್ಕಂ ವೃಷಭಕ್ಕಂ ಇರ್ದ ತಿಸ್ನೇಹಂ ನರಿಯಿಂದ ಕಿಡಿಸಲ್ಪಟ್ಟ ಕಥೆ.

---

## ಪರೀಕ್ಷಾವ್ಯಾವರ್ಣನಂ ದ್ವಿತೀಯತಂತ್ರಂ.



## ವಿಶ್ವಾಸಪ್ರಕರಣಂ ತೃತೀಯತಂತ್ರಂ.

## ವಂಚನಾಪ್ರಕರಣಂ ಚತುರ್ಥತಂತ್ರಂ.



---

## ಮಿತ್ರಕಾರ್ಯ ಪ್ರಕರಣಂ ಪಂಚಮತಂತ್ರಂ.



---





# ಶ್ರೀದುರ್ಗಸಿಂಹಮಹಾಕವಿಕೃತಂ

## ಕರ್ಣಾಟಕ

# ಪಂಚತಂತ್ರಂ.

---

ಶ್ರೀವಧು ರಾಗದಿಂದಗಲದಾವನ ವಕ್ಷದೊಳಿರ್ಪಳಾವಗಂ।
ದೇವನಿಕಾಯಮೋಲಗಿಪುದಾವನ ನಾಭಿಸರೋಜದೊಳ್ ವಚ॥
ಶ್ರೀವರನುತ್ಸವಂಬೆರಸು ಪುಟ್ಟದ[1] ನಾತ[1]ನಶೇಷದೈತ್ಯವಿ।
ದ್ರಾವಣನೀಗೆ ದುರ್ಗವಿಭುಗಚ್ಯುತನಚ್ಯುತಸೌಖ್ಯಕೋಟಿಯಂ ॥ 1

[2] [ಅವತಂಸೀ]ಕೃತಬಾಲಕೈತಕಶಿಖಾಸಂದಿಗ್ಧಮುಗ್ಧಾಮೃತಾಂ। [ಶ
ಶು ವಿಹಾಯಸ್ಸರಿದಂಬುಚುಂಬಿತಜಟಾಜೂಟಾಂತರಂ ಮಾಡುಗು॥
ತ್ಸವಮಂ ಭಾಳವಿಲೋಚನಪ್ರ[ಚುರ]ಭಾಸ್ವಜ್ಜಾತವೇದಶ್ಶಿಖಾ।
ನಿವಹಪ್ಲುಷ್ಟರತೀಶನಿಷ್ಟಸುಖಮಂ ದುರ್ಗಂಗೆ ದೀರ್ಘಾಯುಮಂ॥ 2

ತೋಯಜಗರ್ಭನಾದಿಮುನಿಮುಖ್ಯಮತಪ್ರಕಟೀಕೃತಾ[ಖಿಳಾ]।
ಮ್ನಾಯ[ನಪಾ]ಸ್ತದೋಷನಿಚಯಂ ತ್ರಿಜಗಜ್ಜನಕಂ ಸರಸ್ವತೀ। [೧೦
ವ್ಯಾಯತಲೋಲಲೋಚನಮುದಾಳಿನಿಪೀತಮುಖಾಬ್ಜನೊಲ್ದು ದೀ।
ರ್ಘಾಯುಮನೀಗೆ............ತಾರ್ಥವಹಂ ಪಿತಾಮಹಂ॥ 3

ಮಾನಿತಪುಂಡರೀಕರುಚಿರಂ ವಿಲಸದ್ವರಗಂಡಮಂಡಲಂ।
ಶ್ರೀನಿಲಯಂ ಮಹಾಶ್ರುತಿಯುತಂ ದ್ವಿಜಸಂಕುಳಭಾಸಿತಾನನಂ॥

---

ಪಾಠಾಂತರಗಳು—1 ನಾವ. ಕ ॥ ಗ ॥ ಸೂಕ್ತಿಸುಧಾರ್ಣವದಲ್ಲಿಯೂ ಆವ, ಎಂದು ಪಾಠವಿದೆ.
2. ಎರಡನೆಯ ಪದ್ಯದಿಂದ ೫ನೆಯ ಪದ್ಯದವರೆಗೂ ಕ ॥ ಗ ॥ ಪ್ರತಿಗಳಲ್ಲಿಲ್ಲ.

ಕಾನನದಂತಸೇವ್ಯಗುಣಸಂಗತವಾಗಿರದಂದು ದುರ್ಗಸಿಂ।
ಹಾನನಪದ್ಮದೊಳ್ ನೆಲಸಿ ನಿಲ್ಕೆ ಸರಸ್ವತಿ ಬಂದು ರಾಗದಿಂ॥

ಅತನುಶ್ರೀಜನ್ಮಗೇಹಂ ಕುಮುದವನಸಖಂ ತಾರಕಾನೀಕಲಕ್ಷ್ಮೀ।
ಪತಿ ಸದ್ಯೋಮಾರ್ಜಿತಾಂಧೀಜನದಶನನಿಭಚ್ಛಾಯನದ್ರೀಂದ್ರಪುತ್ರೀ॥
. . . . . . . . . . . . . . ॥[೫
. . . . ಗೆಮುಗತಿಮುದಮಂ ರೋಹಿಣೀಜೀವಿತೇಶಂ॥

ಶತಪತ್ರಾರಾತಿವೀರಪ್ರಥ. . . . . . . . ।
. . . . . . . . . (ತ್ರಳ)ದ್ವಾರಂಗುದಾರಂ॥
. . . . . . . . . . . . . . ।
. . . ರತಿವಲ್ಲಭಂ ಕುಡುಗೆ ಮತ್ಕಾವ್ಯಕ್ಕೆ ಸೌಭಾಗ್ಯಮಂ।
ಮಾಣಿಕ್ಯಜಾ।
. . . . . . . . . . . .
ಳಮರೀಚಿಪ್ರಚಯಾರ್ಜಿತಾಂಘ್ರಿಕಮಳಂ ತ್ರೈಲೋಕ್ಯನೇತ್ರಂ ತ್ರಿವೇ।
ದಮಯಂ ಧ್ವಸ್ತತಮಸ್ತಮಂ [ಪ್ರೌತ]ನಿಶಾಟಾಟೋಪನೊಲ್ದೀಗೆ ಗಾ।
ತಮಗೋತ್ರಾಂಬುಜಷಂಡಚಂಡಕಿರಣಂಗಾದಿತ್ಯನುತ್ಸಾಹಮಂ॥

ಉಗ್ರಭುಜಂಗಭೂಷಣನಶೇಷಸುರಾಸುರಭೂಸುರೋರುಕೂ।
ಡಾಗ್ರಮಣಿಪ್ರಭಾಪಟಲಪಾಟಲಿತೋತ್ತಮಪಾದಪೀಠನ॥ [೧೯
ವ್ಯಗ್ರಮನಂ ವಿನಾಯಕನಿಭಾನನನುಗ್ರತನೂಭವಂ ಗಣ್ಯೈ।
ಕಾಗ್ರಣಿ ಸಂಧಿವಿಗ್ರಹಿಗಣಾಗ್ರಣಿಗೀಗೆ ವಿಶುದ್ಧಬುದ್ಧಿಯುಂ॥

ಎನಗನುರಕ್ತೆಯಾಗೆ ದಿಗಧೀಶ್ವರರಾನತರಾಗೆ ಮಾಡುವೆಂ।
ಮನವೊಸೆದೀವೆನಗ್ರಮಹಿಷೀಪದಮಂ ನಿನಗೆಂದ ಪಾಂಬನಂ॥ [೨೦
ದ[ನುಜನನು]ಗ್ರಖಡ್ಗಮುಖದಿಂದಿರಿದೊತ್ತಿದ ದುರ್ಗಿ ದುರ್ಗಸಿಂ।
ಹನನತುಲಪ್ರತಾಪಪರನಂ ಪರಿರಕ್ಷಿಸುತಿರ್ಕನಾರತಂ॥

ಟೀಕು— ೨೦ ಪಾಂಬ—"ಪೀಠವಡೆದಂ" ಚತುರಾಸ್ಯ

ಲೋಕಾ. . . . . . . |

. . . . . . . ವೇದರನವದ್ಯವಚ ||

ಕ್ಷ್ಮೀ /ಕಾಂತಾದಯಿತರ್ ವಾ|

ಲ್ಮೀಕಿವ್ಯಾಸಾದಿಕವಿಗಳ್ಗೆಮಗಱಿವಂ || 10

. . . . . . ನಾಭೇಯಂ ಸುರಾವಮಾತ್ಯನಿಂ |

ದ್ರುಪದೀನಂದನನುದ್ಧವಂ ಮನು ವಿಶಾಲಾಕ್ಷೀಭದಂತಂ ಕುಜೇ ||

ರಸಜಾತಪ್ರಿಯಪುತ್ರರೆಂಬಿವರೆ ನೀತಿಜ್ಯೋತಿನಿರ್ಣೀತಿಯಂ |

ಮನದೊಳ್ ಮಾಱ್ಕಿ ತೆರಳ್ದ ತೂಳ್ದ ಕಳೆಗಜ್ಞಾನಾಂಧಕಧ್ವಾಂತಮಂ||

ತುಂಗತರಾಭಿಚಾರಗುರುವಜ್ರದಿನುದ್ಧತನಂದನಾಂಸಶೈ |

ಲಂಗಳ ಪಕ್ಷಸಂತತಿಗಳಂ ಸ್ವರುವಿಂ ತಱಿದಿಕ್ಕಿ ಚಂದ್ರಗು ||

ಪ್ತಂಗೆ ಸಮಸ್ತಧಾರಿಣಿಯನಿತ್ತು ನೆಗಱ್ತೆಯನಾಂತ ವಿಷ್ಣುಗು |

ಪ್ತಂಗೆಣೆಯಾರೊ ನೀತಿವಿದರರ್ಣವವೇಷ್ಟಿತವಿಶ್ವಧಾತ್ರಿಯೊಳ್|| 12

ನೆಗಱ್ದ ಗುಣಾಢ್ಯರ ಮೃದುಮಧು |

ರಗಭೀರ[ತರ]ಪ್ರಸನ್ನಕವಿತಾಗುಣಮಂ ||

ಪೊಗೞಲ್ಕಜನುಂ ನೆಱಿಯಂ |

ಜಗದೊಳಗಿನ್ನುಱಿದ ಜಡರದೇನಱಿದಪರೋ || 13

ವರವಾಗ್ವಿಲಾಸದಿಂದಂ |

ಸುರವಂದಿತೆಯೆನಿಪ ಗಂಗೆಯಂ ಮೆಚ್ಚಿಸಿ ಸಾಂ||

ದರರತ್ನಕಟಕಮಂ ತಂ |

ದರಾರೋ ವರರುಚಿಪ್ರೊಲಾದಿಕಪಿವರರಾರುಂ|| 14

ಪರಮಕವೀಂದ್ರವೃಂದವಿನುತೋತ್ತಮವಾಣಿ ಸರಸ್ವತೀಸ್ವಯಂ |

ವರವರನಬ್ಜಜೋಪಮನಪಾಸ್ತರಜಂ ನಿಜವಾಗ್ವಿಲಾಸಭಾ ||

ಸುರತರಚಂದ್ರಿಕಾದ್ಯುತಿನಿರಸ್ತಸಮಸ್ತಜಗತ್ತಮಂ ಕಳಾ।
ಪರಿಣತನೆಂದೊಡುನ್ನತಿಯನೇವೊಗೞ್ವೆಂ* ಕವಿಕಾಳಿದಾಸನಾ ॥ 15

ಕವಿರಾಜಶಿರಶ್ಶೇಖರ।
ನವನೀ[ಧವ]ಚಕ್ರವರ್ತಿಹರ್ಷನರೇಂದ್ರ ॥
ಪ್ರವರಂ ಕುಡೆ ಪಡೆದಂ ವ।
ಶ್ಯವಾಣಿ[ಕವಿ]ಚಕ್ರವರ್ತಿ[ಬಿರುದಂ] ಬಾಣಂ ॥ 16

ಸಕಲಸು[ರಾಧೀಶ್ವರ]ಮ।
ಸ್ತಕಸ್ಥಿತಕ್ರಮನನರ್ಕನಂ ಮೆಚ್ಚಿಸಿದಂ ॥
ಸುಕವಿತ್ವವಿಳಾಸದಿನೇಂ।
ಸುಕವಿಯೊ ಕವಿಮುಖ್ಯರೊಳ್ ಮಯೂರಕವೀಂದ್ರಂ ॥ 17

ಅನುಪಮಕವಿವ್ರಜಂ ಜೇ।
ಯೆನೆ ರಾಘವಪಾಂಡವೀಯಮಂ ಪೇೞ್ದ ಯಶೋ ॥
ವನಿತಾಧೀಶ್ವರನಾದಂ।
ಧನಂಜಯಮಂ ವಾಗ್ವಧೂಪ್ರಿಯಂ ಕೇವಳನೇ ॥ 18

ಮಾಮನಕುಮಾರನುದ್ಭಟ।
ಭೀಮಂ ಭವಭೂತಿಭಾರವೀಭಟ್ಟವಚ ॥
ಶ್ರೀಮಾಘರಾಜಶೇಖರ।
ಕಾಮಂದಕರೆಸೆವ ಸೂಕ್ತಿಯಂ ಮೆಚ್ಚದರಾರ್ ॥ 19

ವಿಪುಲಕವಿತಾಗುಣಾ[ಪಾ]
ಸ್ತಪುರಾಣಕವೀಂದ್ರನೆನಿಪ ಮಹಿಮೆಯಿನಿಂದ್ರ ॥
ದ್ವಿಪದುಗ್ಧವಾರ್ಧಿಡಿಂಡೀ।
ರಪಿಂಡಪಾಂಡುರಯಶಕ್ಕೆ ದಂಡಿಯೆ ನೋಂತಂ ॥ 20

ಶ್ರೀವಿಜಯರ ಕವಿಮಾರ್ಗಂ
ಭಾವಿಪ ಕವಿಜನದ ಮನಕೆ ಕನ್ನಡಿಯುಂ ಕೈ ॥
ದೀವಿಗೆಯುಮಾದುವದಱಿಂ ।
ಶ್ರೀವಿಜಯರ್ ದೇವರವರನೇವಣ್ಣಿಪುದೋ ॥ 21
ಪರಮಕವೀಶ್ವರಚೇತೋ ।
ಹರಮೆಂಬಿನಮೆಸೆವ ಮಾಳವೀಮಾಧವಮಂ ॥
ವಿರಚಿಸಿದ ಕನ್ನಮಯ್ಯಂ ।
ಬರ[1]ಮಾಗಂ[1] ಸುಕವಿ ಬಗೆವೊಡಿನ್ನುಂ ಮುನ್ನುಂ ॥ 22
ಪೊಸತೆನಿಸಿ ದೇಸೆಯಿಂ ನವ ।
ರಸವೆಸೆಯುಲ್ಕೊಳ್ಪವೆತ್ತ ಮಾರ್ಗದಿನಿಳೆಗೇ ॥
ನೆಸೆದುವೊ ಸುಕವಿಗಳೆನೆ ನೆಗ ।
*ೞ್ದ ಸಗನ ಮನಸಿಜನ ಚಂದ್ರ[ಭಟ್ಟನ ನುಡಿಗಳ್] ॥ 23
. . . . . ।
. . . . . . ಪಡೆದಂ ವಿಶ್ವಾ ॥
ವನಿಪಾಲಂ ಕೃಷ್ಣನರೇಂ ।
ದ್ರನೀಯೆ [ಕವಿ]ಚಕ್ರವರ್ತಿವೆಸರಂ ಪೊನ್ನಂ ॥ 24
ಮಾರ್ಗದ್ವಯಪರಿಣತಕವಿ ।
ಮಾರ್ಗಮನೋಹಾರಿಯಾದುದೆಂದಖಿಲಬುಧರ್ ॥
ನಿರ್ಗರ್ವರಾಗಿ ಪಂಪನ ।
ಗೀರ್ಗುಂಫದ ಪೆಂಪನಾಗಳುಂ ಬಣ್ಣಿಸುವರ್ ॥ 25
ತ್ರಿಜಗನ್ನುತವಾಗ್ವಿಭವದಿ ।
ನಜಂಗೆ ನೂರ್ಮಡಿಯೆನಿಪ್ಪ ಪೆಂಪಂ ತಳೆದಂ ॥

ಪಾ—1. ಪೂದಂ. ಜ ॥

ವಿಜಿತಾರಿದಂಡನಾಯಕ ।
ಗಜಾಂಕುಶಂ ಕುಶಲವಾಂಛಿತಪ್ರಿಯಶೌರ್ಯಂ ॥ 26
ಅನತಿಶಯನೀತಿಮಾರ್ಗನ ।
ನನೂನಕವಿತಾವಿಲಾಸನಂ ಭೂತಳದೊಳ್ ॥
ಮನುಗಂ ವ್ಯಾಸಂಗಂ ಮಿಗಿ । [೫
ಲೆನಿಸಿದ ಕವಿತಾವಿಲಾಸನಂ ಪೊಗೞ್ದರಾರ್ ॥ 27
ಕವಿಗಮಕಿವಾದಿವಾಗ್ಮಿ ।
ಪ್ರವರಂ ಶ್ರೀಮಾದಿರಾಜಮುನಿಪುಂಗವರು ॥
ತ್ಸವದಿಂ ತಿರ್ದಿದರೆನೆ ಭೂ ।
ಭುವನದೊಳದನ್ಯೆದೆ ಕೊಂಡುಕೊನೆಯುದರೊಳರೇ ॥ 28 [೧೦

ಧರೆಯಂ ದ್ವಾಪರದೊಳ್ ವದಾನ್ಯತಿಲಕಂ ಲೋಕೋತ್ತರಂ ಮುನ್ನಭಾ।
ಸ್ಕರಪುತ್ರಂ ನಿಜದಾನದಿಂ ತಣಿಪಿದಂತೀರೇೞ್ಮಹೀಭಾಗಮಂ ॥
ದೊರೆವೆತ್ತುತ್ತಮಭೋಗದೊಳ್ತಣಿಪಿದಂಭೂಪೋತ್ತಮಂ ಸಂದಭಾ।
ಸ್ಕರಪುತ್ರಂ ಕಲಿಕಾಲಕರ್ಣವೆಸರಂ ಭೂವಿಶ್ರುತಂಮಾಡಿದಂ ॥ 29

ದಶದಿಙ್ಮಂಡಲವರ್ತಿಕೀರ್ತಿ ಶರಣಾಯಾತಾವನೀಲೋಕಪಾ। [೧೫
ಲಶರಣ್ಯಂ. . . . .ತಿರ್ಪತಿ. . .ಸಮಸ್ತೋರ್ವೀತ. .ಚಕ್ರವ॥
ರ್ತಿಶಿರಶ್ಶೇಖರ. . . . . . . . . . . ।
. . .ಶ್ರೀಜಗದೇಕಮಲ್ಲನೆಸೆದಂ ವಿಶ್ವಂಭರಾಚಕ್ರದೊಳ್ ॥ 30

ಸ್ವಸ್ತಿಶ್ರೀವನಿತಾಸ್ವಯಂವರವರಂ ಚಾಳುಕ್ಯರಾಜಾನ್ವಯ ।
ಪ್ರಸ್ತುತ್ಯೋದಯಶೈಲಭಾನು ವಿನತಾಶೇಷದ್ವಿಷನ್ಮಸ್ತಕ॥ [೨೦
ನ್ಯಸ್ತಾಂಘ್ರಿದ್ವಯನಬ್ಧಿವೇಷ್ಟಿತಮಹೀರಕ್ಷಾಕ್ಷಮೋತ್ತುಂಗಬಾ ।
ಹುಸ್ತಂಭಂ ನೃಪಚಕ್ರವರ್ತಿತಿಲಕಂ ಶ್ರೀಕೀರ್ತಿವಿದ್ಯಾಧರಂ ॥ 31

ಜಯಲಕ್ಷ್ಮೀಪತಿ ಸತ್ಯಾ।
ಶ್ರಯನಪ್ರತಿಮಪ್ರತಾಪನಂಗಜರೂಪಂ॥
ಜಯಸಿಂಹನೃಪಂ ಸತ್ಯಾ।
ಶ್ರಯಕುಲತಿಲಕಂ ಸಮಸ್ತಭುವನಾಧಾರಂ ॥32

ದಿಗಿಭವ್ರಾತದೊಳಿಂದ್ರದಂತಿ ಸುರರೊಳ್ ಶಂಬಾಯುಧಂ ಚಕ್ರವ।
ರ್ತಿಗಳೊಳ್ ಶ್ರೀಜಗದೇಕಮಲ್ಲಮಹಿಪಂ ಶೈಲಂಗಳೊಳ್ ಮೇರು ಪ॥
ನ್ನಗರೊಳ್ ವಾಸುಕಿ ದಂಡನಾಯಕರೊಳಂ ಶ್ರೀಗಂಡಭೂರಿಶ್ರಯಂ।
ಮಿಗಿಲೆಂದಾರ್ ಪೊಗೞರ್ಪಯೋನಿಧಿಪರೀತಾಶೇಷಭೂಭಾಗದೊಳ್॥

ಸಕಳೋರ್ವೀಶ್ವರದಂಡನಾಯಕವಿನೂತಾಂಘ್ರಿದ್ವಯಂ ದಂಡನಾ।
ಯಕವೀರಾಗ್ರಣಿ ದಂಡನಾಯಕಚಮೂಚಕ್ರಾಯುಧಂ ದಂಡನಾ॥ [೧೦
ಯಕತೇಜೋನಿಧಿ ದಂಡನಾಯಕನಿಕಾಯಾಧೀಶ್ವರಂ ದಂಡನಾ।
ಯಕಚೂಡಾಮಣಿಯೆಂದು ಬಣ್ಣಿಸದರಾರ್ ಶ್ರೀಸಿಂಹಸನ್ನಾಹನಂ ॥34

ತಚ್ಚರಣಕಮಲಭೃಂಗಂ।
ಸಚ್ಚರಿತಂ ಶೌರ್ಯ........ಕುಲೋದ॥
ಸ್ವಚ್ಛಂದ್ರನಪಗತಾರಿಕು। [೧೫
ಭೃಚ್ಚಕ್ರಂ ಚಕ್ರವರ್ತಿದಂಡಾಧೀಶಂ ॥35

ಧರಣೀಚಕ್ರದೊಳುಳ್ಳ ಪಾರ್ಥಿವರನಿರ್ಪತ್ತೊಂದು ಸೂೞ್ ಕೊಂದು
ಭೀ। ಕರಕೋಪಾನಳನಂ ತದೀಯಯುವತೀನೇತ್ರಾಂಬುಧಾರಾಪರಂ॥
ಪರೆಯಿಂ ಮೞ್ಗಿ [ಸಿ ಗೆಲ್ದಮಂ] ತಳೆದ ರಾಮಂಗಗ್ಗಳಂ ವಿಕ್ರಮಾ।
ಭರಣಂ ವಿಕ್ರಮದಿಂ ತ್ರಿವಿಕ್ರಮನಿಭಂ ಕೋದಂಡರಾಮಾಧಿಪಂ॥36 [೨೦

ಚತುರಂಬುರಾಶಿವಲಯ।
ಕ್ಷಿತಿರಕ್ಷಣದಕ್ಷತೀಕ್ಷ್ಣಕೌಕ್ಷೇಯಕಮಂ॥

ಡಿತಬಾಹುರಾಹುಕಬಳೀ |
ಕೃತಚಕೋಳೀಳೀವಾಳಕಾಮುಖೇಂದುವಿಳಾಸಂ ||37

ಬುಧವೈತಾಳಕಗಾಯಕಾರ್ಥಿನಟವೀಣಾವಾದಭೂದೇವಮಾ |
ಗಧವಂದಿಪ್ರಕರಾರ್ಥಿಕಲ್ಪಮಹಿಜಂ ದೋರ್ಗರ್ವದಿಂದಾಂತ ವೈ ||
ರಿಧರಾಧೀಶಬಲಕ್ಕೆ ಗಾಂಡಿವಧರಂ ಗಂಗಾಧರಂ ತುಂಗಶ |
ಕ್ತಿಧರಂ ವಜ್ರಧರಂ ಧರಾಧರಧರಂ ಶ್ರೀಕೀರ್ತಿವಿದ್ಯಾಧರಂ ||38

ಎನೆ ನೆಗೞ್ದ* ಕುಮಾರಸ್ವಾ |
ಮಿ ನೆಚ್ಚಿ ಮುದದಿಂದಮೀಯೆ ಪಡೆದಂ ಚಕ್ರೀ ||
ಶನ ಸಂಧಿವಿಗ್ರಹಾಸ್ಪದ |
ಮನಾತ್ಮಸತ್ಕೃತಸುಮಂತ್ರವರ್ಗಂ ದುರ್ಗಂ ||39

ಆತನ ನೂತನಗುಣಸಂ |
ಘಾತಾತ್ಮಜಜನ್ಮಭೂಮಿ ಕರ್ಣಾಟಕಧಾ ||
ತ್ರೀತಿಲಕಮಖಿಲಜನವಿ |
ಖ್ಯಾತಂ ಕಿಸುಕಾಡ ನಾಡು ಸೊಗಯಿಸಿ ತೋರ್ಕುಂ ||40

ಆನಾಡೊಳಗ್ರಹಾರಂ |
ಭೂನಾರೀಕುಚತಟಾಗ್ರಹಾರಂ ವಿಪುಳ ||
ಶ್ರೀನಿಲಯಮೆನಿಸಿ ಸೈಯ್ಯಡಿ |
ನಾನಾವಸ್ತೂತ್ಕರ. . . . . . . ||41

ಪರಮಾನನ್ದಮನೀವ ದೇವಭವನಶ್ರೀಲೀಲೆಯಿಂದಂ ಧರಾ |
ಮರರುತ್ಸಾಹದೆ ಮಾಡುತಿರ್ಪ ಮಖಸಂದೋಹಂಗಳಿಂದಂ ಮುನೀ ||
ಶ್ವರರಿಂದಂ ನುತಸತ್ಕವಿಪ್ರವರವಿದ್ವದ್ವೃಂದದಿಂದಂ ಮನೋ |
ಹರಸೌಂದರ್ಯವಿಭಾಸಿ ಸೈಯಡಿ ಕರಂ ರಯ್ಯಂ ಮಹೀಭಾಗದೊಳ್ ||

ವಚನ॥ ಆಬ್ರಹ್ಮೋದಯದೊಳ್ ಮನ್ವಾದಿಪುರಾಣಮುನಿಗಣಪ್ರಣೀತಶ್ರುತಿವಿಹಿತವಿಶುದ್ಧಮಾರ್ಗನುಂ, ಪ್ರಣೀತಾತ್ಮೀಯಬಂಧುವರ್ಗನುಂ, ನಿತ್ಯಹೋಮಾಧ್ಯಯನಾನೇಕಯಾಗಾವಭೃಥಸ್ನಾನಪವಿತ್ರಗಾತ್ರನುಂ, ಸುಜನೈಕಮಿತ್ರನುಂ, ಸಕಲವೇದಾಧ್ಯಯನಸಮುಚ್ಚರಪವಿತ್ರಾನನನುಂ, ಸಂತರ್ಪಿತಾತಿಥಿಪಿತೃದೇವತಾದ್ವಿಜನ್ಮಾನನುಂ, ಭಗವನ್ನಾರಾಯಣಚರಣಾಂಬುಜಸ್ಮರಣಪರಿಣತಾಂತಃಕರಣನುಂ, ನಿಜಗೋತ್ರಶತಪತ್ರಸಹಸ್ರಕಿರಣನುಂ, ತರ್ಕವ್ಯಾಕರಣಕಾವ್ಯನಾಟಕಭರತವಾತ್ಸ್ಯಾಯನಾದ್ಯಶೇಷವಿದ್ಯಾಸಮುದ್ರತರಣಗುಣೈಕಪುಣ್ಯನುಂ, ಧರಾಮರಾಗ್ರಗಣ್ಯನುಮಾಗಿ॥

ವಿನಯೈಕಜನ್ಮಗೃಹಮಾ।
ಳ್ತನದಾಸ್ಪದಮೊಳ್ಪಿನಾಱಿಮಾರ್ಪಿನ ಕಣಿಯೆಂ॥
ದನುನಯದಿಂ ಕೂರ್ತು ಜಗ।
ಜ್ಜನಜಾಲಂ ಪೊಗೞ್ತೆ ದುರ್ಗಮಯ್ಯಂ ನೆಗೞ್ದಂ*॥ 43

ಆವಿಪ್ರೋತ್ತಮನ ಮಗಂ।
ಭೂವಿಶ್ರುತನೀಶ್ವರಾರ್ಯನೆಂಬೊಳ್ಪೆಸರಿಂ॥
ದೇವದ್ವಿಜಗುರುಜನಪದ।
ಸೇವಾನಿರತಂ ಪರೋಪಕಾರಾಭಿರತಂ॥ 44

ಶರಣಾಗತರಂ ರಕ್ಷಿಸೆ।
ಪರೋಪಕಾರಾರ್ಥಮರ್ಥಮಂ ತವಿಸೆ ದಿಗಂ॥
ತರಮಂ ನಿಮಿರ್ಚೆ ಜಸದಿಂ।
ಪುರುಷೋತ್ತಮನೀಶ್ವರಾರ್ಯನಂ ತೋಱಿಸಿದಂ॥ 45

ಆತನ ಸತಿ ವಿಶದಗುಣ।
ವ್ರಾತಾನ್ವಿತೆ ಧರ್ಮಮೂರ್ತಿ ಪತಿಭಕ್ತಿಯೊಳಾ॥

ಸೀತೆಗರುಂಧತಿಗೆ ಕುಭೃ।
ಜ್ಜಾತೆಗೆ ದೊರೆ ರೇವಕಬ್ಬೆಯೆಂಬಳ್ ಪೆಸರಿಂ ॥ 46

ಆರೇವಾಂಬಿಕೆಗಂ ದ್ವಿಜೋತ್ತಮನೆನಲ್ ಸಂದೀಶ್ವರಾರ್ಯಂಗಮು।
ರ್ವೀರಾಮಾಧಿಪವಲ್ಲಭಂ ಬುಧಜನಾನಂದಪ್ರದಂ ಸ್ವಾನ್ವಯು ॥
ಕ್ಷೀರೋದಾಮೃತರೋಚಿ ಪುಟ್ಟಿ ನೆಗಳ್ದಿಂ* ಶ್ರೀದುರ್ಗಸಿಂಹಂ ಗುಣಾ।
ಧಾರಂ ಧೀರನುದಾರಚಾರುಚರಿತಂ ವಿದ್ವಜ್ಜನೈಕಾಶ್ರಯಂ ॥ 47

ಜನಕಂ ಕಮ್ಮೆಕುಲಪ್ರದೀಪನವನೀದೇವಾನ್ವಯಾಂಭೋಜಿನೀ।
ದಿನಪಂ ಗೌತಮಗೋತ್ರಮಂಡನನಿಳಾಲೋಕಸ್ತುತಂ ದಾನಿ ಪಾ ॥
ಗ್ವನಿತಾಧೀಶ್ವರನೂರ್ಜಿತಂ ಜನನಿ ಶುದ್ಧಾಚಾರೆ ಸದ್ಧರ್ಮಮೂ।
ರ್ತಿನಿರೇವಾಂಬಿಕೆಯೆಂದೊಡಾರ್ ಪೊಗಬಿರೀದುರ್ಗಾನ್ವಯಖ್ಯಾತಿಯಂ

ಅಲಘುತರಪ್ರಗುಣದಶಾ।
ಕಲಿತಂ ಜ್ಯೋತಿರ್ವಿಶೇಷದಿಂ ಪರಹಿತಮಂ ॥
ವಿಲಸತ್ಕಾಂತಿ ಸುಪುತ್ರಃ।
ಕುಲದೀಪಕ [ಎನಿಸಿ ದುರ್ಗಸಿಂಹಂ] ನೆಗಳ್ದಿಂ* ॥ 49

ಧರೆ ಬಣ್ಣಿಸೆ ಸೈಯಡಿಯೊಳ್। [೧೫
ಪೊರೆದಾಳ್ದನ ಸಕಲಚಕ್ರವರ್ತಿಯ ಬೆಸದಿಂ ॥
ಹರಿಹರಭವನಂಗಳನ।
ಚ್ಚರಿಯೆನೆ ಮಾಡಿಸಿದನೇಂ ಕೃತಾರ್ಥನೊ ಸಿಂಹಂ ॥ 50

ಅನವದ್ಯಾಚರಣಕ್ಕುದಾಹರಣಮುದ್ಯತ್ಕೀರ್ತಿಗಾಧಾರಮಾ।
ಳ್ದನ ಕಾರ್ಯಕ್ಕೆ ಮರುತ್ತನೂಜನೆನಿಸಿರ್ದಾತ್ಮೀಯವಂಶಕ್ಕೆ ಮಂ ॥ [೨೦
ಡನರತ್ನಂ ಕಟಕಾರ್ಣವಪ್ರತರಣಪ್ರೋದ್ಭಾಸಿ ಸಿದ್ಧೇಷ್ಟಶಿ।
ಷ್ಟನಿಕಾಯಕ್ಕೆ ಪವಿತ್ರಮೆಂದು ಪೊಗಳ್ಗುಂ* ವಿದ್ವಜ್ಜನಂ ದುರ್ಗನಂ ॥ 51

ವಿನಯಾಧೀನನಹೀನಂ ।
ವಿನುತಕುಲೀನಂ ನಿಜೇಶಕಾರ್ಯಧುರೀಣಂ ॥
ಮನುವಿಹಿತಧರ್ಮಮಾರ್ಗಾ । [೯
ಧ್ವನೀನನಿವನೆಂದು [1][ದುರ್ಗನೆನಿಸಿ][1] ದನಲ್ತೇ ॥ 52

ಅಱಿವಿಂ[2]ಗಾಗರ[2]ಮೊಳ್ಗುಣಕ್ಕೆ ಕಣಿ ಶೌಚಕ್ಕಾಸ್ಪದಂ ಜಾಣ್ಮಿನ ।
ಕ್ಕೆಱೆವಟ್ಟೊಳ್ಪಡಿ[3]ಗಾಣ್ಮ[3]ನಾಯತಿಗಡರ್ಪಾರ್ಪಿಂಗೆ ಲೀಲಾಗೃಹಂ ॥
ಗುಱಿ ಧರ್ಮಕ್ಕೆ ವಿನೀತವೃತ್ತಿಗೆ ತವರ್ ಸತ್ಯಕ್ಕಧಿಷ್ಠಾನಮೆಂ ।
ದಱಿತಂ ಕೈಮಿಗೆ ಕೂರ್ತು ಕೀರ್ತಿಸುವುದುರ್ವೀಮಂಡಲಂ ದುರ್ಗನಾ ॥

ನಿಶ್ಚಿತಮನರಲ್ಲದರಂ ।
ದುಶ್ಚರಿತರನೆಯ್ದೆ ಪಡೆದ ದೋಷಕ್ಕಂ ಪ್ರಾ ॥ [೧೦
ಯಶ್ಚಿತ್ತಮೆಂದು ಸಕಲವಿ ।
ಪಶ್ಚಿನ್ನಿಧಿಯೆನಿಪ ದುರ್ಗನಂ ಬಿದಿ ಪಡೆದಂ ॥ 54

ವಿನಯಾಂಭೋನಿಧಿ ಶಿಷ್ಟಕಲ್ಪಮಹಿಜಂ ಸತ್ಯವ್ರತಂ ವಿಪ್ರವಂ ।
ಶನಭೋಮಂಡನಚಂಡಭಾನು ವಿಲಸದ್ವಾಕ್ಛ್ರೀಮನೋರಾಮನೆಂ ॥
ದೆನಸುಂ ಧಾರಿಣಿ ಬಣ್ಣಿಕುಂ ನಿಜಯಶೋವಲ್ಲೀವೃತಾಂಭೋ[4]ದ[4]ಮಾ
ರ್ಗನನಾರಾಧಿತಭರ್ಗನಂ ಭೃತವಿಪಶ್ಚಿದ್ವರ್ಗನಂ ದುರ್ಗನಂ ॥ 55

ಜಗದೊಳ್ ಪತಿಹಿತದೆಡೆಯೊಳ್ ।
ನೆಗೞ್ದಿ*ನಜನಿನೇಕದಂತನಿಂ ಪವನಜನಿಂ ॥
ಖಗರಾಜನಿನೀದುರ್ಗಂ ।
ದ್ವಿಗುಣಂ ತ್ರಿಗುಣಂ ಚತುರ್ಗುಣಂ ಪಂಚಗುಣಂ ॥ 56

ಟಿಪ್ಪಣಿ—೬. ಎಱೆವಟ್ಟು—"ದಿಣ್ಣೆ" ಚತುರಾಸ್ಯ. ಅಡರ್ಪು—ಆಶ್ರಯ.

ಪಾ— 1. ದುದುಯುಗನೆಸೆ. ಖ ॥ 2. ಗಾಕರ. ಛ ॥ 3. ಗಾಳ್ಮ. ಕ ॥ ಗ ॥ 4. ಧಿ. ಕ ॥ ಖ ॥

ಪರಮಾತ್ಮಂ ಪರಮೇಶ್ವರಂ [1]ಮುರಹರಂ ದೈವಂ[1] ಮಹಾಯೋಗಿಗಳ್ ।
ಗುರುಗಳ್ ಶಂಕರಭಟ್ಟರೈದೆ ಪೊರೆದಂ [2]ಶ್ರೀಚೋಳಕಾಳಾನಲಂ[2] ॥
ಧರಣೀಶಾಗ್ರಣಿ ಚಕ್ರವರ್ತಿತಿಲಕಂ ಪ್ರೋನ್ಮತ್ತವೈರೀಭಕೇ ।
ಸರಿ[3]ಸಿಂಗಂ[3] ಪತಿಯೆಂದೊಡುನ್ನತಿಯನಿನ್ನೇವಣ್ಣಿಪೆಂ ದುರ್ಗನಾ ॥

ಎಂದು ಜಗಜ್ಜನ[4]ಮಧಿಕಾ[4] । [೫
ನಂದಂಬೆರಸೆಯ್ದೆ ಕೀರ್ತಿಸುತ್ತಿರೆ ವಿದ್ವ ॥
ದ್ಬೃಂದಂ ಬಗೆಗೊಂಡಾಗ್ರಹ ।
ದಿಂದಂ ಪೇೞಿಲ್ಕವೇೞೆ ತದನುಗ್ರಹದಿಂ ॥58

ಪರಮಶ್ರೀಮನ್ಮಹಾಸೌಂದರರಜತಗಿರೀಂದ್ರಾಗ್ರದೊಳ್ ರಾಗದಿಂದಂ ।
ಗಿರಿಜಾಧೀಶಂ ಶಿವಂ ಶಂಕರನಮರನದೀವಲ್ಲಭಂ ದೇವದೇವಂ ॥ [೧೦
ವರದಂ [5]ಸಂಸಿದ್ಧಮಾದೀಕಥೆಯನಱಪು[5] ವೊಂದಂದದಿಂದರ್ಧನಾರೀ ।
ಶ್ವರನಾಗಿರ್ದಂಸಮಸ್ತಾಮರಮಣಿಮಕುಟೋದ್ಘೃಷ್ಟಪಾದಾರವಿಂದಂ॥

ವ॥ ಅಂತಿರ್ದ ಪರಮೇಶ್ವರಂಗೆ ಗಿರಿರಾಜತನೂಜೆ ಕರಕಮಲಂಗಳಂ ಮುಗಿದು,—ದೇವಾ, ನೀವೆನಗೊಂದಪೂರ್ವಮಪ್ಪ ಕಥೆಯಂ ಪೇೞಿಲ್ವೇೞ್ಪಿದೆನೆ; ಹರಂ ದರಹಸಿತವದನಾರವಿಂದನಾಗಿ ಪಾರ್ವತಿಗಪೂರ್ವಮಪ್ಪ ಕಥೆಗಳಂ ಪೇೞುತ್ತಿರಲಾಕಥಾಗೋಷ್ಠಿಯೊಳ್ ಪುಷ್ಪದಂತನೆಂಬಂ [6]ಗಣಪ್ರಧಾನನಿರ್ದ[6]ಲ್ಲಮಂ ಕೇಳ್ದಾತನೇನಾನುಮೊಂದುಕಾರಣದಿಂ [7]ಮಾನವಲೋಕದೊಳ್[7] ಪುಟ್ಟಿ ಗುಣಾಢ್ಯನೆಂಬ ಸತ್ಕವಿಯಾಗಿ [8]ಶಾಲಿವಾಹನನೆಂಬ ಚಕ್ರವರ್ತಿಯ ಕವಿಯಾಗಿರ್ದು[8] ಹರಂ ಗಿರಿಸುತೆಗೆ ಪೇ

ಟ—೭ ಆಗ್ರಹ— ಇಲ್ಲಿ ಅನುಗ್ರಹ.

ಪಾ.— 1. ಪುರಹರಂದೇವಂ. ಖ ॥ 2. ದಾರಿದ್ರ್ಯವಿದ್ರಾವಣಂ. ಕ ॥ ಗ ॥
3. ಸಿಂಹಂ. ಕ ॥ ಖ ॥ 4. ಮುದಿತಾ. ಗ ॥ 5. ಸಂಸಾರಸ್ಥಿತಿಯನಱುಪು. ಖ ॥
6. ಕವಿಧಾಳಲೋಚನನನೆ. ಕ ॥ ಗ ॥ 7. ಮನುಷ್ಯಯೋನಿಯೊಳ್. ಗ ॥ ಖ ॥
8. ಸಾಳವಾಹನಚಕ್ರವರ್ತಿಗಾಳಾಗಿರ್ದು. ಖ ॥

ೞಿನ್ದಾಕಥೆಗಳಂ ಪೈಶಾಚಕಭಾಷೆಯೊಳ್ ಬೃಹತ್ಕಥೆಗಳಂಮಾಡಿ ಪೇೞ್ದೊಡವಂ ವಸುಭಾಗಭಟ್ಟಂ ಕೇಳ್ದಾಕಥಾಸಮುದ್ರದೊಳ್ ಪಂಚರತ್ನಮಪ್ಪೈದು ಕಥೆಗಳನಾಯ್ದುಕೊಂಡು ಪಂಚತಂತ್ರಮೆಂದು ಪೆಸರಿಟ್ಟು ಸಮಸ್ತಜಗಜ್ಜನೋಪಕಾರಾರ್ಥಂ ಪೇೞ್ದಿನದಱಿಂ,

ವಸುಭಾಗಭಟ್ಟಕೃತಿಯಂ । [೬
ವಸುಧಾಧಿಪಹಿತಮನಖಿಲ[1]ವಿಬುಧ[1]ಸ್ತುತಮಂ ॥
ಪೊಸತಾಗಿರೆ ವಿರಚಿಸುವೆಂ ।
ವಸುಮತಿಯೊಳ್ ಪಂಚತಂತ್ರಮಂ ಕನ್ನಡದಿಂ ॥ [೭

ವ॥ ಆಕಥಾಪ್ರಪಂಚಮೆಂತೆಂದೊಡೆ:—ಅನೇಕಕರಿಮಕರತಿಮಿತಿಮಿಂಗಿಲಕುಲಕ್ಷೋಭಜನಿತ ಭಂಗುರತರತ್ತರಂಗಸಂಘಾತ ಸಂಗತಮಪ್ಪ ಜಲನಿಧಿವಳಯದಿಂ ಪರಿಕ್ಷಿಪ್ತಮಾಗಿ [2]ಸೊಗ[2]ಯಿಸುವ ಜಂಬೂದ್ವೀಪದ ಭಾರತವರ್ಷದ ಸಕಲಜಗತೀಜನಸ್ತುತ್ಯದಾಕ್ಷಿಣಾತ್ಯಮೆಂಬ ಜನಪದಮುಂಟು. ಅಲ್ಲಿ, †

ಮಹನೀಯಂ ಸುರಸದ್ಮಪದ್ಮವನಷಂಡಂ ರಮ್ಯಹರ್ಮ್ಯಾವಳೀ ।
ಗೃಹರತ್ನದ್ಯುತಿ[3]ಭಾಸಿತಂ[3]ಫಲಭರಾಕ್ರಾಂತೋನ್ನತೋದ್ಯಾನಭೂ॥
ರುಹಸಂಕೀರ್ಣವಿರಾಜಿತಂ ಬಹುಳವಾಪೀಕೂಪಶೋಭಾವಹಂ। [೧೮
ಮಹದಾನಂದಕರಂ ಕರಂ ಸೊಗಯಿಕುಂ ಸೌರೂಪ್ಯಮೆಂಬಾಪುರಂ ॥

---

ಪಾ.— 1. ಭ.ವನ. ಗ ॥ 2. ಪೊಸ. ಖ ॥ 3. ಕಾಸಿತಂ. ಖ ॥

† ಮಹನೀಯಂ ಸುರಸದ್ಮಸೌಂದರಪತಾಕಾನೀಕಸದ್ವಿಭ್ರಮಾ।
ವಹಮುದ್ಯಾನವನಾವಳೀವಿಳಸಿತಂ ಸೌವರ್ಣತಾಳೀಪ್ರಯೋ॥
ಪಹಿತಂ ಪುಷ್ಕರಣೀತಟಾಕವರವಂದಿಪ್ರಾವೃತಂ ನಾಮದಿಂ।
ಮಹಿಳಾರೂಪ್ಯಮುಪೇತರೂಪ್ಯಗೃಹಸೌರೂಪ್ಯಂ ಪುರಂ ರಂಜಿಕುಂ ॥
ಎಂದು ಖ ॥ ಪ್ರತಿಯಲ್ಲಿ ಮಾತ್ರವಿದೆ.

ಅವಱ ಮಣಿಭವನದೀಪ್ತಿಗ ।
ಳೊದವಿ ದಿವಂಬರೆಗಮಿಂದ್ರಚಾಪಶ್ರೀಯಂ ॥
ಪುದಿದೊಳಕೊಂಡಿರ್ಪುವಕಾ ।
ಲದೊಳಂ ಸೌಂದರವಿಚಿತ್ರವರ್ಣಯುತಂಗಳ್ ॥ 62

ಅನುಪಮಮಪ್ಪ ವಿಭ್ರಮದೊಳೊಂದಿದ ಪುರ್ಬುಗಳೆಂಬ ಬಿಲ್ಗಳಿಂ ।
ಘನಕುಚಮಂಡಳಾಗ್ರದಿನನೂನಲಸದ್ಭುಜಪಾಶದಿಂ ವಿಳೋ ॥
ಚನಶರಜಾಳದಿಂ ಜಘನಚಕ್ರದಿನಲ್ಲಿಯ ಸೌಂದರೀಜನಂ ।
ಮನಸಿಜಭೂಮಿಭೃಜ್ಜಯನಶಾಲೆಯಲೀಲೆಯಿನೊಪ್ಪಿ ತೋಱುಗುಂ ॥

ಎಸೆವ ಬಹುರತ್ನರಾಶಿಯು ।
ಪಸರಂಗಳನದಱ ಬೀದಿಗಳ್ ಪಲವುಂ ರಂ ॥
ಜಿಸಿ ತೋರ್ಕುಮಾವಗಂ ಕುಂ ।
ಭಸಂಭವಂ ಕುಡಿದ ಲವಣವಾರ್ಧಿಯ ತೆಱದಿಂ ॥ 64

ಅದನಾಳ್ವಂ ಸಕಳಾವನೀಶ್ವರಕಿರೀಟಾನರ್ಘ್ಯರತ್ನಸ್ಫುರ ।
ತ್ಪದಪದ್ಮಂ ಗುಣ[1]ಜನ್ಮ[1]ಸದ್ಮನಸುಹೃತ್ಸೇನಾನಲಂ [2]ಕಾಮಿನೀ[2] ॥
ವದನಾಂಭೋಜ[3]ದಿವಾಕರಂ[3] ಪ್ರಕಟಿತಾಶೇಷಾರ್ಥ[4]ಶಾಸ್ತ್ರಾಗಮಂ[4]
ಮದನಾಕಾರನುದಾರನಚ್ಯುತನಿಭಂ ವಿಶ್ವಾವನೀವಲ್ಲಭಂ ॥ 65

ವಿಶದಯಶೋಲತಿಕಾವೃತ ।
ದಶದಿಗ್ವಲಯಂ [5]ಬುಧಾಶ್ರಯಂ ಸಕಳಕಳಾ ॥
ಕುಶಲಂ ಪ್ರಭುಮಂತ್ರೋತ್ಸಾ ।
ಹಶಕ್ತಿಯುತನಮರಶಕ್ತಿಯೆಂಬಂ ಪೆಸರಿಂ[5] ॥ 66

ಟ—೮. ಜಯನಶಾಲೆ—ಜಯಶಾಲೆ.

ಪಾ.— 1. ರತ್ನ. ಖ ॥ 2. ಮಾನಿನೀ. ಖ ॥ 3. ಹಿಮಾಗಮಂ. ಕ ॥ 4. ಶಾಸ್ತ್ರಜ್ಞನುಂ. ಕ ॥ 5. ಸಮಸ್ತಕಲೆಗಳೊಳೆಲ್ಲಂ ॥ ಕುಶಲಂಪ್ರಭುಮಂತ್ರೋತ್ಸಹ ನೆಸೆದಂತಾನಮರಶಕ್ತಿಯೆಂಬಾಪೆಸರಿಂ ॥ ಕ ॥ ಗ ॥

ವ॥ ಅಂತಾತನಜಾತಶತ್ರುವಿನಂತೆ ಧರ್ಮೋಪಾರ್ಜಿತ[1]ವಿತ್ತ[1]ನುಂ, ಯಕ್ಷೇಶ್ವರನಂತೆ ಧನರಕ್ಷಾಪ್ರವೀಣನುಂ, [2]ಏಕದಂತನಂತನವರತದಾನಶೂರನುಂ[2], ಆಖಂಡಲನಂತೆ ಖಂಡಿತಾರಾತಿಭೂಭೃತ್ಪಕ್ಷನುಂ, ಮಂದರಮಹೀಧರದಂತೆ ಕ್ಷಮಾಧರನುಂ, ನಾರಾಯಣನಂತೆ ಲಕ್ಷ್ಮೀಸಮಾಲಿಂಗಿತವಕ್ಷಃಸ್ಥಳನುಂ, ಪದ್ಮಾಸನನಂತೆ ರಾಜಹಂಸೋಪಶೋಭಿತನುಂ, ವಾಸುಕಿಯಂತನೇಕಭೋಗಾನ್ವಿತನುಂ, ಚಂದ್ರಮನಂತೆ ಜನನಯ[3]ನಾನಂದನುಂ[3], ಆದಿತ್ಯನಂತೆ ಅಧಿಕಪ್ರತಾಪನುಮೆನಿಸಿ, ಸಕಲಗುಣಕ್ಕಾಶ್ರಯನುಂ, ವಂದಿಜನಾಶ್ರಯನುಂ, ಅದ್ವಿತೀಯಮಹಿಮಾತಿಶಯನುಂ, ಅಧಿಗತಸಿದ್ಧಿತ್ರಯನುಂ, ಉಪಾಯಚತುಷ್ಟಯಪ್ರಯೋಗಪ್ರವೀಣನುಂ, ವಿನಿರ್ಜಿತಪಂಚೇಂದ್ರಿಯಪ್ರಭಾವಕನುಂ, ಅನುಗತಷಾಡ್ಗುಣ್ಯನಯನನುಂ, ದೂರೀಕೃತಸಪ್ತವ್ಯಸನನುಂ, ಮನುಚರಿತಾಷ್ಟಕವರ್ಗವಿಧಾನನುಂ, ನವನಿಧಿಸಂಪೂರ್ಣನುಂ, [4]ಪಾಲಿತ[4]ದಶದಿಶಾಚಕ್ರನುಂ, ಏಕಾದಶರುದ್ರಾವತಾರನುಂ, ದ್ವಾದಶರಾಜಾರ್ಕಪ್ರಯುಕ್ತಗುಪ್ತಚರನುಂ, ಅವನಿಪರಿಪೂರ್ಣನುಮಾಗಿ ಸಕಲವಸುಂಧರಾ[5]ವಳಯಮಂ ರತ್ನವಳಯಮಂ[5] ತಾಳ್ವಂತೆ ನಿಜಭುಜಾಗ್ರದೊಳ್[6] ತಾಳ್ದು ನಿಂದಾತಂಗೆ,

[6]ಪ್ರಶಮಿತಗುಣರವಿನಯಕ।
ರ್ಕಶಚಿತ್ತೋನ್ಮತ್ತರಖಿಲವಿಷಯಕ್ರೀಡಾ[6] ॥
[7]ವಶಗತಸುತರಾದರನೇ।
ಕಶಕ್ತಿವಸುಶಕ್ತಿರುದ್ರಶಕ್ತಿಗಳೆಂಬರ್[7] ॥67

---

ಪಾ— 1. ಚಿತ್ತ. ಖ ॥ 2. ಐರಾವತದಂತನವರತದಾನನುಂ. ಖ ॥ 3. ನಕಾಂತನುಂ. ಖ ॥ 4. ಸಾಧಿತ. ಖ ॥ 5. ವಳಿಯುಂರತ್ನವಳಯುಂ ಕ ॥ 6. ಕುಸದ್ಭರವಿನಯರತಿಕ। ರ್ಕಶಚಿತ್ತೋನ್ಮತ್ತರಖಿಳವಿಷಯಕ್ರೀಡಾ ॥ ಖ ॥ 7. [ವಶಗತರುದ್ಧವಿಸಿದರಮ। ರಶಕ್ತಿಯೊಳ್] ಜಲಧಿಯೊಳ್ಪಿಷಂಪುಟ್ಟುವವೋಲ್ ॥ ಗ ॥

ವ॥ ಒಂದುದಿವಸಮಾಧರಾಧೀಶ್ವರನಾಸ್ಥಾನಭೂಮಿಯೊಳನಂತಸಾಮಂತಮಂತ್ರಿಪುರೋಹಿತಾಂತರ್ವಾಂಶಿಕಶ್ರೀಕರಣಸೇನಾನಾಯಕಸಂಧಿವಿಗ್ರಹಿಪ್ರಮುಖನಿಖಿಲಪರಿವಾರಪರಿವೃತನಾಗಿ, ಮಹಾವಿಭೂತಿಯಿಂ ದೊಡ್ಡೋಲಗಂಗೊಟ್ಟು ಮಹೀಪಾಲನಿರ್ಪುದುಮಾಪ್ರಸ್ತಾವದೊಳತ್ಯಂತಯೌವನಮದವಿಕಾರವಿಕೃತವೇಷರುಂ, ನೀತಿಶಾಸ್ತ್ರಸದ್ಭಾವನಾಬಹಿರ್ಮುಖರುಂ, ವೃದ್ಧೋಪಸೇವಾಮೃತಾಸ್ವಾದನಾತಿದೂರರುಂ, ದುರ್ವಿನೀತಧೂರ್ತವಿಟವಿದೂಷಕಪ್ರಭೃತಿನಿಖಿಲಜನಗೋಷ್ಠೀನಿರತರುಂ, ವಿವೇಕವಿಕಳಮತಿಗಳುಮಪ್ಪ ನಿಜತನೂಭವರ್ ಮೂವರುಮೋಲಗಕ್ಕೆ ಬರ್ಪುದಂ ಕಂಡು, ಅರಸಂ—ಈ ಕುಮಾರರಂ ಬಾಲಕಾಲದೊಳ್ ತೊಟ್ಟು ವಿದ್ಯಾಭ್ಯಾಸಂಗೆಯಿಸದೆ ಸ್ವೇಚ್ಛಾವಿಹಾರಿಗಳಂ ಮಾಡಿ ಕಿಡಿಸಿದೆಂ: ಇನ್ನುಮಿವಂದಿರನೀಯಂದದೊಳಿರಿಸಿದೆನಪ್ಪೊಡೆ ಅವಿನೀತರಾಗಿ ಪಗೆವರ್ಗೆ ವಶಗತರಪ್ಪರದಱಿಂ ಶ್ರುತವಿನಯಸಂಪನ್ನರಂ ಮಾಡಲ್ವೇಳ್ಪುದು: ಎಂತುಂ ಸುಭಾಷಿತಮಿಂತೆಂಬುದಲ್ತೆ—

ಶ್ಲೋ॥ [1]ಅವಿನಯರತಮಂತರಾನಭಿಜ್ಞಂ[1] ವಶಮವಶಂ ಹಿ ನಯಂತಿ ವಿದ್ವಿಷಃ।
ಶ್ರುತವಿನಯನಿಧಿಂ ಸಮಾಶ್ರಿತಂ ತಂ ತನುಮಪಿ ನೈತಿ ಪರಾಭವಃ ಕ್ವಚಿತ್ ॥ ೧

[ಟೀಕು—ಅತ್ಯಂತದುರ್ವಿನೀತನಂ, ಅಂತರವಱಿಯದನಂ, ಇಂದ್ರಿಯವಶನಪ್ಪಾತನಂ ಶತ್ರುಗಳ್ ಕಿಡಿಸುವರ್. ಶ್ರುತವಿನಯಸಂಪನ್ನನಪ್ಪಾತಂಗೆತ್ತಲಾನುಂ ಖಡತನಮಾದೊಡಂ ಪರಾಭವಮನೆಯ್ದುಲಱಿಯಂ.]

ಎಂಬೀನೀತಿಶಾಸ್ತ್ರಮುಂಟದಲ್ಲದೆಯುಂ,

ನಯಶಾಸ್ತ್ರಕ್ರಮದಿಂ ವಿರೋಧಿನೃಪರಂ ಗೆಲ್ದಾಳ್ದನೇಕಾಕಿಯಾ।
ಗಿಯುಮುರ್ವೀತಳಮಂ ನರೇಂದ್ರತಿಲಕಂ ಶ್ರೀಚಂದ್ರಗುಪ್ತಂ ನಿಜಾ॥

ಪಾ.— 1. ಅವಿನಯರತಮಾಯಾಸಾದ್ಯತೇ. ॥ ಗ ॥

ಸ್ವಯರಾಜ್ಯಕ್ರಮದೊಳ್ ಚತುರ್ಬಲಸಮೇತಂನಿಂದು[1] ತನ್ನೊಂದು[1] ದು| ರ್ನಯದಿಂದಂ ನೆಗ[2]ೞ್ದಿಯ್ದ[2] ಕೆಟ್ಟನಧಿಕಂ ದುರ್ಬುದ್ಧಿ ದುರ್ಯೋಧನಂ||

ವ|| ಅದಱಿ ನಿವರೊಳೊರ್ವ[3]ನಂ[3] ಮದೀಯಭುಜಬಲಾವಷ್ಟಂಭದಿಂ ದಂಭೋಧಿವರಂ ನಿಮಿರ್ದ ಸಕಲವಸುಂಧರಾವಳಯಮುಂ ರಕ್ಷಿಸುವಂತು ಮಾೞ್ಪೊಡಿವರ್ ಶ್ರುತವಿಹೀನರ್, ಇವರಂ ಶ್ರುತವಿನಯಸಂಪನ್ನರಪ್ಪಂತು ಮಾೞ್ಪೆನೆಂಬವನುಳ್ಳೊಡಾತನೇನಂ ಬೇಡಿದೊಡಂ ಕುಡುವೆನೆಂದಾಸ್ಥಾನಸ್ಥಿತರಪ್ಪ ಪಂಡಿತರ್ಕಳಂ ನೋೞ್ಪುದುಮವರೊಳೊರ್ಬಂ ಮುಕ್ತೋಷ್ಠನುಂ ನಿಕೃಷ್ಟನುಮಪ್ಪ ಭಟ್ಟನಿಂತೆಂದಂ:—ನಿಮ್ಮಾಕುಮಾರರಪ್ಪೊಡೆ ಯೌವನಮದೋನ್ಮತ್ತರುಂ [4]ದುರ್ಮುಖರುಂ[4] ಚಂಚಳಚಿತ್ತರುಮಾಗಿರ್ದಪ್ಪರಿವರಂ ನೀತಿವಿದರಪ್ಪಂತು ತಿಳಿಪುವಂದಂ ಮುದುಗುದುರೆಯಂ ತಿರ್ದುವಂತಕ್ಕುಮೆಂದು ಕಷ್ಟನಿಷ್ಠುರವಚನಂಗಳಂ ನುಡಿವುದುಮಾತನ ಮಾತಂ ಮಾರ್ಕೊಂಡು ಸಮಸ್ತಶಾಸ್ತ್ರ[5]ವಿಚಾರಸಾರನುಂ[5], ಚತುರುಪಧಾವಿಶುದ್ಧನುಂ, ಬುದ್ಧಿವೃದ್ಧನುಮನೇಕಶಿಷ್ಯವಿಖ್ಯಾತಕೀರ್ತಿಯುಂ, ಭದ್ರಮೂರ್ತಿಯುಮಪ್ಪ ವಸುಭಾಗಭಟ್ಟನಿಂತೆಂದಂ:—

ಎನಿತೋದನೋದಿಯುಂ ಮನ| [೧೫]
ದನಿತೆ ವಲಂ ಬುದ್ಧಿಯಕ್ಕುಮೆಂದು ಸಮಸ್ತಾ ||
ವನಿಯ ಜನಮೊನಕೆವಾಡ |
ಪ್ಪಿನೆಗಂ ಸಲೆ ನುಡಿದ ನುಡಿ ಯಥಾರ್ಥಂ ನಿನ್ನೊಳ್ ||69

ಟೀ—೧೩. ಚತುರಪಧಾವಿಶುದ್ಧನುಂ—ಧರ್ಮಾರ್ಥಕಾಮಮೋಕ್ಷಗಳ ವಿಷಯದಲ್ಲಿ ರಾಜನಿಂದ ಪರೀಕ್ಷಿಸಲ್ಪಟ್ಟು ಶುದ್ಧನೆಂದು ನಿಶ್ಚೈಸಲ್ಪಟ್ಟವನು.

೧೭. ಒನಕೆವಾಡಪ್ಪಿನೆಗಂ—ಒನಕೆಯ ಹಾಡಿನಂತೆ, ಎಲ್ಲರಿಗೂ ತಿಳಿದ.

ಪಾ—1. ತಾನೊಂದು. ಖ || 2. ಬೆಳ್ದೇಕೆ. ಕ || ಗ || 3. ನಾಗಿಯುಂ. ಖ ||
4. ಅಮ್ಮದೂಕ್ತರುಂ. ಗ || 5. ಪಾರಗನುಂ. ಕ || ಗ ||

ಶ್ಲೋ || "ಸ್ವಭಾವಮನುವರ್ತಂತೇ ಪಾಂಡಿತ್ಯಂ ಕಿಂ ಕರಿಷ್ಯತಿ ||"

[ಟೀ—ತನ್ನಪ್ರಕೃತಿ ಬಿಡದಿರಲ್ ಅಱಿಕೆಯೇನಂ ಮಾಡುವುದು ?]

ಎಂಬ ಪುರಾಣವಾಕ್ಯಮೇಕೆ ಪುಸಿಯಕ್ಕುಮದಲ್ಲದೆಯುಂ,

ಶುಕಶಾರಿಕಾದಿ [1]ಪಕ್ಷಿ[1]।
ಪ್ರಕರಂ ಮೊದಲಾಗಿ ಶಿಕ್ಷೆಯಂ ಕೈಕೊಳ್ಗುಂ ॥
ಪ್ರಕಟಂ ತ್ರಾನೆನೆ ಮಾನವ।
ನಿಕರಂ ಕೈಕೊಳ್ಳದೆಂದು ನುಡಿವರೆ ಮರುಳೇ ॥ 70

ವ॥ ಅದಱಿಂ ನಿನ್ನ ಪರಿಜ್ಞಾನದ ತೆಱನನಱಿಯಲಾದುದು; ನೀಂ ಮುಟ್ಟಮಿರೆಂದಾಭಟ್ಟನಂ ಮುಟ್ಟುಗಿಡೆ ನುಡಿದುಂ ಮಾಣದೆ, ವಸುಭಾಗಭಟ್ಟಂ ವಿಭುಗಭಿಮುಖನಾಗಿ—

ದೇವ ಭವದೀಯಸುತರಂ।
ಮೂವರುಮಂ ಜಡರನಾಱುತಿಂಗಳ್ಗೆ ಜಯ॥
ಶ್ರೀವರ ಸಮಸ್ತನೃಪವಿ।
ದ್ಯಾವರರಪ್ಪಂತು ಮಾಡುವೆಂ ಪರಮಾರ್ಥಂ ॥ 71

ವ॥ ಅಂತು ಮಾಡಲಾಱದಂದು ತಪಂಬಡುವೆನೆಂದು ವಸುಭಾಗಭಟ್ಟಂ ಪ್ರತಿಜ್ಞಾಪೂರ್ವಕಂ ನುಡಿವುದು [2]ಮಮರಶಕ್ತಿ[2] ಸಂತಸಂಬಟ್ಟು ಕುಮಾರರಂ ಸಮರ್ಪಿಸುವುದುಂ; ವಸುಭಾಗಭಟ್ಟನವರಂ ಕೈಕೊಂಡು ಶುಭದಿನಸುಮುಹೂರ್ತದೊಳ್ ವಿದ್ಯಾಗಮೋದ್ಯುಕ್ತರಂ ಮಾೞ್ಪುದುಂ; ಅವಂದಿರ್ ಅತಿವರ್ತಿಯಪ್ಪ ಮತ್ತಗಜಂ ಕಂಭಕ್ಕೆ ತರ್ಪಂ ತೊತ್ತಂಬದಿಂ [3]ಬಂದುಂ[3] ಪಿಡಿವೆತ್ತ ಕಳ್ಳನಂತೆ ಸಿಡಿಮಿಡಿಗೊಳುತ್ತಿ

ಟೀ—೯. ಮುಟ್ಟು—ಗೌರವ. ೧೦. ಒತ್ತಂಬ—ಬಲಾತ್ಕಾರ.

ಪಾ—1. ವಿಹಗ. ಖ ||  2. ಮರಸನವರ ಮಾತಿಂಗೆ ಕರಂ. ಕ ||  3. ತಂದುಂ. ಕ ||

ದುರ್ಗಂ, ಅಪಸ್ಮಾರಗ್ರಹಗೃಹೀತರಂತೆ ವಕ್ರಗ್ರೀವರಾಗಿಯುಂ, ನೆಱಗಿ ವುಡರಂತೆ ಕಿವುಡುಗೇಳ್ದುಂ, ಪಿಸುಣಂ ಕೇಳ್ವ ಸತ್ಪುರುಷನಂತೆ ಕೇಳ್ದ ದನಲ್ಲಿಯೇ ಮಱೆದುಂ, ಸೂಕಳಾಶ್ವದಂತೆ ಶಿಕ್ಷೆಯನೆಂತುಂ ಕೈಕೊಳ್ಳದಿ ರೆ; ಚಿಂತಾಕ್ರಾಂತನಾಗಿ ಸ್ವಾಂತದೊಳ್ ವಿಚಾರಿಸಿಕೊಂಡು—ಏಂ ಕೆಟ್ಟ ದೆಂದು ವಸುಭಾಗಭಟ್ಟನೊಂದು ನರಿಯ ಕಥೆಯಂ[1] ಪೇೞ್ದನದೆಂತೆನೆ[1]:—

† ೧. ನರಿಯಕಥೆ.

[ಅಡವಿಯಲ್ಲಿ ಒಂದು ನರಿಯಾಹಾರಂಬಡೆಯದೆ ಬರಬರುತ್ತೆ ಬಂದು ಸತ್ತ ಎತ್ತಂ ಕಂಡು ಸಡಗರಿಸಿ ಅದಱ ಪೃಷ್ಠನಾಳದಿನೊಡ ಲೊಳಪೊಕ್ಕು ತಿನುತಿರ್ಪನ್ನೆವರಂ; ನಿರ್ದ್ರವಮಪ್ಪುದೇಕಾರಣಮಾಗಿ ಕಡುವಿಸಿಲಿಂಗೆ ತಟ್ಟಾಱಿದ ಚರ್ಮದಿಂ ಪೃಷ್ಠದ್ವಾರಂ ಮುಚ್ಚಲಾಜಂ ಬುಕಂ ತನಗೆಲ್ಲಿಯುಂ ಪೋಗಲಿಂಬಿಲ್ಲದೆ ಚಿಂತಾಕ್ರಾಂತನಾಗಿರಲನಿತ ರ್ಕೆ ಆವೂರ ಅಂತ್ಯಜರ್ ಸಾರಮೇಯಂಗಳನೆಯ್ತಂದು ಸತ್ತಿರ್ದನ ಡ್ವಾಹನಂ ಕಂಡದಱ ಪೊಡೆಯಂ ಡಾಣೆಯಿಂ ಪೊಯ್ಯಲ್ಕೆಯಾಕ್ರೋಶಪ್ಪ ನಿರ್ವೇದಂಗೊಂಡೊಂದುಪಾಯಮಂ ಕಂಡು—ಎಲವೊ ಮ್ಲೇಚ್ಛರುಗ ಳಿರಾ! ಬ್ರಾಹ್ಮಣೋತ್ತಮನಪ್ಪ ನಾವೊಂದು ಪಾಪನಿವಾರಣಾರ್ಥವಾಗಿ ಗೋವಿನ ಜಠರಮಂ ಪೊಕ್ಕಿರ್ದೆವು, ನೀವೀಪಶುವಿನ ಪೃಷ್ಠಕುಷ್ಣೋ ದಕಮಂ ತಂದೆಱೆದು ದೂರಂ ಪೋಗಿಮೆನಲಾ ಶ್ವಪಚಕರ್ ಬೆದಱಿ ಯಾಗೋವಿನ ಪೃಷ್ಠಭಾಗಕ್ಕೆ ಕಾಯ್ದ ನೀರಂ ತಂದೆಱೆದು—ಎಲೆ ಸ್ವಾಮೀ, ನೀವತ್ತಂ ಪೋಗೆನಲಾ ಸೃಗಾಲಂ—ಎಲೆ ಅಂತ್ಯಜರುಗಳಿರಾ,

ಟೀ—೨. ಪಿಸುಣನ್—ಕ್ಷುದ್ರ. ೩. ಸೂಕಳಾಶ್ವ—ತುಂಟುಕುದುರೆ.

† ಈ ಕಥೆ ಖ|| ಗ|| ಪ್ರತಿಗಳಲ್ಲಿಲ್ಲದುದರಿಂದಲೂ, ಈ ವಾಕ್ಯಸರಣಿಯ ರೀತಿಯಿಂ ದಲೂ ಇದು ಏತತ್ಕವಿಕರ್ತೃಕವಲ್ಲವೆಂದು ತೋರುತ್ತದೆ.

ಪಾ. 1. ಪೇಳ್ವುದುಂ; ಗ || ಖ ||

ನಾವು ಪೊಸಲಾಂಛನಧಾರಿಗಳಪ್ಪುದಱಿಂ ನಿಮ್ಮೊಡನಿರ್ಪಜಾಯಿಲಂಗಳ್ ಕಂಡು ತಗುಳ್ದು ಬಂದೆಮ್ಮಂ ಕಡಿದುವಾದೊಡಾದೋಷಂ ನಿಮಗಪ್ಪುದಾಗಿಯಾಕುಕ್ಕುರಂಗಳಂ ಕಟ್ಟಿರ್ದ ಪಾಸಿನ ನೇಣಂ ನಿಮ್ಮ ಕರ್ಣದ್ವಾರದೊಳ್ ಬಂಧಿಸಿಕೊಳ್ಳಿಮೆನಲಾ ಕುನ್ನಿಗಳಂ ತಮ್ಮ ಶ್ರೋತ್ರನಾಳದೊಳ್ ತೊಡರ್ಚಿಕೊಂಬುದುಂ; ಬಳ್ಳಿ ಎತ್ತಿನುದರದಿಂ ಪೋಱಮಟ್ಟು ಓಡುವುದುಂ; ಶ್ವಾನಂಗಳ್ ಕಂಡು ತೂನುತ್ತಿರಲಾ ಚಂಡಾಲರ್ ತಮ್ಮ ಕಿವಿಗಳ್ ಪಱಿಗುಮೆಂದು ಪಿಂದಕ್ಕೆ ತೆಗೆವುದೆ ಪೊತ್ತಾಗಲ್ ಬಳ್ಳಿವತ್ತಂ ಪೋಗಿ ಗುಡ್ಡಮಂ ಪೊಕ್ಕುದು.]

ಎಂದು ಪೇೞ್ವುದುಮದಂ ಕೇಳ್ದಾಕುಮಾರರಿಂತಪ್ಪ ಕಥೆಯನಿನ್ನೊಂದಂ ಪೇೞಿಮೆಂಬುದುಂ; ಈಬಾಲಕರ್ ಕ್ರಿಡಾಶೀಲರಿವರನೀಯಂದದೊಳೆ ತಿಳಿಪುವೆನೆಂದು—ಅಂತಪ್ಪೊಡೆ, ನೀವೀಕಥೆಯಂ ಮಗುೞೆ ಪೇೞಲ್ ಬಲ್ಲಿರಪ್ಪೊಡಿಂತಪ್ಪ ಕಥೆಗಳನನಂತಂ ಪೇೞ್ವೆನೆಂಬುದುಂ; ಆವರ್—ಕರಮೊಳ್ಳಿತ್ತಂತೆಗೆಯ್ವೆವೆಂದಾಗಳೆ ಪೋಗಿ ಮೂವರುಮಾಕಥೆಯನಿಂಬಾಗಿ ಸಂಭಾವಿಸಿ ಪೇೞ್ವುದುಂ; ವಸುಭಾಗಭಟ್ಟನಭೀಷ್ಟಸಿದ್ಧಿಯಾದುದೆಂದತಿಸಂತೋಷಂಬಟ್ಟರ್ಥಶಾಸ್ತ್ರಾಭಿಪ್ರಾಯೋಪಾಯಂಗಳಪ್ಪುವೈದು ಕಥೆಗಳಂ ಪೇೞ್ದು ತಿಳಿಪಿ, ರಾಜಪುತ್ರರಂ ಸತ್ಪಾತ್ರರಂ ಮಾಡಿ, ತಾನುಂ ಸ್ವಾರ್ಥಸಿದ್ಧಿಯೊಳ್ ಕೂಡಿದಂ. ಅವಾವುವೆಂದೊಡೆ:—

ಶ್ಲೋ || "ಭೇದಃ ಪರೀಕ್ಷಾ ವಿಶ್ವಾಸಃ ಚತುರ್ಥಂ ವಂಚನಂ ತಥಾ |
ಮಿತ್ರಕಾರ್ಯಂ ಚ ಪಂಚೈತೇ ಕಥಾಸ್ತ್ವತ್ರಾರ್ಥಸಂಜ್ಞಕಾಃ ||" ೩

ಎಂಬುದು. ಎಂತೆಂದೊಡೆ:—

ವ || ಅನೇಕಪ್ರಕಾರಕಪಟೋಪಾಯಂಗಳಿಂದತಿಸ್ನೇಹಿತರೊಳ್ ಪೃಥಗ್ಭಾವಮಂ ಮಾೞ್ಪುದೇ ಭೇದಮೆಂಬುದು; ಆವಕಾರ್ಯಮುಮಂ

ವಿಚಾರಪೂರ್ವಕಮಲ್ಲದೆ ನೆಗೞಲಾಗದೆಂಬುದನಱಿವುದು ಪರೀಕ್ಷೆಯೆಂಬುದು; ಎಂತುಂ ನಂಬದರಂ ನಂಬುವಂತೆ ನುಡಿದೊಡಂಬಡಿಸಿಯೊಳಪೊಕ್ಕು ನೆಗೞ್ವುದು ವಿಶ್ವಾಸಮೆಂಬುದು; ಪೆಱರ ಬಗೆಯನಱಿದು ಸಂಧಾನಂಗೆಯ್ದು ವಂಚಿಸುವುದು ವಂಚನೆಯೆಂಬುದು; ಅನ್ಯರೆಲ್ಲರುಮನತಿಸ್ನೇಹದಿಂ ತನ್ನವರಂ ಮಾಡಿಕೊಳ್ವುದು ಮಿತ್ರಕಾರ್ಯಮೆಂಬುದು; ಇಂತು ಐದುಂ ತಂತ್ರಂಗಳ ಪ್ರಕಾರಂ. ಅವಱೊಳಂ ಮೊದಲ ತಂತ್ರಂ ಭೇದತಂತ್ರಮೆಂಬುದು: ಅದೆಂತೆಂದೊಡೆ:—

ಶ್ಲೋ|| "ವರ್ಧಮಾನೋ ಮಹಾನ್ ಸ್ನೇಹಃ [1]ಪಂಚಾಸ್ಯವೃಷಯೋ[1]ರ್ವನೇ |
ಪಿಶುನೇನಾತಿಲುಬ್ಧೇನ ಜಂಬುಕೇನ ವಿನಾಶಿತಃ ||" ೪

[ಟೀ—ಹಿರಿದಪ್ಪ ಸ್ನೇಹಂ ಸಿಂಹಕ್ಕಂ ವೃಷಭಕ್ಕಂ ಕಾಂತಾರದೊಳಾಗಿರಲತ್ಯಂತಪಿಶುನನುಮತಿಲುಬ್ಧನುಮಪ್ಪ ನರಿಯಿಂದಂ ಕಿಡಿಸಲ್ಪಟ್ಟುದು.]

ವ|| ಆಕಥಾಪ್ರಪಂಚಮೆಂತೆಂದೊಡೆ:—

ನಿರತಿಶಯವಸ್ತುಪೂರ್ಣಂ|
ಧರಾಂಗನಾವದನಮಂಡನಶ್ರೀಕಾಂತಂ||
ಮರುದಾಂದೋಳಿತನಂದನ| [೧೫
ಪರಿವೃತಮುಜ್ಜಯಿನಿಯೆಂಬ ಪೊೞಲುಂಟದಱೊಳ್||72
ಪರಮಾನಂದದೊಳಿರ್ಪಂ|
ನಿರುಪಮನಿಜರೂಪವಿಭವಜಿತಕಂದರ್ಪಂ||
ಪರಿಹೃತಸಪ್ತವ್ಯಸನಂ|
ನಿರಂತರೋಪಾಸ್ಯಮಾನಶಾ[2]ಸ್ತ್ರವ್ಯಸನಂ[2]||73 [೨೦

ವ|| ಅಂತಿರ್ಪಾತನೊಂದು ದಿವಸಂ,

---

ಪಾ॰ 1. ಸಿಂಹಪುಂಗವಯೋಃ ಗ||  2. ಸ್ತ್ರಾಭ್ಯಾಸಂ. ಕ || ಗ ||

(ಮಾಲಿನೀವೃತ್ತಂ)

ಅನುಪಮನಯಯುಕ್ತಂ ಧರ್ಮಮಾರ್ಗಾನುರಕ್ತಂ।
ಮನು[1]ನಿಭಸು[1]ಚರಿತ್ರಂ ಪೋಷಿತಾಶೇಷಮಿತ್ರಂ॥
ವಿನಯಗುಣನಿಧಾನಂ ವೈಶ್ಯವಂಶಪ್ರಧಾನಂ।
[2]ಧನಧನದ[2]ಸಮಾನಂ ವರ್ಧಮಾನಾಭಿಧಾನಂ॥ 74 [೫

ವ॥ ಅಂತಾತನತಿಪ್ರಬುದ್ಧಂ ಧನಕನಕಸಮೃದ್ಧಿಯೊಳ್ ನೆಱೆದಿಷ್ಟವಿಷಯಕಾಮಭೋಗಂಗಳನನುಭವಿಸುತ್ತುಂ, ನ್ಯಾಯೋಪಾರ್ಜಿತವಿತ್ತನುಂ, ಧರ್ಮೋಪಾದಿತಚಿತ್ತನುಮಾಗಿ, ಕೆಲವು ಕಾಲಂ ಸುಖಸಂಕಥಾವಿನೋದದಿನಿರ್ದೊಂದು ದಿವಸಂ ಸುಕವಿಯಂತಪೂರ್ವಾರ್ಥಲಬ್ಧಿಗೆ ಚಿಂತೆಗೆಯ್ದು ತನ್ನೊಳಿಂತೆಂದು ಬಗೆದಂ:— [೧೦

(ಅಕ್ಕರವೃತ್ತಂ)

ಪಡೆವೆನೆಂಬಂ ಪೊನ್ನನೆ ಪಡೆವುದು ಸರ್ವಪ್ರಕಾರದಿಂದಂ ಪಡೆಯೆ ಪೊನ್ನಂ। ಪಡೆಯಲಾದುವಂತೊಂದುಪಾಯಮುಂ ಪೆಱವು ಮಾತೇಂ ಚದುರುಮಾತ್ರ್ವ ಪೆಂಪುಂ॥ ನುಡಿಯ ಬಲ್ಮೆಯುಂ ಕಡುಗಲಿತನಮುಂ ಸೌಭಾಗ್ಯಮುಮೊಂದಿದೊಳ್ಪುಮಾದುನ್ನತಿಯು। ಮೊಡವೆಯಾದಂದು ತಮ್ಮಂ ತಾವಕ್ಕುಂ ಕಿಡುವುವು ಧನಮಿಲ್ಲದಂದಿವೆಲ್ಲಂ॥ 75

ವ॥ ಅದಱಿನರ್ಥೋಪಾರ್ಜನಮೇ ಸಕಲಗುಣೋಪಾರ್ಜನಕ್ಕೆ ಮುಖ್ಯಮಾಗಿರ್ಕುಂ. ಉಪಾರ್ಜಿಸಿದ ಧನಮುಮಾಯರಹಿತಮಾಗಿ [3]ಬೀಯಮಪ್ಪುದು[3] ಕೆಲವು ದಿವಸದಿಂ ಕ್ರಮಕ್ರಮದಿಂ ನಿಚ್ಚಮೆಚ್ಚುವಂಜನದಂತೆ ತವಿಲನೆಯ್ದುಗುಂ. ಮನುಷ್ಯಂ ಪುರುಷಾರ್ಥಸಿದ್ಧಿಯಂ ಮಾಡದಂದು, ಅಲಬ್ಧಲಾಭಂ ಲಬ್ಧಪರಿರಕ್ಷಣಂ ರಕ್ಷಿತವಿವರ್ಧನಂ

ಪಾ. 1. ವಿಭವ. ಗ ॥ 2. ಧನದಧನ. ಕ ॥ ಖ ॥ ಗ ॥ 3. ಕೇವಲಪ್ರಿಯಮಪ್ಪದುಂ. ಗ ॥

[1]ವರ್ಧಿತತೀರ್ಥ [1]ಪ್ರತಿಪಾದನವೆಂಬ ಚತುರ್ವಿಧಪುರುಷಾರ್ಥವೃತ್ತಿಯಾಗಿರ್ಪುದೆಂದು[2] ಪರದೇಶಂಬೋಗಲ್ ನಿಶ್ಚೈಸಿ[2] ಮಧುರಾಪುರಕ್ಕಪೂರ್ವಮಪ್ಪ ಸಾರಭಾಂಡಂಗಳಂ ತೀವಿಕೊಂಡು, ಯಾತ್ರೋದ್ಯುಕ್ತನಾಗಿ,

ಆವಿವಿಧಪ್ರಭೂತಭುವನಸ್ತುತಸಾರಸಮಸ್ತವಸ್ತುವಂ ।
ತೀವಿದ ಭಂಡಿಯೊಳ್ ವಿಪುಳಸತ್ತ್ವಜವಂಗಳನೊಳ್ಪುವೆತ್ತ ಸಂ ॥
ಜೀವಕ[3]ನಂದಕಾಖ್ಯ[3]ವೃಷಭಂಗಳನಿಂಬೆನೆ ಪೂಡಿ ಕೂರ್ತುಮಿ ।
ತ್ರಾವಳಿ ತನ್ನೊಳೊಂದಿ ಬರೆ ತತ್ಪುರದಿಂ ತಳರ್ದಂ ವಣಿಗ್ವರಂ ॥ 76

ವ॥ ಅಂತಾವಣಿಗ್ವರಂ ತನ್ನ ಮನಕ್ಕೆ ಶಕುನಮಿಂಬಿಡೆ, ಬಂಧುಜನಂಗಳೊಡಂಬಡೆ, ಶುಭಮುಹೂರ್ತದೊಳ್ ಪೊೞಲಂ ಪೊಱಮಟ್ಟು, ಅನೇಕಜನಪದನದನದೀಪ್ರದೇಶಂಗಳಂ ಕಳಿದು, ನಾನಾದ್ರುಮಗುಲ್ಮಲತಾಪ್ರತಾನಸಂಛನ್ನಮುಂ ಬಹುಪ್ರಕಾರಕ್ರೂರಮೃಗಗಣವಿಸಂಕಟಮುಂ ಅಭ್ರಂಕಷೋತ್ತುಂಗಶೃಂಗಸಂಗತಗಿರಿವರನಿತಂಬಸಂವಾಸಶಬರಶಿಬಿರಸಂಕೀರ್ಣಮುಮಪ್ಪುದೊಂದು ಮಹಾಟವಿಯನೆಯ್ದಿವರ್ಪುದುಂ; ಅದಱೊಳತಿಕರ್ಕಶಶರ್ಕರಾಪ್ರಚುರಮುಂ ಅತಿಸ್ಥೂಲನಿಶಿತಪಾಷಾಣವಿಷಮಿತಮುಮತಿದುಸ್ತರಸ್ಥಾಣುನಿಚಯೋಪಸ್ಥಿತಮುಮಾಗಿರ್ದುದೊಂದು ದುರ್ಗಮಮಾರ್ಗದೊಳತ್ಯಂತಶಕಟಭಾರಾಕ್ರಾಂತಿಯಿಂದೂರುಭಂಗಂಗೆಯ್ದು ನಿದಾಘಸಮಯಮಧ್ಯಂದಿನಪ್ರಾಪ್ತಸಪ್ತಸಪ್ತಿಪ್ರತಾಪವಿಹ್ವಲೀಭೂತಜೀವಕಂ ಸಂಜೀವಕಂ ನಿಲ್ವುದುಂ; ಅದಂ ಕಂಡು ವರ್ಧಮಾನಂ ಸ್ವಾರ್ಥಸಮೇತಂ ದಯಾಪರೀತಚೇತಂ ಮೂಱುದಿವಸಮಲ್ಲಿ ಉಪ್ಪಯಣಂಗೆಯ್ದು, ಎಂತುಂ ಸಂಜೀವಕಂ ಚೇತರಿಸುವುದಂ ಕಾಣದೆ, ನಾಲ್ವರ್ ಮನುಷ್ಯರನದರ್ಕೆ ಕಾಪುವೇೞ್ದು ಬ

1. ಸತ್ಪಾತ್ರ. ಗ ॥ 2. ದ್ವೀಪಾಂತರಂ ಪೋಗಲಿಚ್ಛೈಸಿ ಖ ॥ 3. ನಾದಿಯಾದ. ಖ ॥

ಹುವಿಧಾಪಾಯಪ್ರಾಯಮಪ್ಪ ಮಹಾರಣ್ಯದಿಂ ತೊಲಗಿ ಪಯಣಂಬೋದಂ. ಇತ್ತಲಾಕಾಪಿನವರ್ ಅಲ್ಲಿಯ ವನಚರವ್ಯಾಘ್ರಮೃಗಗಣಜನಿತ ಭೀತಿಯಿಂ ನಿಲಲಣ್ಮದೆ ಸ್ವಾರ್ಥಪತಿಯನೆಯ್ದಿ ಬಂದು, ಸಂಜೀವಕಂ ಸತ್ತುದೆಂದು ಪುಸಿದು ಪೇೞ್ವುದುಂ; ಸೆಟ್ಟಿ ಮನಃಕ್ಷತಂಬಟ್ಟು ವಿಷಾದವಿಧುರಂ ಮಧುರೆಗಭಿಮುಖನಾಗಿ ಪಯಣಂಬೋದಂ. [೫

ವ|| ಅನ್ನೆಗಮಿತ್ತಲ್,

ವಿಮಲಾಬ್ಜಾಕರಶೀಕರೋತ್ಕರಯುತಂ ವಾನೇಯಗಂಧದ್ವಿಪೇಂ|
ದ್ರಮದಾಮೋದಿ[1]ಕಿರಾತಯೋಷಿದಳಕಶ್ರೇಣೀನಟಂ ಮಾರುತಂ[1]||
ಶ್ರಮಮಂ ಪಿಂಗಿಸೆ ಮಂದಮಂದಗತಿಯಿಂ ಸಂಜೀವಕಂ ಸಾರ್ದುದಾ|
ಯಮುನಾತೀರಮನುಜ್ಜ್ವಲಜ್ಜಲ[2]ಕಣೌಘಾಸಾರ[2]ವಿಸ್ತಾರಮಂ ||77

ವ|| ಅಂತುಮೆತ್ತಾನುಮಾಪ್ಯಾಯಿತಶರೀರನಾಗಿ ಕಾಳಿಂದೀನದೀಕಚ್ಛದೊಳಾತ್ಮೇಚ್ಛೆಯಿಂ ನಲಿನಲಿದು ರುಚಿರಮರಕತಶ್ಯಾಮದೂರ್ವಾಂಕುರಗ್ರಾಸದೊಳಂ ಅತಿಸ್ವಚ್ಛ[3]ಸ್ವಾದು[3]ಸಲಿಲಪಾನದೊಳಂ ಮೆಲ್ಲಮೆಲ್ಲನೆ[4]ಮೆಲ್ಕಾಡಿ[4] ಪಥಪರಿಶ್ರಮಮನಾಱಿಸಿಕೊಂಡು ಕೆಲವುದಿವಸಕ್ಕೆ ಬಾಲೇಂದುಶೇಖರ[5]ಶಕ್ವರಾಕಾರಮಂ[5] ತಾಳ್ದಿ, [೧೫

ಸ್ಫುರದಕ್ಷೂಣವಿಷಾಣಕೋಟಿದಳಿತಪ್ರೋತ್ತುಂಗವಲ್ಮೀಕನು|
ದ್ಧುರಗಂಭೀರಪಯೋ[6]ದ[6]ನಾದನತಿಪುಷ್ಟಾಂಗಂ ಬೃಹತ್ಕಂಧರಾಂ||
ತರನುದ್ದಾಮಬಳಂ ಮಹಾಗಹನದೊಳ್ ಸಂಜೀವಕಂ ಕೂಡೆ ಸಂ|
ಚರಿಸುತ್ತಿರ್ದುದನೂನಪೀನಕಕುದಂ ತನ್ನಿಚ್ಛೆಯಿಂ ನಿಚ್ಚಲುಂ||78

ಪಾ. 1. ವಿಶೇಷಯುಕ್ತ ಸವಮಾನಂ ತೀಡೆ ತತ್ಕಾಲದೊಳ್. ಖ ||
2. ಕಣಾಂಭಃಪೂರ. ಕ || 3. ಪ್ರಸನ್ನ. ಖ || 4. ಮೇದಾಡಿ. ಗ || ಖ ||
5. ವೃಷಭನವಿಲಾಸಮಂ. ಖ || 6. ಧಿ. ಗ || ಖ ||

ವ|| ಅಂತಿರ್ಪುದುಮಾವನಾಂತರದೊಳಪ್ರತಿಮಮಪ್ಪ ವಿಕ್ರಮಗುಣಮೇ ತನಗೆ ಸ್ವಾಮಿಸಂಪದವಾಗಿಯುಂ, ಗೂಢಲಕ್ಷಣಭಿನ್ನಪ್ರತಿಸಂಧಾನಸಂಧಿದೂಷಣಪರಚಿತ್ತಪರೀಕ್ಷಾಲಕ್ಷಣಮೆಂಬ ಮಂತ್ರಿಗುಣಂಗಳಂ ನೆರೆದ ಜಂಬುಕಂಗಳೇ ಮಂತ್ರಿಗಳಾಗಿಯುಂ, ಮೃಗಗಣನಿಚಿತಮಪ್ಪ ಗಹನಾಂತರಾಳಮೇ ತನಗೆ ಜನಪದಮಾಗಿಯುಂ, ಅತಿನಿಶಿತನಖಕುಲಿಶಮುಖವಿದಾರಿತಮದಾಂಧಗಂಧಸಿಂಧುರಂಗಳ ಕಳೇಬರಂಗಳೇ ತನಗೆ ಭಂಡಾರಮಾಗಿಯುಂ, ಅಖಿಲಶಾರ್ದೂಲಂಗಳೇ ಮಿತ್ರಬಲಮಾಗಿಯುಂ, ನಿಸರ್ಗದುರ್ಗಗಿರಿಗುಹಾಗಹ್ವರಂಗಳೇ ದುರ್ಗಂಗಳಾಗಿಯುಂ, ಅಖಿಳವೃಕವರಾಹಶ್ವಾಪದಂಗಳೇ [1]ಬಲಂಗಳಾಗಿ[1] ಯುಂ, ವಿಶಾಲಶಿಲಾತಲಂಗಳೇ ಸಿಂಹಾಸನಂಗಳಾಗಿಯುಂ, ಅತಿಸಂಛನ್ನಬಹಳತರುಶಾಖಾನಿಚಯಚ್ಛಾಯೆಯೇ ಧವಳಚ್ಛತ್ರಮಾಗಿಯುಂ, ಇಂತು ಮೃಗಾಧಿರಾಜಪದವಿಯೊಳಾಧಿಪತ್ಯಮನಾತ್ಮಸ್ವೀಕೃತಂ ಮಾಡಿ,

ಭಂಗುರ[2]ಭೀಷಣಭ್ರುಕುಟಿ[2]ದಂಷ್ಟ್ರನುದಗ್ರದವಾನಲಪ್ರಭಾ।
ಭಂಗಪಿಶಂಗಕೇಸರಸಟಾವೃತರೌದ್ರಮುಖಂ ಮದಾಂಧಮಾ॥
ತಂಗಘಟಾವಿಘಟ್ಟನಪಟಿಷ್ಠಕಠೋರನಖಾಳಿ ನಾಮದಿಂ। [೧೫
ಪಿಂಗಳಕಂ ಮೃಗೇಂದ್ರನೊಸೆದಿರ್ಪುದತರ್ಕ್ಯಪರಾಕ್ರಮಕ್ರಮಂ॥79

ವ|| ಅಂತಿರ್ದೊಂದು ದೆವಸಮಾಮೃಗಾಧಿರಾಜನಜೇಯಸಾಮಜಘಟೆಯುಂ ಬೆದಱಿ ಬೆಂಕೊಂಡು ನಿಜನಿಶಿತನಖಕುಲಿಶಮುಖದಿಂ ಸೀೞ್ದು ಸೀೞಿಂಬುಳಾಡಿ ಪರಿಗತಪರಿಶ್ರಮನಾಗಿ ಜಲಗ್ರಹಣಾಭಿಲಾಷೆಯಿಂ ಯಮುನಾತೀರದೊಳ್ ಬರುತ್ತಿರ್ದು,

ಟಿ— ೧೯. ಸೀೞಿಂಬುಳ್—"ಸೂಸಾಟಂ." ಶಬ್ದಸಾರ.

ಪಾ. 1. ದಂಡಾಗಿ. ಗ॥ 2. ಭೀಕರ ಪ್ರಕರ. ಗ॥

ಘನನಿನದಕ್ಕನುರೂಪಮಿ।
ದೆನೆ ಸಂಜೀವಕನಳುರ್ಕೆಯಿಂ ಕೆಲೆಯೆ ಮಹಾ॥
ಧ್ವನಿಯುಂ ತೊಟ್ಟನೆ ಕೇಳ್ದೊಡೆ।
ಮನದೊಳ್ ಪುದಿದೊಂದು ಶಂಕೆ ನಿಲೆ ಮೃಗರಾಜಂ ॥80

ಇದು ನಿರ್ಘಾತವೊ ಮೇಣ್ ನೆಲಂ ಮೊಱಗಿತೋ ಮೇಣ್ ಘೋರರನಿರ್ಘೋಷಮು। ಣ್ಮಿದುದೆಂಬಂತೆ 'ಸಿಡಿಲ್ ಸಿಡಿಲ್ದೆಱಗಿತೋ[1] ಪೇೞಿಂತಿದೇನೆಂದು ಚಿ॥ ತ್ತದೊಳಾವರ್ತಿಸಿ ನೋಡೆ ವಿಸ್ಮಯಮದೊಂದಾಗಿರ್ಪಿನಂ ನೀರ್ಗೆ ಪೋ। ಗದೆ ತೃಷ್ಣಾತುರನಾಗಿಯುಂ ಮಗುೞ್ದು* ದಾಸಿಂಹಂ ಭಯಭ್ರಾಂತಿಯಿಂ॥81 [೯

ವ॥ ಅಂತತಿಕ್ಷುಭಿತಹೃದಯನಾಗಿ ತೊಟ್ಟನೆ ಮಗುೞ್ದಲ್ಲಿಯುಂ ನಿಲ್ಲದತಿವಿಸ್ತೀರ್ಣಶಾಖಾಸಂಕೀರ್ಣಮಪ್ಪುದೊಂದು ವಟವಿಟಪಿಯ ಕೆಳಗೆ ತರುಣಹರಿಣವೃಕವರಾಹಋಕ್ಷ ತರಕ್ಷು ಪ್ರಮುಖನಿಖಿಲಮೃಗಗಣಪರಿವೃತನುಮಾಗಿಯಾಕಾರಸಂವರಣೆಯನುಂಟುಮಾಡಿಕೊಂಡಿರ್ಪುದುಂ;

ಆಪ್ರಸ್ತಾವದೊಳ್ ಕರಟಕನುಂ ದವನಕನುಮೆಂಬೆರಡು ನರಿಗಳ್ ಆಸಿಂಹಕ್ಕನ್ವಯಾಗತರುಂ ಹಿತರುಂ ಬುದ್ಧಿವೃದ್ಧರುಮಪ್ಪ ಮಂತ್ರಿಸೂನುಗಳಪ್ಪುದಱಿಂ, ಪಿಂಗಳಕನಿರವಂ ಕಂಡು ದವನಕಂ ಕರಟಕಂಗೆಂಗುಂ:—ನಮ್ಮರಸನೀಗಳ್ ತೃಷಾರ್ತನಾಗಿ ಜಗುನೆಗೆ ಪೋಗುತ್ತುಮಾಕಸ್ಮಿಕಂ ಮಗುೞ್ದು ಬಂದು, ಅಪಮಾನಂಬಟ್ಟ ಉಪಧಾವಿಶುದ್ಧನಪ್ಪ ಮಂತ್ರಿಯಂತಾಕಾರಸಂವರಣೆಯನುಂಟುಮಾಡಿಕೊಂಡಿರ್ಪ[2]ದಾವಕಾರಣಮಾರಯ್ವಂ,[2] ಬನ್ನಿಮೆಂಬುದುಂ; [೨೦

ಕರಟಕನೆಂಗುಂ:— ನಾವಪ್ಪೊಡೆ ಪೞಿಯರಮಕ್ಕಳುಮಪ್ಪರುಮೆಂಬನಿತೆಯಲ್ಲದೆ ಆವ ಕಾರ್ಯಕ್ಕಮಲ್ಲಂ. ನಮ್ಮರಸನೀಗಳ್ ಕರಂ

ಪಾ— 1. ದಿಟಂ ಸಿಡಿಲ್ ಸಿಡಿದುದೋ. ಖ ॥ 2. ಆವ ಕಾರ್ಯಮೆಂಬುದನಾರಯ್ವಂ. ಕ ॥ ಗ ॥

ವಿರಸನುಮಪಮಾನಿತನುಮಾಗಿರ್ದಪಂ. ಈಯುವಸರದೊಳ್ ನಾಂ ಸ್ವಾಮಿಹಿತ[1]ಮಹತ್ವಮಂ[1]ಕೈಕೊಂಡು ನುಡಿವುದು ನಯಮಲ್ಲಂ. ಈ ತನೇತರ್ಕಿಚ್ಛೈಸಿದನೆಂಬುದನಱಿಯಲ್ ಬಾರದು. ಈತನಿರವಂ ಕಂಡೀಯಭಿನವಪ್ರಧಾನರುಂ ಪೊಸಪಸಾಯ್ತರುಂ ತಾವೇನಂ ನುಡಿವರ್ ನಾವದಂ ಕೇಳುತ್ತುಮಿರ್ಪುದೆ ಸಾಲ್ಗುಂ. ಈಗಳೇನಾನುಮೊಂದಂ ನುಡಿದೆವಪ್ಪೊಡೆ, ದುಷ್ಟಪರಿವಾರವೇಷ್ಟಿತನಪ್ಪರಸಂ ನಮಗೇನಂ ಬಗೆವನೆಂಬುದನೆಂತಱಿವೆವು. ಅದಱಿಂ ನಾಮುಸಿರದಿರ್ದಪುದೇ ಕಜ್ಜಂ. ಅದಲ್ಲದೆಯುಂ ನಮ್ಮಂತಾಪ್ತರಂ ಹಿತರಂ ಬುದ್ಧಿವಂತರುಮನವಿಶ್ವಾಸಂಗೆಯ್ದು, ಅನಾಪ್ತರುಮನಹಿತರುಮನವಿನೀತರುಮಂ ವಿಶ್ವಾಸಂಗೆಯ್ದು ಪ್ರಧಾನರಂ ಮಾಡಿ ನಡಪಿದ ಮೂಢಸಿಂಹಕ್ಕೆ [2]ಪಿಗೆಯ್ದುಂ[2] ಕಾರ್ಯಹಾನಿಯಾಗದೆ ಪೋಗದು; ಅದೆಂತೆನೆ:—

ಶ್ಲೋ || "ಅಭ್ಯಂತರಗತಾ ಬಾಹ್ಯಾ ಬಾಹ್ಯಾಶ್ಚಾಭ್ಯಂತರಂ ಗತಾಃ|
ಯೈರ್ನರಾ ನಿಧನಂ ಯಾಂತಿ ಯಥಾ ರಾಜಾ ಕಚದ್ರುಮಃ ||" ೫

[ಟೀಕು—ಅರಸುಗಳ್ ಒಳಗೆ ನಡೆವವರಂ ಹೊಱಗಿಕ್ಕಲಾಗದು. ಹೊಱಗೆ ನಡೆವವರನೊಳಗಿಕ್ಕಲಾಗದು. ಆಹಗೆ ಮಾಡಿದವಂ ಕಿಡುವಂ. ಅದು ಎಹಗೆಂದೊಡೆ, ಕಚದ್ರುಮನೆಂಬರಸಿನಹಗೆ.]

ಎನೆ—ದವನಕನದೆಂತೆನೆ—ಕರಟಕಂ ಪೇೞ್ಗುಂ:—

## ೧. ಕಚದ್ರುಮನ ಕಥೆ.

ಮಹಾದ್ರುಮನೆಂಬರಸಂಗೆ ಕಚದ್ರುಮನೆಂಬ ಮಗಂ ಪುಟ್ಟಿ, ಬಾಲಕಾಲದಿಂ ತೊಟ್ಟು ವೃದ್ಧೋಪಾಸ್ತಿಯಂ ಬಿಟ್ಟು, ಸಪ್ತವ್ಯಸನವಶಗತನಾಗಿಯುಂ, ಖಲಜನಸಂಗತನುಮಾಗಿಯುಂ, ನಡೆಯುತ್ತುಮಿರೆ; ಕೆಲವು ಕಾಲದಿನಾತನ ತಂದೆ ಮಹಾದ್ರುಮಂ ದೀರ್ಘನಿದ್ರಿತನಪ್ಪುದುಂ,

ಪಾ— 1. ಮಹತ್ತರಸತ್ವಮಂ. ಖ || 2. ಆವತೆಱದೊಳಂ, ಕ || ಆರಿದುಂ. ಗ ||

ಕಚದ್ರುಮಂ ರಾಜ್ಯಪದವಿಯೊಳ್ ನಿಂದಂ. ಆತಂ ನೀತಿಬಾಹ್ಯನಪ್ಪುದಱಿಂ ಪೂರ್ವಾಪರವಿಚಾರವಿಕಳನಾಗಿ, ಹಿತಪುರೋಹಿತಮಂತ್ರಿಮಹಾಸಾಮಂತಾಂತರ್ವಂಶಿಕಮಹಾಪ್ರಧಾನಶ್ರೀಕರಣಸೇನಾನಾಯಕಾದ್ಯನೇಕರ ವೃತ್ತಿಪ್ರಪತ್ತಿಗಳಂ ಕಳೆದುಕೊಂಡು, ತನ್ನೊಡನಾಡಿಗಳಪ್ಪ ಭಂಡಮಂಡಲಿಯನೆ ಪ್ರಧಾನಸಾಮಂತಾದಿಶಿಷ್ಟರ್ಕಳಂ ಮಾಡಿ, ತಾಂ ಪಿತೃವಿತ್ತಮದೋನ್ಮತ್ತನಾಗಿ, ಧರ್ಮದೊಳ್ ಬಹಿರ್ಮುಖನುಂ, ಅರ್ಥದೊಳನ್ಯಾಯೋಪಾರ್ಜಿತಾರ್ಥನುಂ, ಕಾಮದೊಳತಿಕಾಮಿಯುಂ, ಮೋಕ್ಷದೊಳ್ ನಿರಪೇಕ್ಷಕನುಮಾಗಿ, ರಾಮಾದ್ಯನೇಕರಾಜ[1]ದತ್ತಿ[1]ಗಳಪ್ಪನೇಕಭೂದೇವಭೋಗಾಗ್ರಹಾರಂಗಳನಾಗ್ರಹದಿಂದಱಿದು, ಕರಭರ [2]ಕ್ಷಮ[2]ಮಪ್ಪ ನಾಡಂ ಬೇಡರಂತೆ ಪರಿಪರಿದು ನಿರವಶೇಷದಿಂ ಕಿಡಿಸಿಯುಂ, ಶಿಷ್ಟರ್ಗನಿಷ್ಟಮಂ ಮಾಡಿಯುಂ, ದುಷ್ಟಕಷ್ಟರ್ಗಿಷ್ಟಮಂ ಮಾಡಿಯುಂ, ಕುಳವರ್ಗ ತಳವರ್ಗಮುಮಂ ಪಱಿಯನಿಯೋಗಿಗಳುಮಂ, ನಾನಾದೇಶಿಗಳುಮಪ್ಪ ವ್ಯವಹಾರಿಗಳುಮಂ ನೆವವಿಟ್ಟು ಕವರ್ದುಕೊಂಡು, ಸಮಸ್ತವಸ್ತುವಾಹನಂಗಳಂ ತನ್ನೊಡನಾಡಿಗಳಪ್ಪ ಭಂಡಮಂಡಲಿಗೆ ಸೂಱೆಗೊಟ್ಟು, ಇಂತು ಸಪ್ತಾಂಗದೊಳೇಕಾಂಗಮುಱಿಯೆ; ಕಚದ್ರುಮನ ರಾಜ್ಯಂ ಕಳಕುಳಮಾಗಿರ್ದುದನಾತನ ದಾಯಾದಂ ಸಿಂಹ[3]ಬಳ[3]ನಱಿದು ಮೇಲೆತ್ತಿ ಬರೆ; [4]ಮೂಲಭೃತ್ಯಸುಹೃತ್ಸೇನಾಟವಿಕರೆಲ್ಲರುಂ[4] ಮುನ್ನಮೇ ಭೀತರುಮಪಮಾನಿತರುಮಪ್ಪುದಱಿಂದುಪೇಕ್ಷಿತರುಂ, ಆತನ ಭಂಡಮಂಡಲಿಯೊಳ್ ಕೆಲರೋಡಿಯುಂ, ಕೆಲರಹಿತ

ಟ—೮. ದತ್ತಿ—ದಾನ.

ಪಾ— 1. ದತ್ತಂ. ಕ ‖ ಗ ‖ 2. ಕ್ಷೇತ್ರ. ಕ ‖ ಗ ‖ 3. ನಾದ. ಖ ‖
4. ಮೌಳಿಭೃತ್ಸುಹೃದಾದಿಹಿತವರೆಲ್ಲರುಂ. ಕ ‖ ಗ ‖

ರೊಳ್ ಕೂಡಿಯುಂ, ಇಂತೆಲ್ಲಂ ಯಥಾಯಥವಾಗೆ; ಕಚಧ್ರುವುಂ ನಿರ್ಬುದ್ಧಿಯೊರ್ವನೆ ಕರುವಾಡದೊಳ್ ಶ್ವೇತಕಪೋತಸಂತಿರ್ದು ಶತ್ರುಸಂಗ್ರಹಣಕ್ಕೊಳಗಾದಂ.

ಇಂತೀಪಿಂಗಳಕನೇಗೆಯ್ದುವಾಗದಿರಂ. ಏನೊಂದು ಕಾರ್ಯಮು ಮಂ ನಾಂ ಪೊಱಗಿರ್ದು ನೋಡುತಿರ್ಪುದೆ ಸಾಲ್ಗುಂ. ನಾವೀರಾಜ ಕಾರ್ಯದೊಳ್ ತೊಡರ್ದು ಪರ್ಯಾಲೋಚ[1]ನಾಪರಿವೃತ್ತಿಯೊಳೇ[1]ನಪ್ಪು ದು? ಎಂತುಂ ಅವ್ಯಾಪಾರವೃತ್ತಿಯಾವುದುಂ ಪೊಲ್ಲದು; ಎಂತೆನೆ:—

ಶ್ಲೋ || "ಅವ್ಯಾಪಾರೇಷು ವ್ಯಾಪಾರಂ ಯೋ ನರಃ ಕರ್ತುಮಿಚ್ಛತಿ |
ಸಏವ ನಿಧನಂ ಯಾತಿ ಕೀಲೋತ್ಪಾಟೀವ ವಾನರಃ||" ೬ [೯

[ಟೀಕು—ವ್ಯಾಪಾರಿಸುವದಕ್ಕೆ ಯೋಗ್ಯವಲ್ಲದಂತಪ್ಪ ಠಾವಿನೊಳ್ ಆವನೊರ್ವಂ ವ್ಯವಹರಿಸಲಿಚ್ಛೈಸಿಹಂ, ಆತಂ ಕೀಲನುರ್ಚಿದ ಕೋಡಗನಂತೆ ಕೇಡನೈದುವಂ.]

ಎಂಬ ಕಥೆಯಂತಕ್ಕುಮೆನೆ—ದವನಕನಾಕಥೆಯೆಂತೆನೆ—ಕರಟಕಂ ಪೇೞ್ಗುಂ:—

### ೩. ಕೀಲನುರ್ಚಿದ ಕೋಡಗನ ಕಥೆ.

ಗಿರಿನಗರಮೆಂಬ ಪೊೞಲೊಳ್| [೧೫
ಧರೆಗಧಿನಾಥಂ ಸುಶರ್ಮನೆಂಬಂ ಲೋಕೋ||
ತ್ತರವಾಗೆ ದೇವತಾವುಂ|
ದಿರಮಂ ಮಾಡಿಸುತುಮಿರ್ಪಿನಂ ಕೆಲವು ದಿನಂ ||82

ವ|| ಬಂದು ದೆವಸಂ ಮಧ್ಯಾಹ್ನಸಮಯಮುಪ್ಪನ್ನೆಗಂ ಭರಂಬಟ್ಟು ಕೆಲಸಂಗೈದಲ್ಲಿಯ ಬಿನ್ನಣಿಗರುಂ [2]ಕರ್ಮಕಾರ[2]ರುಂ ತಮ್ಮ ತಮ್ಮ ಮ ನೆಗುಣಲ್ಪೋಪುದುಂ; ಅದಱ ಕೆಲದ ನಂದನವನದೊಳ್ ವರ್ತಿಸುತಿ ರ್ಪ ಮರ್ಕಟಯೂಥಂ ಯಥಾಸ್ವೇಚ್ಛೆಯಿಂದತ್ತಮಿತ್ತಮೆತ್ತಂ ಪರಿಪರಿ

ಪಾ— 1. ನದೊಳೇ. ಕ || ಗ || 2. ಕಮ್ಮಾಱ. ಗ ||

ದು, ದೇಗುಲದ ಶಿಖರಮನಡ[1]ರ್ದೇಱಿ ಬಿಟ್ಟಿರ್ದಿ[1]ಟ್ಟಿಗೆಯುಂ ಕೆದಱಿಯುಂ, ನೇರಿರ್ದ ತಿದಿಗಳಂ ಸೀೞ್ದುಂ, ಇದ್ದಿಲ ರಾಸಿಯುಂ ಸೂಸಿಯುಂ, ನಿಸರ್ಗಚಪಳಸ್ವಭಾವದಿಂದಾಡುತಿರ್ದು; ಅವಱೊಳಗತ್ಯಾಸನ್ನಕಾಲ ಮೃತ್ಯುವಶಗತನಪ್ಪುದೊಂದು ಗೋಲಾಂಗೂಲಂ ಬಂದು, ಕರಗಸಿಗರೊಂದು ಭಾಗಂಬರಂ ಸೀೞ್ದು ನೂಲ ತಲೆಯೊಳ್ ಕೀಲಂ ಬೆಟ್ಟಿರ್ದ ಮರನಂ ಕಂಡದಱ [2]ಮೇಲೆ ಕುಳ್ಳಿರ್ದು,[2] ಮುನ್ನಂ ಸೀೞುತ್ತಿರ್ದುೞಿದ ಪಲಗೆಗಳೆರಡುಮನೆಡಗಲಸಿರ್ದು ಬೆಟ್ಟಿರ್ದ ತಱಿಯದ ಕೀಲನಿರ್ಕೈಗಳಿಂದಂ ಪಿಡಿದು, ಆರ್ಪ ಭರದಿಂದಲ್ಲಾಡಿ ಕೀೞ್ವುದುಮಾಪಲಗೆಗಳೆರಡುಂ ತೊಟ್ಟನೆ ಮರ್ಮಪ್ರದೇಶವನೌಂಕುವುದುಂ; ಆಬಲೀಮುಖಂ ಕಾಲಮುಖಮನೆಯ್ದಿತ್ತು. [೧೦

ಅದುಕಾರಣದಿಂದದಱಿಂದಮಪ್ಪುದು; ಉದರಭರಣಮಾತ್ರಮಪ್ಪಂತೆ ರಾಜಾನುಸೇವನಂಗೆಯ್ದಿರ್ಪೆವು ಎನೆ; ದವನಕನಿಂತೆಂದಂ: —

ಶ್ಲೋ || “ಸುಹೃದಾಮುಪಕಾರಕಾರಣಾತ್ ದ್ವಿಷತಾಮಪ್ಯಪಕಾರಕಾರಣಾತ್ |
ನೃಪಸಂಶ್ರಯ ಇಷ್ಯತೇ ಬುಧೈರ್ಜಠರಂ ಕೋ ನ ಬಿಭರ್ತಿ ಕೇವಲಂ ||” ೭

[ಟೀಕು—ಮಿತ್ರರ್ಗುಪಕಾರಮಂ ಶತ್ರುಗಳ್ಗಪಕಾರಮಂ ಮಾೞ್ಪುದೇ ಕಾರಣಮಾಗಿ ನೃಪಸೇವೆಯುಂ ಮಾಡಲ್ವೇೞ್ಕುಮೆಂದು ವಿದ್ವಾಂಸರ್ ಪೇೞ್ವರ್. ತನ್ನೊಡಲಂ ಪೊರೆಯಲಱಿಯದವನಾರುಮಿಲ್ಲಂ.]

ಎಂಬೀಪುರಾತನವಾಕ್ಯಮುಂಟು. ಅದಱಿಂ ನಾವಪ್ಪೊಡೆ, ಮೃಗಾಧಿರಾಜಂಗನ್ವಯಾಗತರುಂ ಹಿತರುಮಪ್ಪ ಸಮಗಿನಿತು ಕುಡದಿರ್ದೊಡಂ, [೨೦

ಶ್ಲೋ || “[3]ಪ್ರಭುರ್ಗುಣವಿಹೀನೋಽಪಿ ವಿಪತ್ಸು ನ ಪರಿತ್ಯಜೇತ್[3] ||” ೮

[ಟೀಕು—ಗುಣಮಿಲ್ಲದವನಾದೊಡೆಯುಂ ಒಡೆಯನಂ ಆಪತ್ತಿನಲ್ಲಿ ಬಿಡಲಾಗದು.]

ಪಾ— 1. ಡರ್ದು ಪೆಟ್ಟ ಬಟ್ಟಣಿಗೆಯಿ. ಕ || 2. ಮೇಲಿರ್ದುದಱೆ. ಗ ||
3. ಶ್ಲೋ || ನಿರ್ಗುಣಂ ಚಾಪಿ ಭರ್ತಾರಮಾಪತ್ಸು ನಪರಿತ್ಯಜೇತ್. ಕ ||

ಎಂಬ ನೀತಿವಾಕ್ಯಮುಂಟದಱಿಂದಾಳ್ದಂ ಎಂತು ನಿರ್ಗುಣನಾದೊಡಂ, ಗುಣವಂತನಪ್ಪ ಭೃತ್ಯನಾಳ್ದನೆಡರಂ ಕಡೆಗಣಿಸಿಪುರ್ದೊಪ್ಪದು. ಅಲ್ಲದೆಯುಂ ನಮ್ಮರಸನೀಗಳ್ ಭಯಾತುರನುಂ, ಕಾರ್ಯಾತುರನುಮಾಗಿರ್ದಪಂ; ಗುಪ್ತಕಾರ್ಯಮನಾಪ್ತವರ್ಗಕ್ಕಲ್ಲದುೞಿದರ್ಗಱಿಪುವನಲ್ಲಂ; ಅದಱಿಂದರಸನನೆಯ್ದಿ ಕಾರ್ಯದೊಳಗನಱಿವೆಮೆನೆ—ಕರಟಕನಿಂತೆಂದಂ:— ಅರಸಂ ಭೀತನಾದುದನೇತೆಱದಿಂದಱಿದೆಯೆನೆ – ದವನಕನಿಂತೆಂದಂ:— [೭

ಶ್ಲೋ || "ಉದೀರಿತೋರ್ಥಃ ಪಶುನಾಪಿ ಗೃಹ್ಯತೇ ಹಯಾಶ್ಚ ನಾಗಾಶ್ಚ ವಹಂತಿ ಚೋದಿತಾಃ|ಅನುಕ್ತಮಪ್ಯೂಹತಿ ಪಂಡಿತೋ ಜನಃ ಪರೇಂಗಿತ ಜ್ಞಾನಫಲಾಹಿ ಬುದ್ಧಯಃ|| "೯

[ಟೀಕು—ನುಡಿಯಲ್ಪಟ್ಟ ಪ್ರಯೋಜನಮಂ ಪಶುವುದೊಡಮಱಿವುದು; ಕುದುರೆಗಳುಂ ಆನೆಗಳುಂ ನೂಂಕಲೊಂಕಲುಂ ನಡೆವುವು; ವಿವೇಕಿಗಳಪ್ಪವರ್ಕಳ್ ಪೇೞದಿರ್ದರುಮಱಿವರ್; ಪೆಱರ ಅಂತರ್ಗತಮನಱಿವುದೇ ಬುದ್ಧಿಗೆ ಫಲಂ]

ಎಂಬುದಱಿಂದೀತನಿರ್ದಿರವೇ [1]ಭೀತನಾದುದ[1] ನಱಿಪಿದಪ್ಪುದು; ಈಯುವಸರದೊಳೊಳಪೊಕ್ಕು ತಿಳಿದು, ಅರಸನ ಮನದೊಳೊದವಿದ [2]ಭಯಮಂ ಕಳೆಯಲ್ವೇೞ್ಕುಮಂತೆ ನಾವಾಪ್ತರುಂ ಹಿತವರುಮಪ್ಪೆವೆನೆ[2]—ಕರಟಕನಿಂತೆಂದಂ:— [೧೬

ಸುರತಾಸಕ್ತನನನ್ಯಕಾರ್ಯಪರನಂ ನಿದ್ರಾಳುವಂ ಕೋಪಭೀ|
ಕರನಂ ವಾದಿತನೃತ್ಯಗೀತಮಧುರಾ[3]ಳಾಪೇಷ್ಟ[3]ಗೋಷ್ಠೀಮನೋ||
ಹರನಂ ಕುಕ್ಕುಟಮಲ್ಲಮೇಷ[4]ಮಹಿಷೇಭದ್ವಂದ್ವ[4]ಯುದ್ಧಕ್ರಿಯಾ|
[5]ಪರನಂ[5] ಭೂಪನನೆಯ್ದಿ ಬಿನ್ನವಿಸಬೇಡೇನಾದೊಡಂ ಸೇವಕಂ||83

ಪಾ— 1. ಭೀರುವಪ್ಪುದ. ಕ || ಗ || 2. ವಿಷಾದಮಂ ಕಳೆವಾಪ್ತರಪ್ಪೆವೆನೆ. ಗ ||
3. ಳಾಪಾದಿ. ಕ || ಗ || 4. ಮಹಿಷದ್ವಂದಾದಿ. ಕ ||
5. ತುರನಂ. ಕ || ಗ ||

ಅರಿನೃಪರುತ್ಸವಮಂ ಕೇ।
ಳ್ದರೆಯುಂ ಸೆಂಡಾಡುತಿರೆಯುಮಾನೆಯನೇಱು ॥
ತ್ತಿರೆಯುಂ ಮಂತಣದೊಳ್ ಕು।
ಳ್ಳಿರೆಯುಂ ಬಿನ್ನವಿಸಲಾಗ[1]ದೆಂತುಂ ಭೃತ್ಯಂ[1] ॥84
ಭೀತನನಲಸಿದನಂ ಕಾ। [೫
ರ್ಯಾತುರನಂ ಪಸಿದನಂ ತೃಷಾಪೀಡಿತನಂ॥
ದ್ಯೂತಮೃಗವ್ಯಸನಜನೋ।
ಪೇತನನಱಿ[2]ದಱಿದು[2] ಬಿನ್ನವಿಪ್ಪಂ ಗಾಂಪಂ ॥85

ವ॥ ಇಂತೀಸೇವಾಧರ್ಮಮಂ ನಾವಱಿದುಮಱಿಯದರಂತೆ ಪೊಕ್ಕು
ನುಡಿವುದು ತಕ್ಕುದಲ್ಲೆನೆ; ದವನಕನಿಂತೆಂದಂ:— [೧೦

ನೀನೆಂದಂತೆ ನೀತಿವಿದನಪ್ಪರಸನನೇತೆಱದಿಂ ಸೇವಿಸುವುದೇ ನೀತಿಯಪ್ಪುದು; ಅವಿನೀತನುಂ, ಅಪ್ರತಿಷ್ಠಿತನುಂ, ಸ್ವಪರಾಂತಸ್ಥವಿದನುಮಲ್ಲದರಸನನಱಿದಿಂಬಱಿಕ್ಕೆ [3]ಸಮೀಪಕ್ಕೆ ಪೋಗಿ ದುರಭಿಮಾನದಿಂ ನುಡಿವುದು ತಕ್ಕುದಲ್ಲಂ; ಅದೆಂತೆನೆ:—[3]

ಶ್ಲೋ ॥ "ಆಸನ್ನಮೇವ ನೃಪತಿರ್ಭಜತೇ ಮನುಷ್ಯಂ ವಿದ್ಯಾವಿಹೀನಮಕುಲೀನಮಪಂಡಿತಂ ವಾ। ಪ್ರಾಯೇಣ ಭೂಮಿಪತಯಃ ಪ್ರಮದಾ ಲತಾಶ್ಚ ಯಃ ಪಾರ್ಶ್ವತೋ ವಸತಿ ತಂ ಪರಿವೇಷ್ಟಯಂತಿ ॥ "೧೦

[ಟೀಕು—ಅರಸುಗಳ್ ತಮ್ಮ ಪೊರೆಯೊಳಿರ್ದೋರ್ಲೈಸುವ ಮನುಜಂ ವಿದ್ಯೆಯಿಲ್ಲದವನಾದೊಡಂ, ಅಕುಲೀನನಾದೊಡಂ, ಅಯೋಗ್ಯನಾದೊಡಂ ಸ್ವೀಕರಿಸುವರ್. ಸ್ತ್ರೀಯರ್ಕಳ್ ಆವನೊರ್ವಂ ಕೆಲದೊಳಿರ್ದಪನವನನೇ ಪಿಡಿವರ್. ಲತೆಗಳ್ ಸಮೀಪದಲಾವಮರನಿರ್ದಪುದದನೇ ಪಿಡಿವುವು.]

1. ದಾಳ್ದಂಗೆಂತುಂ. ಕ ॥ ಗ ॥ 2. ದಯ್ದಿ. ಗ ॥
3. ದುರಭಿಮಾನಮಂ ಕೈಕೊಂಡಿರದೆ ದುಷ್ಟರಾಗಿ ಮುಟ್ಟಿಪೋಗಿ ನುಡಿದನುಭವಿಸುವಂತಪ್ಪಂಗಲ್ಲದೆ ಪೆಱಂಗಾಗದು. ಅಲ್ಲದೆಯುಂ ಗ ॥

ಎಂಬ ಪುರಾತನನೀತಿಗಳೊಳವೆಂಬುದುಂ; ಕರಟಕನಿಂತೆಂದಂ:—

ವಾಕ್ಯಂ || "ಬುದ್ಧೇಃ ಫಲಮನಾಗ್ರಹಃ ||" ೧೧

[ಟೀಕು—ಬುದ್ಧಿಗೆ ಫಲವು ಆಗ್ರಹವಿಲ್ಲದಿರುವುದು.]

ಎಂಬ ನೀತಿಯಿಂದೆನ್ನ ಆಗ್ರಹಮಂ ಮಾಣ್ದೆಂ: ನಿನ್ನ ದುರಾಗ್ರಹ ದಿಂದೇನಾನುಮೊಂದು ದುರ್ಣಯಮಾಗದಿರದು: ಅದುಮಂ ಕಾಣಲ ಕ್ಕುಂ: ನಿನಗಿದುವೇ ಕರ್ತವ್ಯಮಪ್ಪೊಡೆ, ಪೋಗೆಂಬುದುಂ; ದವನಕಂ ಬಂದು, ಮಹಾಪ್ರತೀಹಾರನಪ್ಪ ಸುಭದ್ರನೆಂಬುದೊಂದು ವನಮಹಿಷನ ಸಾರೆವಂದು,—ಅರಸನವಸರಮಾವುದೆಂದೊಡೆ, ಅರಸನೆನಸುಂ ವಿರಸ ನಾಗಿರ್ದಪಂ, ನಿಲ್ಲೆಂಬುದುಂ; ಕಟ್ಟೆದಿರೊಳ್ ನಿಂದನಂ ಪಿಂಗಳಕಂ ಕಂಡು,—ಅರಸುಗಳ್ ತಮಗೆನಿತುಂ ಸಮುಚಿತ್ತಮಿಲ್ಲದಿರ್ದೊಡಂ ಸಮ್ಮು ಖಕ್ಕೆ ಬಂದ ಪ್ರಾಣಿಮಾತ್ರಕ್ಕೆ ಪರಾಙ್ಮುಖರಾಗಲಾಗದು, ದಾಕ್ಷಿಣ್ಯಂಬೇ ಳ್ಕುಮೆಂಬ ನೀತಿಯುಂಟು; ಈತನನ್ವಯಾಗತನುಮಾಪ್ತನುಂಕಾರ್ಯ ಸಹಾಯನುಮಾಗಿರ್ಪಂ; ಈಯವಸರದೊಳೀತನಂ ಬರಿಸಿ ಎನ್ನ ಮ ನೋಗತಕಾರ್ಯಮಂ ಪೇಳಿಲ್ವೇಳ್ಕುಮೆಂಬುದಂ ಬಗೆದು,—[1]ಬರವೇ ಳ್ಕೆಂ[1]ಬುದುಂ; ವಿನೀತವೇಷಂ ಮೆಲ್ಲಮೆಲ್ಲನಾಸ್ಥಾನಮಂ ಪೊಕ್ಕು, ಮೃ ಗಾಧಿರಾಜನನೆಯ್ದೆವಂದು, ಸಾಷ್ಟಾಂಗಮೆಱಗಿ, ಪೊಡೆವಟ್ಟೊಡೆ,—ಇತ್ತ ಬಾಯೆಂಬುದುಂ, ಮಹಾಪ್ರಸಾದಮೆಂದು ಯಥೋಚಿತಪ್ರದೇಶದೊಳ್ ಕುಳ್ಳಿರ್ದ ದವನಕನ ಮೊಗಮಂ ಪಿಂಗಳಕನಾದರಂ ಬೆರಸು ನೀಡುಂ ಭಾವಿಸಿ ನೋಡಿ— [೧೯

ಏಂ ಗಳ! ದವನಕ ಪಲವು ದಿ |
ನಂಗಳ್ ಕಂಡಱಿಯೆವೆಯ್ದೆ ಬಾರದುದುಂ ಕ ||
ಜ್ಜಂಗಳನಱಿಪದುದುಂ ಸಚಿ |
ವಂಗಂ ಕೂರ್ಪರ್ಗ[2]ಮೆಂದುಮಿವು ಗುಣದೊಳಗೇ[2]|| 86

ಪಾ—1. ಬರಲಿವೆಂ ಕ || ಗ || 2. ಗೆ ನೋಡಲಿದು ಗುಣಮೊಳವೇ. ಗ ||

ಎಂದಿನ ಮಾಳ್ಪ ಮನ್ನಣೆಯನೇಂ ಮಱೆದಿರ್ದನೊ ನಿನ್ನ ಪೇೞ್ದು
ದೊಂ ¦ ದಂಡಮನೊಲ್ಲದನ್ನಿಗರ ಪೇೞ್ದುದುಗೆಯ್ದನೊ ಮೂಲವೃತ್ತಿ
ಯಿಂ ‖ ದೊಂದಿ ನಿರಂತರಂ ನಡೆವ ಸಾಮ್ಯವನಾಂ ಪೆಱರ್*ಗಿತ್ತೆನೋ
ಮನಂ । ನೊಂದವೊಲೆನ್ನ ಕಾರ್ಯಮನುಪೇಕ್ಷಿಸಿ ಮಾಣ್ದುದಿದಾವಕಾರ
ಣಂ ‖87 ಎಂಬುದುಂ; [೫

ದವನಕಂ—ಈತಂ ಕಾರ್ಯಾತುರನಪ್ಪುದು ತಪ್ಪದು; ಎನ್ನಂ ಕರಂ
ಮನ್ನಿಸಿ ಮಾತಾಡಿದಪಂ; ಎನಗಂ ಮನೋರಥಸಿದ್ಧಿಯಾಗೆ ಬಗೆದೋ
ರ್ಪುದು: ಅದಱಿಂದೀತನ ಬುದ್ಧಿಯಂ ನಿಶ್ಚಯಮಾಗಱಿದು ಬೞಿಕದ
ಕರ್ಜ[1]ತಕ್ಕುದಂ[1] ನೆಗೞ್ವೆನೆಂಬುದಂ ಮನದೊಳ್ ಬಗೆದು ಪಿಂಗಳಕಂಗಿಂ
ತೆಂದಂ:—ದೇವರ ಶ್ರೀಪಾದಸೇವಕರೊಳ್ ನಾನಾವದೊರೆ? ಅರಸುಗೆ
ಯ್ವಾತಂಗೆಂತಪ್ಪನುಂ ಬಾೞ್ತೆಯಾಗದನಿಲ್ಲಂ. ಅದೆಂತೆನೆ:— [೧೧

ಶ್ಲೋ ‖ “ದಂತಸ್ಯ ನಿರ್ಘರ್ಷಣಕೇನ ರಾಜನ್ ಕರ್ಣಸ್ಯ ಕಂಡೂಯನಕೇನ ವಾಪಿ।
ತೃಣೇನ ಕಾರ್ಯಂ ಭವತೀಶ್ವರಾಣಾಂ ಕಿಮಂಗವಾಕ್ಪಾಣಿಮತಾ ನರೇಣ ‖” ೧೨

[ಟೀಕು—ಪಲ್ಲಂ ಸುಲಿವೊಡಂ ಕಿವಿ ತೀಂಬೊಡೆ ತುಱಿಸುವೊಡಂ ಪುಲ್ಲಿಂದೆನಿತಂ ಪ್ರ
ಯೋಜನಮುಂಟು. ಕೈಕಾಲ್‌ನಡೆನುಡಿಯುಳ್ಳ ಮನುಷ್ಯನಿಂದೆಂತುಂ ಕಾರ್ಯಮುಂಟು.]

ಎಂಬ ರಾಜನೀತಿಯನಱಿವಿರಪ್ಪುದಱಿಂ ಎನ್ನನಾದೊಡಂ ಮನ್ನಿ
ಸವೇೞ್ಪುದು. “ವೃಂದಂ ನರೇಂದ್ರಾಯತೇ” ಎಂಬ ನೀತಿಯಂತೆ
ಪೞೆಯರಮಕ್ಕಳನೆಂತುಂ ಪೊರೆಯಲೆವೇೞ್ಕುಂ. ಏತದರ್ಥಮಾಗಿ
ದೇವರ್ ದಯೆವೆರಸು ಬೆಸಸಿದಿರ್. ಎಮ್ಮಂತಪ್ಪ ಪ್ರಾಣಿಮಾತ್ರಂಗಳಿಲ್ಲ
ದೊಡೆ ಅಪ್ರತಿಮ[2]ಪರಾಕ್ರಮ[2]ನಪ್ಪ ನಿಮಗೆ ತೀರದ ಕಜ್ಜಮಾವುದಾನು
ಮಿಲ್ಲ. ಇನಿತು ದಿವಸಮೆಯ್ದೆ ಬಾರದುದೆಲ್ಲಂ ನೀಮೆನ್ನನೆನ್ನವನೆನ್ನದ
ಕಾರಣದಿಂ, ದೂರದೊಳಿರ್ದು ನಿಮ್ಮಭ್ಯುದಯದೊಳ್ ಸುಖಂಬಾೞ್ದನ್ವ

ಪಾ.—1. ತಕ್ಕಂದದೊಳ್. ಗ ‖ 2. ಪ್ರತಾಪಪರ. ಗ ‖

ಯಾಗತನಪ್ಪುದಱಿಂ ನಿಮ್ಮ ಸಿರಿಯುಂ ಕಣ್ದೆವಿ ನೋಡಿಯುಂ ನಿಮಗಪ್ಪ ಯೋಗಕ್ಷೇಮಂಗಳನಾರೈದುಂ ಸುಖದೊಳಿರ್ಪೆಂ. ಇಂದು ನಿಮ್ಮ ಮನಸ್ಸಿನೊಳನಿಸಾನುಂ ಶಂಕೆವೆರಸಿದ ಚಿಂತೆಯುಂ ಕಂಡು ಇದಱ ಕಾರಣಮಂ ನಿಮ್ಮಡಿಯುಂ ಬೆಸಗೊಂಡು ತಿಳಿದು ಅಱಿಕ್ಕಿದರ್ಕೆ ತಕ್ಕಬುದ್ಧಿಪ್ರತೀಕಾರಮಂ ಮಾಡಲುಂ ನಿಮ್ಮ ಸಂತೋಷದೊಳ್ ಕೂಡಲುಮೆಂದು ಬಂದೆಂ. ಎನಗಿನಿಸಾನುಂ ಏಕಾಂತಮಂ ದೇವರ್ ದಯೆಗೆಯ್ವುದೆಂದೆನಲ್; ಮೃಗಾಧಿರಾಜಂ ಶ್ವಾಪದಯೂಥಮಂ [1]ಪೋಗಲ್[1] ವೇೞ್ದುದುಂ; ದವನಕನಿಂತೆಂದಂ:– [೮

ನೀರನುಣಲ್ಕೆ ಪೋಗಿ ಯಮುನಾನದಿಗೊರ್ಮೆಯೆ ಬೆರ್ಚಿದಂತೆ ನಿ।
ಷ್ಕಾರಣಮೇಕೆ ನೀಂ ಮಗುೞ್ದು* [2]ನಿನ್ನೊಳೆ[2] ಚಿಂತಿಸುತಿರ್ದೆ ಪೇೞಿದಂ॥
ಪಾರದೆ ಬೇೞಿದೊಂದುಮನನೂನಮದಾವಿಲಕುಂಭಿಕುಂಭನಿ।
ರ್ದಾರಣ[3]ದಾರುಣಾ[3]ಯತನಖಪ್ರಕರೋದ್ಗತದಂಷ್ಟ್ರಭೂಷಣಾ ॥ ೪೪

ಎಂಬುದುಂ; ಪಿಂಗಳಕನತಿವಿಸ್ಮಯಂಬಟ್ಟು, ಧಾತುರಕ್ತಾಶೋಕಕಿಸಲಯವಿಭ್ರಮಸಿಭಾಸುರಸಟಾಕಲಾಪಮಲ್ಲಾಡೆ ತಲೆಯುಂ ತೂಗಿ—ಪರೇಂಗಿತಜ್ಞಾನಮಿಾತಂಗುಳ್ಳುದಾರ್ಗಮಿಲ್ಲ. ಈಗಳೆನ್ನ ಮನದೊಳೊದವಿದ ಮಹಾಭಯಮಪ್ಪ ಕಜ್ಜಕ್ಕೆ ಪ್ರತೀಕಾರಮನೇಕಾಕಿಯಾಗಿ ಚಿಂತಿಸಲ್ಬಾರದು. ಎಂತುಂ "ಸಹಾಯಾನ್ಮಂತ್ರನಿಶ್ಚಯಃ" ಎಂಬ ವಾಕ್ಯಾರ್ಥಮುಂಟು. ಈತನುಂ ಸಹಾಯಗುಣಸಂಪನ್ನನುಂ ಭೃತ್ಯಗುಣಸಂಪೂರ್ಣನುಮಪ್ಪುದಱಿಂ,

ಶ್ಲೋ ॥ "ಸ್ವಾಮಿನಿ ಗುಣಾಂತರಜ್ಞೇ ಗುಣವತಿ ಭೃತ್ಯೇನುಕೂಲಿನಿ ಕಳತ್ರೇ।
ಮಿತ್ರೇ ಚಾವ್ಯಭಿಚಾರಿಣಿ ನಿವೇದ್ಯ ದುಃಖಂ ಸುಖೀಭವತಿ॥" ೧೩

---

1. ಪೊಗಬೆಲ್. ಕ ॥ ಗ ॥ 2. ಬಿನ್ನನೆ. ಕ ॥ 3. ಭೇದನಾ. ಖ ॥

[ಟೀಕು—ಗುಣಂಗಳಱಿವ ಒಡೆಯನಲ್ಲಿ, ಗುಣವಂತನಪ್ಪ ಭೃತ್ಯನಲ್ಲಿ, ಅನುಕೂಲೆಯಪ್ಪ ಸ್ತ್ರೀಯಲ್ಲಿ, ತಪ್ಪದಿಹ ಮಿತ್ರನಲ್ಲಿ, ತನ್ನ ದುಃಖವನಱಿಪಿ ಸುಖಿಯಾಗಿಹುದು.]

ಎಂಬುದು. ಈತಂಗಱಿಪದ ಕಜ್ಜಮುಂ, ವೈದ್ಯಂಗಱಿಪದ ಕುತ್ತಮುಂ ತೀರಲಱಿಯದೆಂದು, ನಿಷ್ಕಪಟಚಿತ್ತಂ ಮೃಗಾಧಿರಾಜಂ ಕಪಟಪಟುವಪ್ಪ ದವನಕಂಗಿಂತೆಂದಂ:—

ನೋಡೆ ನವಜಲದರವದೊಳ್ ।
ಕೂಡಿದುದಂತಪ್ಪುದೊಂದು ಶಬ್ದಂ ಕಿವಿಯೊಳ್ ॥
ತೀಡೆ ಕರಮುಗಿದು ಮನಮು ।
ಲ್ಲಾಡೆ ಭಯಂಗೊಂಡು ಪೋಗಲೊಲ್ಲದೆ ಮಗುೞ್ದಂ* ॥ 89

ಆವುದದೆಂದೊಡೆ ರೌದ್ರಾ ।
ರಾವಂ ತಾನೊರ್ಮೆಗೊರ್ಮೆಗೀಬನವನಿತುಂ ॥
ತೀವುವಿನಂ ಪೊಣ್ಮಿದಪುದು ।
ಭಾವಿಸಿ ನೀಂ ಕೇಳ ಕೇಳಲಪ್ಪುದದಿನ್ನುಂ ॥ 90

ಎನೆ; ದವನಕನೇಕಾಗ್ರಮನನಾಗಿ ಕಿಱಿದು ಬೇಗಮದನಾಲಿಸಿ ಕೇಳ್ದೆನಗಮಿನಿಸಾನುಂ ಭಯಂಕರರವಂ [1]ಕೇಳಲಾದಪು[1]ದೆಂಬುದುಂ;

ಪಿಂಗಳಕನಿಂತೆಂದಂ— ಈಬನಮಪೂರ್ವಸತ್ವಾವಿಷ್ಟಮಾದುದಿನ್ನಿಲ್ಲಿ ನಿಲ್ಲದೆ ಪೋಪುದೇ ಕಜ್ಜಮೆಂದಳ್ಕಿ ನುಡಿಯೆ; ದವನಕನಿಂತೆಂದಂ:—

ಭೇರೀಮೃದಂಗಘಂಟಾ ।
ನೀರದಶಂಖಾದಿಜನಿತಶಬ್ದಮನೇಕಾ ॥
ಕಾರಂ ಕೂಡುಗುಮೆಯ್ದೆ ವಿ ।
ಚಾರಿಸದದ[2]ನಂತೆ ಕೇಳ್ದು ನೀಂ[2] ಬೆರ್ಚುವುದೇ ॥ 91

ಪಾ—1. ಪೊಣ್ಮಿದಪು. ಖ ॥ 2. ನೆಯ್ದೆ ಕೇಳ್ದು ಪೇೞ್. ಗ ॥

ವ॥ ಅದುಕಾರಣದಿಂ ನೀವಿದೇನೆಂದಾರಯ್ಯದೆಯುಂ ಅಱಿಯದೆಯುಂ ಮುನ್ನಮೆ ಪಶುವಿನಂತೆ ದೆಸೆದೆಸೆಗೆ ಬೆರ್ಚುವುದುಂ ಪಿತೃಪರ್ಯ್ಯಾಗತಮಪ್ಪ ಬನಮಂ ಪತ್ತುವಿಡುವುದುಂ ತಕ್ಕುದಲ್ತೆನೆ;

ಮೃಗಾಧಿರಾಜನಿಂತೆಂದಂ:—ಈಮಹಾಗಂಭೀರಘೋರನಿರ್ಘೋಷಮಂ ನೀಂ ಶಬ್ದಮಾತ್ರಮೆಂದೇಕೆ ನಿರಾಕರಿಸುವೆ? ವಿಚಾರಿಸುವಾಗಳೀಮಹಾಶಬ್ದಕ್ಕೆ ತಕ್ಕಂತುಟೇ ದೇಹಮಕ್ಕುಂ, ಆದೇಹಕ್ಕೆ ತಕ್ಕ [1]ಸತ್ವಂ[1] ಸಮನಿಸುಗುಂ, ಆಸತ್ವಕ್ಕೆ ತಕ್ಕ ದರ್ಪಂ ದೊರೆಕೊಳ್ಗುಂ, ಆದರ್ಪಕ್ಕೆ ತಕ್ಕ ಕಲಿತನಮಾಗದಿರದು, ಅಂತಪ್ಪ ನಿಚ್ಚಟಗಲಿ ಕಲಹವನೇ ಬಯಸಿ ತನಗೆ ಅಧಿಕನನಱಸುವಂ. ಅದಱಿನಿಂತಪ್ಪತುಲಬಲಪರಾಕ್ರಮವಿಕ್ರಮದೊಳೆನಗಧಿಕನುಂ ಸಮಾನಬಲನುಮಲ್ಲದೆ ಹೀನನಾಗಲಱಿಯನಪ್ಪುದನಱಿದು, ನಿನ್ನ ಪೇೞ್ದ ಕಜ್ಜದ ಬಲಮುಂ ಸಾಧಾರಣಂ ಮಾೞ್ಪಿನ್ನ ಬಲಮುಂ ನಚ್ಚಿ ನಿಂದು, ವಿಗ್ರಹಮನೊಡರ್ಚಿದೆನಪ್ಪೊಡೆ ಇರ್ವರುಂ[2] ಸಮಾನಬಲರಾದಂದು "ಮಹಿಷಾಶ್ವಮಾಮೇಳನೇ ಸಹ ವಿನಶ್ಯತಿ"[2] ಎಂಬುದಕ್ಕುಂ; ಅಧಿಕಬಲನಾದೊಡೆ "ಹಸ್ತಿನಾ ಪದಾತಿಯುದ್ಧಮಿವ ಬಲವದ್ವಿಗ್ರಹಃ" ಎಂಬ ನೀತಿಯಂತಕ್ಕುಂ. ಎಂದುಮದಱಿನಿಂತಪ್ಪುದನಱಿದು ಪೂರ್ವಪುರುಷರಿಂದಾದ ಮಹಾಟವಿಯುಂ ಬಿಡಲಾಗದೆಂದು ನೀತಿವಿರುದ್ಧಂಗಳಪ್ಪ ಮಾತುಗಳಂ ನುಡಿದೆಯಾದೊಡೆ[3]ಯಿಂತೀ[3]ಯವಸರಕ್ಕೆ ತಕ್ಕುದೊಂದು ಕಥೆಯುಂಟೆಂಬುದುಂ— ದವನಕನದೆಂತೆನೆ— ಪಿಂಗಳಕಂ ಪೇೞ್ಗುಂ—

## ೪. ನರಿಯುಂ ಬಿಲನುಂ.

ಕಪಟಪ್ರಪಂಚಪರಿಣತ।
ಸುಪಾಯನಿಪುಣಾಭಿಧಾನಜಂಬುಕನುದ್ಯ॥

ಪಾ—1. ಮನಂ. ಗ ॥ 2. ಅಸಮಾನಬಲನಾದಂದು ''ಪ್ರಾರ್ಥ್ಯಮಾನಮನ್ಯೇನಸಹವಿನಶ್ಯೇತ್.''ಗ ॥ 3. ಯೆನ್ನೀ.ಗ ॥

ದ್ವಿಪುಳತರಮಪ್ಪ ಗಿರಿವರ |
ಗುಪಕಂಠದ ಬಿಲದೊಳಿರ್ಪುದತಿಮುದದಿಂದಂ || 92

ಜಂಬುಕನೊಂದುದಿವಸಮಾಹಾರವಿಹಾರಕ್ಕೆ ಪೋಪುದುಮದಱ ಬಿಲಕ್ಕೊಂದು ಪುಲಿ ಬಂದು ಪೊಕ್ಕಿರ್ದುದನ್ನೆಗಂ ಕಿಱಿದಾನುಂ ಬೇಗದೊಳಾನರಿ ಬಂದು ಬಾಗಿಲೊಳ್ ನಿಂದು ಪುಲಿಯ ಪಜ್ಜೆಯುಮಂ ಸೊಪ್ಪುದ ಬಿಲನುಮಂ ಕಂಡು—ಇದೆತ್ತಾನುಮೊಂದಪಾಯಮಾಗದೆ ಪೋಗದೆಂದು ಶಂಕಿಸಿ, ಕಿಱಿದೆಡೆಯಂ ಪಱಮೆಟ್ಟಿ ಬಂದು ನಿಂದು, ಈಚೋದ್ಯಮನುಪಾಯದೊಳೇ ನೋಡುವೆನೆಂದು, ಬಿಲನಂ ಪೆಸಗೊಂಡು ಪಲವುಂ ಸೂೞ್ ಕರೆಯಲ್, ಆಬಿಲಂ ನುಡಿಯದಿರ್ಪುದುಂ—ಬಿಲನೆ ನೀನಿನಿತು ಕಾಲಂ ನಾಂ ಬರ್ಪುಗಳಿದಿರ್ವಂದು ಸೇವೆಯಂ ಮಾಡುತ್ತಿರ್ದೆ, ಈಗಳದುಗೆಟ್ಟು ಕರೆದೊಡಂ ನೊದಲಾಗಿ ಸರಂದೋಱದಪೆಯಿಲ್ಲ; ಪಱನೊರ್ವಂಗೆ ಕೂರ್ತೆಯಕ್ಕುಂ, ಮೇಣ್ ಬಲ್ಲಿದನಿರ್ದನಕ್ಕುಮಲ್ಲದೊಡೀಗಳೇಕುಸಿರದಿರ್ದಪೆ? ಆದೊಡಮೇಂ? ನಿನ್ನ ಗುಣಕ್ಕೆನ್ನೊರ್ಮೆ ಕರೆವೆಂ, ಇನ್ನುಮುಸಿರದಿರ್ದೊಡೆ ಪೆಱತೊಂದು ಬಿಲನನಱಸಿ ಕೊಳ್ವೆಂ; ಸರಂದೋಱದೆಯಪ್ಪೊಡೆ ನಿನ್ನಲ್ಲಿಗೆ ಬರ್ಪೆನೆಂದು, ಮತ್ತಂ ಬಿಲನಂ ಕರೆವುದುಂ; ಪುಲಿ ಇದೆಲ್ಲಮಂ ಕೇಳ್ದು—ಬಿಲನೆನಗೆ ಭಯಸ್ಥನಾಗಿ ಸರಂದೋಱಲಣ್ಮದಿರ್ದುದಾಗಲ್ವೇೞ್ಕುಮಿನ್ನಾನಾದೊಡಂ ಸರಂದೋಱ ನರಿಯಂ ಬರಿಸಿ[1] ತಿಂಬೆನೆಂಬುೞವಗೆಯಂ[1] ಬೇಡರಂತೆ ಬಗೆದು ಹೂಂಕಾರಂಗೆಯ್ವುದುಂ; ಆಧ್ವನಿಯಂ ನರಿ ಕೇಳ್ದು ತನ್ನ ಬುದ್ಧಿಗೆ ತಾನೇ ಮೆಚ್ಚಿ,

ಶ್ಲೋ|| "ಅನಾಗತಂ ಯಃ ಕುರುತೇ ಸ ಶೋಭತೇ ನ ಶೋಭತೇ ಯೋ ನ ಕರೋ
ತ್ಯನಾಗತಂ | ವನೇ ವಸನ್ನತ್ರ ಜರಾಮುಪಾಗತೋ ಬಿಲಸ್ಯ ವಾಚೋ ನ
ಕದಾಚನ ಶ್ರುತಾಃ ||" ೧೪

ಪಾ—1. ತಿಂಬ ಪಳುಗೆಯಂ. ಕ || ಖ ||

[ಟೀಕು—ಆವನೊರ್ಬಂ ಮೇಲಪ್ಪ ಕಜ್ಜವನಱಿದು ಮಾಡದಿರ್ಪನವನನೊಪ್ಪಲ ಱಿಯೆಂ. ನಾನೀವನದುರ್ಗದೊಳಿರ್ದು ಮಾರ್ಥಿಕವನೆಯ್ದಿದೆಂ, ಬಿಲದ ನುಡಿಯುನೆಂದುಂ ಕೇಳ್ದುದಿಲ್ಲ.]

ಎಂದಿಂತು ಪಲಕಾಲಮೀವನದೊಳಿರ್ದುಂ ಈವನದೊಳಾಡಿಯುಂ ಬಲ್ಲೆಂ, ಬಿಲಂ ನುಡಿವುದಂ ಗಿಡುಗಳ್ ನಡೆವುದಂ ನಾನೆಂದುಂ ಕಂಡುಂ ಕೇಳ್ದುಮಱಿಯೆನೆಂದು ಆನರಿ ಬಗೆಯೊಳ್ ಪಿರಿಯುನಪ್ಪುದಱಿಂ ತನ್ನ ಬುದ್ಧಿಗೆ ತಾನೇ ಮೆಚ್ಚಿ ಆಯೆಡೆಯಂ ಬಿಟ್ಟೋಡಿ ಬರ್ದು*ಂಕಿತು. [೭

ಅಂತುಮಲ್ಲದೆಯುಂ "ಆತ್ಮಾರ್ಥಂ ಪೃಥಿವೀಂ ತ್ಯಜೇತ್", ತನ್ನ ನಿಮಿತ್ತಮಾಗಿ ಭೂಮಿಯಂ ಬಿಡುವುದೆಂಬ ನೀತಿಶಾಸ್ತ್ರಮುಂಟು. "ತಾನು ಳ್ಳೊಡೆ ಮೂಱುಲೋಕಮುಂಟು" ಎಂಬ ನಾಣ್ನುಡಿಯುಂಟು. ಆತ್ಮರ ಕ್ಷಣಮೇ ಪರಮಪುರುಷಾರ್ಥಮೆಂಬ ಸರ್ವಜನಸಮ್ಮತಮಂ ಕೇಳ್ದುಂ ಕಂಡುಮಱಿದುಮಿಂತಪ್ಪ ಸ್ಥಾನದೊಳೆಂತಿರ್ಪಮೆನೆ— ದವನಕನಿಂ ತೆಂದಂ:— [೧೭

ಇನಿತುವರಂ ದೇವರ ಮನದೊಳತಿಭಯಮುಳ್ಳೊಡಿದು ವಿಸ್ಮಯ ಮಪ್ಪುದಾದೊಡಂ ನಿಮಗಿನಿತು ಭಯಂಮಾಡಿದಂಗೆ ನೀಂ ಪೇಳ್ದ ಗು ಣಂಗಳೊಳವಿಲ್ಲೆಂಬುದುಮಂ, ಅವನೊರ್ವನೋ ಚತುರ್ಬಲಸಮೇತ ನೋ ಎಂಬುದುಮನಾರಯ್ದು, ನಿಶ್ಚಯಂ ಶತ್ರು ಬಲವಂತನಾದುದನಱಿ ದಿಂಬಳಿಕ್ಕಂ ಅದರ್ಕೆ ತಕ್ಕುದಂ ನೆಗೞ್ವೆನೆಂದು ಪಲವುಮು[1]ಪಾಯ ದಿಂ[1] ತಿಳಿಪಿ ನಿಲಿಸಿ, [೧೯

ಶ್ಲೋ॥ "ಕ್ಷೀಣೇ ಕೋಶೇ ಪ್ರಜಾನಾಶೇ ಶತ್ರೌ ನಿಕಟವರ್ತಿನಿ ।
ನ ಸ್ಥಾತವ್ಯಂ ನ ಯೋದ್ಧವ್ಯಂ, [2]ತದ್ದೇಶಂ ಚ[2] ಪರಿತ್ಯಜೇತ್ ॥" ೧೫

[ಟೀಕು—ಭಂಡಾರಂ ಸವೆದೆಡೆ ಪ್ರಜೆ ಕೆಟ್ಟೆಡೆ ಹಗೆ ಸಮೀಪವಾದೆಡೆಯಲ್ಲಿರಲಾಗದು, ಯುದ್ಧಂಮಾಡಲಾಗದು, ಆದೇಶವಂ ಬಿಟ್ಟು ಪೋಪುದು.]

ಪಾ—1. ಉಪಾಯಂಗಳಿಂ. ಗ॥ 2. ನೈವದೇಶಂ. ಗ॥

ಎಂಬುದನಱಿದು ಈನಯಂಗಳೊಳಗೆ ನಿನಗೆ ಶತ್ರುಸಂಕಟಮೆಂಬ ಶಂಕೆಯಲ್ಲದೆ ಸಪ್ತಾಂಗದೊಳೇಕಾಂಗಮಪ್ಪುದುಂ ವಿಕಳವಾದುದಿಲ್ಲ. ಸಾಮಾದ್ಯುಪಾಯಂಗಳಂ ಶತ್ರುಗಳಂ ವಶಂಮಾಡಲಾಱದೆ ಅಪಸರಣ ಮೇ ಶರಣಮಾಗಿರ್ದುದುಮಂ ಪ್ರಯೋಗಿಸದೆ ಶಬ್ದಶ್ರವಣಮಾತ್ರಕ್ಕೆ ಭಯಂಗೊಂಡೋಡಿದಿರಪ್ಪೊಡೆ, [೫

ಶ್ಲೋ|| "ಪೂರ್ವಮೇವ ಮಯಾ ಜ್ಞಾತಂ ಪೂರ್ವಮೇತದ್ವಿವೇಚಿತಂ|
ಅನುಪ್ರವಿಶ್ಯ ವಿಜ್ಞಾತಂ ಯಾವದ್ದಾರು ಚ ಚರ್ಮಚ ||" ೧೬

[ಟೀಕು—ಮುನ್ನಮಿದನ್ನಿಂದಱಿಯಲ್ಪಟ್ಟಿತು. ಮುನ್ನಮೆನಗೀಯವಸ್ಥೆಯೊಳಗೆ ಹೊಕ್ಕಱಿಯಲ್ಪಟ್ಟಿತು, ಮರನುಂ ತೊವಲುಂ ಎಂಬುದು.]

ಎಂಬ ಕಥೆಯಂತಕ್ಕುಮೆನೆ — ಪಿಂಗಳಕನದೆಂತೆನೆ—ದಮನಕಂ ಪೇೞ್ಗುಂ— [೧೧

೫. ನರಿಯುಂ ಭೇರಿಯುಂ.

ಮದಗಜಸಂಕುಳದಿಂ ಶ್ವಾ |
ಪದದಿಂದಂ ಗಿರಿಗುಹಾಳಿಯಿಂದಧಿಕಭಯ ||
ಪ್ರದಮೆನಿಪ ಘೋರಕಾಂತಾ | [೧೫
ರದೊಳ್ ಮಹಾಭೀರುವೆಂಬ ಜಂಬುಕನಿರ್ಕುಂ|| 93

ವ|| ಆಜಂಬುಕನೊಂದು ದೆವಸಂ ಆಹಾರವಿಹಾರಕಾಂಕ್ಷೆಯಿಂದಡವಿಯೆಲ್ಲಮಂ ತೊೞಲ್ದು ಎಲ್ಲಿಯುಮೇನುಮಂ [1]ಪಡೆಯದೆ[1] ತನಗೆ ಸಹಾಯನಪ್ಪುದೊಂದು ವಾಯಸನಿರ್ದಲ್ಲಿಗೆ ಬರ್ಪುದುಮಾವಾಯಸಂ ಇದಿರ್ವಂದು—ಎಲೆ ಭಾವ! ಏಂ ಬಡವಾದಿರೆನೆ; ಪಲವು ದಿವಸಮಾಹಾರಂಬಡೆಯದೆ ಬಡವಾಗಿ ನಿನ್ನಲ್ಲಿ ಆಸೆವಟ್ಟು ಬಂದೆನೆಂಬುದುಂ;—ಇದಾವಗಹನವಿಭಾಗಳಾಂ ಪೋಗಿ ಬರ್ಪನ್ನೆವರಮಿಲ್ಲಿಯೇ ನಿಲ್ಲಿಮೆಂದು

ಪಾ—1. ಕಾಣದೆ. ಗ ||

ವಾಯುವೇಗದಿಂ ವಾಯಸಂ ಪೋಗಿ ಬಂದು — [1]ಈತೋರ್ಪ[1] ನದಿಯ ತೀರದೊಳ್ ಚತುರ್ಬಲಯುತರಿರ್ವರರಸುಗಳ್ ಕಾದಿದಲ್ಲಿ [2]ಪೆಣಮಯಮಾಗಿರ್ದ ರಣಭೂಮಿಯಂ ಕಂಡೆಂ, ನಿನ್ನೊಡಲ ಬಡತನಂ ಕಿಡುವಿನಮಾಹಾರಕ್ಕಿಡೆಯಾದುದಲ್ಲಿಗೆ[2] ಪೋಗೆಂದು ಪೇಳ್ವುದುಮಾನರಿ ಪರಿದು ಸಮರರಂಗಭೂಮಿಯುನೆಯ್ದಿ ಅನೇಕಶಬಾಳೋಕನಜಾತಹರ್ಷನಾಗಿರ್ಪುದುಂ; [3]ಕಿಱಿದಾನುಂ ಬೇಗಕ್ಕೆ ಭೋಂಕನೆ ಪೊಣ್ಮಿದ[3] ಭಯಂಕರಧ್ವಾನಮಂ ಕೇಳ್ದಲ್ಲಿಯುಂ ನಿಲಲಣ್ಮದೆ ಓಡಿ ಬರ್ಪುದುಂ; ಲಂಬಕರ್ಣನೆಂಬುದೊಂದು ಜಂಬುಕಂ ಕಂಡಿದೇನೆಲೆ ಭಾವಾ! ನೀನೇತರ್ಕೆ ಭಯಾತುರನಾಗಿ ಬರ್ಪೆ, ಎನೆ;—ಕೊಳುಗುಳಂ [4]ನಿರ್ಮನುಷ್ಯಗೋಚರ[4]ಮೆಂದು ಬಗೆದು ಪೋಪನ್ನೆಗಂ, ನೆಲಂ ಮೊಱಗಿದಂತಪ್ಪುದೊಂದು ಭಯಂಕರಧ್ವಾನ [5]ಮಾಗಲದಂ ಕೇಳ್ದೋಡಿ[5] ಬಂದೆನೆಂಬುದುಂ; ಆಜಂಬುಕನೆಂದುದು:—ಆಧ್ವಾನಮಾವುದೆಂದುಮಱಿಯದೆ ದೂರಭೀರುವಾಗಿ ಪೋಗಲ್ವೇಡ, [6]ಆಯೆಡೆಯ[6]ನೆನಗೆ ತೋಱು ಬಾ, ಎಂದೊಡಂಗೊಂಡು ಬಂದು ನೋಡುವನ್ನೆಗಂ; [7]ಶಿಖರಿಶಿಖರಾನುಕಾರಿಯಪ್ಪುದೊಂದು ಭೇರಿ ಸಮೀರಣಪ್ರೇರಿತಭೂರುಹಶಾಖಾಗ್ರಹತಿಯಿಂದತಿಪ್ರಘೋಷಂಗೆಯ್ದುಂ ತದಾಹತಿಯಿಲ್ಲದಾಗಳ್ ನಿಶ್ಶಬ್ದಮಾಗಿಯುಂ ಇರ್ಕುಮದಂ ಕಂಡಾಜಂಬುಕಂ ಮನುಷ್ಯಸಂಚಾರಮಿಲ್ಲದುದಂ ನಿಶ್ಚಯಮಾಗಱಿದಾರಯ್ದು ಬಲವಂದು ನಿಂದು ನೋಡಿ ಮತ್ತಲ್ಲಿಯೇನಾನುಮಿರ್ಕುಮೆಂದು ಶಂಕೆಯಿಂ ಭೇರಿಯ ಕಣ್ಣಂ ವಿದಾರಿಸಿಯದಱೊಳೇನುಮಂ ಕಾಣದೆ ಲಂಬಕರ್ಣಂ ಆನರಿ ದೂರಭೀರುವಾದುದರ್ಕೆ ಹಾಸ್ಯಂಗೆಯ್ದುದು.[7]

ಪಾ—1. ಇಂತೊಪ್ಪುವ. ಖ || ಗ || 2. ಪೆಣಮಯಂ. ಖ || 3. ಅಲ್ಲಿ ಭೋಂಕನೆ. ಗ ||
4. ನಿರ್ಮಾನುಷ್ಯ. ಗ || 5. ಪೊಣ್ಮಿದೊಡೋಡಿ. ಖ || 6. ಆರಾವ. ಗ ||
7. ಅಲ್ಲಿ ಪುರಾಣಜಂಬುಕಂ ಮನುಷ್ಯಕೃತಮಲ್ಲದುದಂ ನಿಶ್ಚಯಮಱಿದಯ್ದು ಬಂದು ಬಲವಂದು ನೋಡಿ ಮತ್ತೆಯೇನಾನುಮಕ್ಕುಮೆಂದು ಆಶಂಕೆಯಿಂ ಭೇರಿಯಂ ನಿಡಾನಿಸಿ ನೋಡಿ ಅದಱೊಳಗೆ ಏನುಮಂ ಕಾಣದ ಲಂಬಕರ್ಣನರಿ ದೂರಭೀರುವಾದುದಕ್ಕೆನಕ್ಕುದು. ಗ ||

ಅದುಕಾರಣದಿಂ ನೀಂ ಶಬ್ದಮಾತ್ರಕ್ಕೆ ಬೆರ್ಚಿದೊಡಿಂತಪ್ಪ ನಗೆಗೆಡೆಯಪ್ಪಿರದಱಿಂ ದೇವರೆನ್ನನಟ್ಟಿಯಾರಯ್ದು ಬಱಿಕ್ಕದರ್ಕೆ ತಕ್ಕುದಂ ನೆಗೞ್ವುದೆಂಬುದುಂ; [೩

ಪಿಂಗಳಕಂ—ನಿನ್ನ ಮನದೊಳಿದುವೆ ಕಜ್ಜಮಪ್ಪೊಡೆ ಪೋಗೆಂದು, ಮತ್ತಮಿಂತೆಂದಂ:—ಈಬೆಸನಪ್ಪೊಡೆ [1]ದೂತರ್ಗೆ ಭಟ್ಟರ್ಗೆ ಪರಿಗರ್ಗ[1]ಲ್ಲದೆ ನೀಂ ಮಾಡಲ್ತಕ್ಕುದಲ್ಲ: ಇಂತಪ್ಪ ವಿಷಮಾನ್ವೇಷಣಕ್ಕೆಂತಟ್ಟುವೆನೆನೆ; ದವನಕಂ—ದೇವರ್ ಬೆಸಸಿದಂತರಸುಗಳುಂ ತಮ್ಮಾಜ್ಞೆ ಸಲ್ವಲ್ಲಿಗಲ್ಲದೆ ಮೇಣ್ ಮಿತ್ರರಲ್ಲಿಗಲ್ಲದೆ ಶತ್ರುಗಳಲ್ಲಿಗೆ ಮುನ್ನಮೆ ಪ್ರಧಾನರುಮಂ ಪಸಾಯ್ತರುಮನಟ್ಟಲಾಗದೆಂಬ ರಾಜನೀತಿಯನಱಿವಿರಾಗಿಯುಂ ಪೋದೆಡೆಯೊಳೇನಾನುಮುಪಾಯಮಕ್ಕುಮೆಂಬ ಶಂಕೆಯಿಂದೆನಗೆ ಕಾರುಣ್ಯಂಗೆಯ್ದರಾಗಿಯುಂ ಬೆಸಸಿದಿರ್. [2]ಈಯೆಡೆಗೆ[2] ಮಹಾಪ್ರಸಾದಮಾದೊಡಂ ದೇವರ್ಗಿಂತಪ್ಪತಿಕುತೂಹಲಂ [3]ಪುಟ್ಟದೀ[3]ಯೆಡೆಯೊಳೀಬೆಸನಲ್ತು. ಮತ್ತಾಪಬೆಸಕ್ಕಮಾವ ತೆಱದೊಳಾನೆ ಸಾಲ್ವೆನೆಂದು ನುಡಿಯೆ—ಪಿಂಗಳಕಂ ಸಂತಸಂಬಟ್ಟಿಂತೆಂದಂ:— [೧೪

ಶ್ಲೋ || "ಅಪ್ರಾಜ್ಞೇನ ಚ ಕಾತರೇಣ ಚ [4]ಗುಣಸ್ಸ್ಯಾತ್ ಸಾನುರಾಗೇಣ ಕಃ ಪ್ರಜ್ಞಾವಿಕ್ರಮಶಲಿನೋಽಪಿ ಹಿ ಭವೇತ್ ಕಿಂ ಭಕ್ತಿಹೀನಾತ್ಫಲಂ[4] | ಪ್ರಜ್ಞಾವಿಕ್ರಮಭಕ್ತಯಃ ಸಮುದಿತಾ ಯೇಷಾಂ ಗುಣಾ ಭೂತಯೇ ತೇ ಭೃತ್ಯಾ ನೃಪತೇಃ ಕಳತ್ರಮಿತರೇ ಸಂಪತ್ಸು ಚಾಪತ್ಸು ಚ ||" ೧೩

[ಟೀಕು—ಬುದ್ಧಿಹೀನನುಂ ಕಾತರನುಮಾಗಿರ್ಪವಂ ಸ್ನೇಹಿತನುಮಾದುದಱಿಂದಾವ ಲೇಸುಂಟು. ಬುದ್ಧಿಪರಾಕ್ರಮಂಗಳಿಂದೊಳ್ಪುವೆತ್ತವನಾದೊಡಂ ಭಕ್ತಿಯಿಲ್ಲದವನೇತರ್ಕಂ ಬಾರ್ತೆಯಿಲ್ಲಂ. ಬುದ್ಧಿಪರಾಕ್ರಮಭಕ್ತಿಗಳ್ ಆರ್ಕೆಲಬರ್ಗೊಳವಾ ಭೃತ್ಯರರಸುಗಳ್ಗೆ ಪೆಂಡಿರ್ವರ್ಕಳೋಪಾದಿಯಲ್ಲಿ ಸಂಪತ್ತಾದೊಡಂ ವಿಪತ್ತಾದೊಡಂ ಬಿಡರ್.]

---

1. ದೂತಂಗಂ ಬಡ್ಡಿಗುತ್ತಂಗಂ ಪರಿಗಂ ಕ || ಗ || 2. ನಿರೂಪಕ್ಕೆ ಖ ||
3. ಪುದಿದೀ. ಗ || 4. ಗುಣದ್ವೇಷಾನುರಾಗೆ ಪಿ ಚ ಪ್ರಜ್ಞಾವಿಕ್ರಮಶಾಲಿನಾಪಿ ಚ ಭವೇತ್ಕಿಂಭಕ್ತಿಹೀನೇನಚ || ಗ ||

ಎಂದು ಪೂರ್ವಾಚಾರ್ಯರ್ ಪೇೞ್ದ ಸದ್ಭೃತ್ಯರ ಲಕ್ಷಣಂಗಳ್ ನಿನಗೆ[1] ನೀಡುಮೊಳವು,[1] ಇನ್ನಾಂ ನಿನಗೇನೆಂದು ಬುದ್ಧಿಗಲಿಸಿದಪೆಂ, ನಿನಗೆ ಕ್ಷೇಮಮುಂ ಎನಗೆ ತೇಜಮುಮೆಂತಕ್ಕುಮಂತೆ ಮಾಡೆಂದು, ಬೇಗಂ ಪೋಗೆಂಬುದುಂ; ದವನಕಂ ಪೋದಂ.

ಅನ್ನೆಗಮಿತ್ತಂ ಪಿಂಗಳಕನಾತ್ಮಗತದೊಳಿಂತೆಂದಂ:— [೫

ಅವಮಾನಿತನಪ್ಪುದಱಿಂ।
ದವನಕ[2]ನೆತ್ತಾ[2]ನುಮೆನಗವಕ್ರಿಯೆಯುನೊಡ॥
ರ್ಚುವ[3]ನೊ ಮನವಱಿಯದಾನಿಂ।
ತ[3]ವಿವೇಕಿಯೆನಾಗಿ ಪೋಗಲಟ್ಟದೆನವನಂ॥ 94 [F

ಅಂತು ಕ್ರುದ್ಧಲುಬ್ಧಭೀತಾವಮಾನಿತರಪ್ಪರನೆಂತುಂ ವಿಶ್ವಾಸಿಸಲ್ ಬಾರದೆಂದರ್ಥಶಾಸ್ತ್ರಾಭಿಪ್ರಾಯಮುಂಟು. ದವನಕಂ ಪೞಿಯುಮಗನೆಂಬಿನಿತಲ್ಲದೆ ಇನಿತು ದಿವಸಮುವಮಾನಿತನಾಗಿರ್ದನಪ್ಪುದಱಿಂ ತನ್ನ ಪೞಿಮೆಯಂ ಮಱೆದು ಪಗೆವಂ [4]ಬಲ್ಲಿದನಪ್ಪೊಡೆ ಅವನೊಳ್ ಕೂಡಿ ಮೇಲೆ ವಂದೊಡತಿಭರಮಕ್ಕುಂ. ಅವನೇನಂ ಮಾಡಿದಪನೆಂಬುದ[4]ನಱಿಯಲ್ ಬಾರದುದಱಿಂದೀಸ್ಥಾನಮಂ ಬಿಟ್ಟು ಪೆಱತೊಂದು ದುರ್ಗಸ್ಥಾನದೊಳಿರ್ದು ನೋೞ್ಪೆನೆಂ[5]ದಾತ್ಮಗತಂ[5]ಗೆಯ್ದು, ಮತ್ತಂ ಸತ್ವಾವಲಂಬನಾಗಿ,

ಶ್ಲೋ॥ "ಆಹಾರನಿದ್ರಾಭಯಮೈಥುನಂ ಚ ಸಾಮಾನ್ಯಮೇತತ್ಪಶುಭಿರ್ನರಾಣಾಂ।
[6]ಜ್ಞಾನಂ[6]ನರಾಣಾಮಧಿಕೋ [7]ವಿಶೇಷಃ[7]ಜ್ಞಾನೇನ ಹೀನಃ ಪಶುಭಿಸ್ಸಮಾನಃ॥" ೧೮

[ಟೀಕು—ಭೋಜನಂ, ನಿದ್ರೆ, ಭೀತಿ, ಸ್ತ್ರೀಸಂಗವೆಂಬೀನಾಲ್ಕುಂ ಪಶುಗಳ್ಗಂ ಮನುಜರ್ಗಂ ಸರಿ. [8]ಜ್ಞಾನವೇ[8] ಮನುಷ್ಯರೊಳಧಿಕಂ, ಜ್ಞಾನವಿಲ್ಲದವಂ ಪಶುವಿನ ಸಮಾನಂ.]

ಪಾ—1. ನೆರೆಯುಂಟು. ಗ॥ 2. ನೆಂತಾ. ಕ॥ ಗ॥
3. ನೋವಿದಿತಾಂತರಂಗ। ನ. ಖ॥ ಮನವಱಿಯದನಂ। ದ. ಕ॥ ಗ॥
4. ಬಲ್ಲಿದನಪ್ಪುದಱಿನವನೊಳ್ ಕೂಡಿ ಮೇಲೆ ಬಂದವನೇನಂ ಬಗೆವನೆಂ ಗ॥
5. ದನು. ಗ॥ 6. ಜ್ಞಾನೀ. ಖ॥ 7. ಮಹಾತ್ಮಾ. ಖ॥
8. ಜ್ಞಾನಮುಳ್ಳಾತಂ. ಖ॥

ಎಂಬ ನಿಸರ್ಗಗುಣದೊಳಾದ ಭಯಂ ದೇಶಕಾಲವಿಕಳತೆಯಿಂದೆನಗಂ ಮನೋಭಂಗಮನೆ ಮಾಡಿದಪ್ಪುದು. ಸುಸ್ವಾಮಿಗಂ ವಿಶ್ವಾಸಿಯಪ್ಪ ಪೆಱೆಯರುಮಾಪ್ತರುಮೆಂದುಂ ತಪ್ಪುವರಲ್ಲೆಂಬುದು ಸಮಸ್ತನೀತಿಶಾಸ್ತ್ರಪರಾನುಮತದೊಳಮನುಭವದೊಳಂ ಪ್ರತ್ಯಕ್ಷಮುಂ ಪ್ರಮಾಣಮುಮಾಗಿರ್ದಪ್ಪುದು. ಆಪ್ತನನನಾಪ್ತನೆಂದುಂ ಹಿತನನಹಿತನೆಂದುಮವಿಚಾರದಿಂ ಸಂದೆಗಂಬಡುವಂಗೆಂದುಂ ಸುಖಮಾಗಲಱಿಯದು. ದಮನಕನಪ್ಪೊಡೆ ಉಪಧಾವಿಶುದ್ಧನಪ್ಪ ಮಂತ್ರಿಪುತ್ರಂ, ಎನಗೆಂದುಂ ತಪ್ಪವನಲ್ಲೆಂದು ನಿಶ್ಚಿಂತಮನನಾಗಿರ್ಪುದುಮಿತ್ತಲ್, [೮

ಪ್ಲಕ್ಷಕದಂಬನಿಂಬ[1]ಪನಸಾ[1]ರ್ಜುನತಾಲಲವಂಗಲುಂಗರು ।
ದ್ರಾಕ್ಷತುರುಷ್ಕಮುಷ್ಕನಿಚುಳಾಮ್ರಕರಂಜವಟಾದ್ಯನೇಕವೃ ॥
ಕ್ಷಕ್ಷುಪ[2]ವೀರುಧೌಷಧ[2]ಪರೀತಸಮುನ್ನತಕೂಟಕೋಟರಾ ।
ದ್ರಿಕ್ಷಿತಿಭೃದ್ಗುಹಾಗಹನಮಂ ಕಳದಾಮೃಗಧೂರ್ತನೆಯ್ದಿದಂ ॥ 95

ಅಂತೆಯ್ದಿ,

ಪ್ರಾವೃಡದಭ್ರಮೇಘಪಟಲಾಂತರಿತೇಂದುವಿಭಾಸಿಯುಂ [3]ಸುರಾ ।
ಜೀವರಜಃ[3] ಕದಂಬವನಕೈರವಚಾರು[4]ಕಳಿಂದ[4]ಕನ್ಯಕಾ ॥ [೧೫
ಜೀವನವರ್ಧಿತಾಯತತಮಾಲವನಾಂತರದಲ್ಲಿ ನಿಂದ ಸಂ ।
ಜೀವಕನಂ ಮೃಗೇಂದ್ರಸಚಿವಾಗ್ರಣಿ ಕಂಡನಖಂಡಸತ್ವನಂ ॥ 96

ವ॥ ಅಂತು ಕಂಡು ಮುನ್ನಮಡವಿಯೊಳ್ ನಡೆವ ಬೀಡಿನೆತ್ತುಗಳಂ ದೂರದೊಳ್ ನೋಡಿಯುಂ ಸಮೀಪದೊಳಾಡಿಯುಂ [5]ಅಱಿವು[5]ದಾಗಿಯುಂ ಸಂಜೀವಕಂ ಸ್ವೇಚ್ಛಾವಿಹಾರದಿಂ ವರ್ಣಗಂಧಗತಿಸ್ವರಂಗಳ[6]ನಪೂರ್ವಾಂಗನಪ್ಪುದಱಿಂ[6]ಕಿಱಿದು ಬೇಗಂ ಸಂದೆಗಂಬಟ್ಟು, ಸ

ಪಾ—1. ಸರಳಾ. ಕ ॥ ಗ ॥ 2. ವೀರವೃಕ್ಷವಿ. ಗ ॥ 3. ಸರಾ । ಜೀವರಸಂ. ಗ ॥
4. ಪುಳಿಂದ. ಖ ॥, ಕಳಿಂಗ. ಗ ॥ 5. ಕುಱಿವು. ಖ ॥
6. ಳಪೂರ್ವಮಪ್ಪುದಱಿಂ. ಕ ॥

ಮೀಪಕ್ಕೆ ಬಂದು ನಿಶ್ಚಯಮೆೞ್ತಿಪ್ಪುದನಱಿದು ನರಿ ಹರಿಯ ಮರುಳ್ತನಕ್ಕೆ ನಕ್ಕು—ನಾನೀಯೆೞ್ತಿನೆೞ್ತಿಂ ಕಂಡೆನೆಂದು ನಿಷ್ಕಪಟವೃತ್ತಿಯಿಂ ಕೂರ್ತು ನಮ್ಮರಸಂಗೆ ಪೇೞ್ದಿನಪ್ಪೊಡೆ ನಾನೇತರ್ಕಂ ಬಾರ್ತೆಯಾಗಲಱಿಯೆಂ. ಅದಱಿಂದರಸಂಗೆ ನಾನೇ ಮುಖ್ಯಪ್ರಧಾನನಾಗಿರ್ಪೊಡಂ ಕೃಪೆಯಂ ಪಡೆವೆನಪ್ಪೊಡಂ ಇದೇ ಕಾರಣಮೆಂದಱಿದು, ಇದಂ ಪಿರಿದು ಮಾಡಿ ಪೇೞ್ವೆನೆಂಬ ಬಗೆ ಮನದೊಳ್ ಮಿಗೆ ಮಾಣದಾಕ್ಷಣದೊಳಲ್ಲಿಂ [1]ತಳರ್ದು[1] [೨

ಸತತಗತಿವೇಗದಿಂ ಪರಿ ।
ಚಿತಮಾರ್ಗದೆ ಮಗುೞ್ದು* ಬಂದು ಪೂರ್ವಸ್ಥಾನ ॥
ಸ್ಥಿತನಂ ಕಂಡಂ ಮೃಗಗಣ ।
ಪತಿಯುಂ ಮೃಗಧೂರ್ತನಧ್ವಜಕ್ಲೇಶಾರ್ತಂ ॥ 97

ಅಂತು ಕಂಡು ವಿನಯಪನಮಿತೋತ್ತಮಾಂಗನಾಗಿ ದವನಕಂ ಸಮುಚಿತಾ[2]ಸ[2]ನದೊಳ್ ಕುಳ್ಳಿರ್ದಿಂತೆಂದಂ:— [೧೨

ವನಮಾತಂಗಘಟಾಮ ।
ರ್ದನ ಶಬ್ದಶ್ರವಣಮಾತ್ರದಿಂದಂ ನೀಂ ಪೇ ॥
ೞ್ದಿನಿತರ್ಕಮುಗ್ಗಳಂ ದೇ ।
ವ ನಿಶ್ಚಯಂ ಬಗೆವೊಡವನ ರೌದ್ರಾಕಾರಂ ॥ 98 [೧೩

ಆಮಹಾರೌದ್ರಭದ್ರಾಕಾರನ ಪೊಡರ್ಪಿನಾರ್ಪಿನಳವಿಗೞಿದ ದರ್ಪಮಂ ಪೇೞ್ವೊಡೆ ಕಾಳಿಂದಿಯ ಮಡುವನಿರ್ಬಗೆಯಾಗಿ ಪಾಯ್ದು ಕದಡುವಿನಂ ಜಲಕೇಳಿಯಾಡಿ ಪೊಱಮಟ್ಟು ನಿಂದು ಜಾತಹರ್ಷನಾಗಿ ಬೆಟ್ಟುಗಳ್ ಬಿರಿಯೆ ನಿಷ್ಠುರಧ್ವಾನಂಗೆಯ್ದು ಮೇದಿನಿಯನೆತ್ತಿದಾದಿವರಾ

1. ಮಗುೞ್ದು. ಕ ॥ 2. ಸ್ಥಾ. ಕ ॥

ಹನಂತೆ ದರಿಗಳಂ ಕೋಡೊಳ್ ಕುತ್ತಿಯೆತ್ತಿ ಬಿದಿರ್ದೀಡಾಡುತ್ತಿರ್ದು ಕಟ್ಟೆಗಟ್ಟಿದಂತಾಗೆ ಜಗುನೆಯಲ್ಲಿ ಪರಿಪರಿದು ಬೇಗಂ ಮಾಣ್ದಿರೆಯುಂ ಮತ್ತಂ ಸುಣಿಸೊಕ್ಕಿ[1] ಕೊಣಕುತುಂ ಪಾಱಿ ದೆಸೆದೆಸೆಗೆ ಪರಿದು[1] ಪಿರಿಯಮರಂಗಳನುಱದೆ ಕೊಂಡು ನೂಂಕಿ ಪೊತ್ತುಂ ಪರಿಯುತ್ತುಂ ಪೊಣರ್ದುದ್ದಂ ನೆಗೆದು ಕುನುಂಗಿ ಭರದಿಂ ತಲೆಯೆತ್ತಿಯುರ್ಬಿ [೫
ನಭಮಂ ನುಂಗಲೊಡರ್ಚಿದಂತೆ ಮೇಘಮಂ ನೋಡಿ ದೆಸೆದೆಸೆಯುಂ ವಾಸಿಸಿ ನಲವರಿದು ಪ್ರಾಣಿಗಳೊಳ್ ತನಗದಿರದಿದಿರಾಂಪರೊರ್ವರುಮಂ ಕಾಣದೆ ಸಮಸ್ತಸಮುದ್ರಮುದ್ರಿತಮೇದಿನಿಯನಡಿಗೊಱಂಗಿನೊಳ್ ಮಡಂಗಿರಿಸಲ್ಬಗೆದು ಗರ್ವಪರ್ವತಾರೂಢನಾಗಿ ಪರ್ವತಮಂ ತಾಗೆ ಬೇಗದೊಳ್ ಕೆಡೆವ ಕೋಡುಂಗಲ್ಗಳಂ ಕೋಡೊಳಾಂತೀಡಾಡುತ್ತುಂ ಜಗದ ಮೃಗಮೆಲ್ಲಮಂ ಜವನೆ ನೆವಮಿಟ್ಟು ನುಂಗಲುಂ ನೊಣೆಯಲುಂ ಪುಟ್ಟಿದಂತಪ್ಪ ಮಹಾದ್ಭುತಮನಭೂತಪೂರ್ವಮಂ ರುದ್ರನ ಭದ್ರವೃಷಭನನಿನಿಸನುಕರಿಸುವುದುಮಂ ಕಂಡೆನೆಂದು ಮಹಾದ್ಭುತಭಯರೌದ್ರಭಯಾನಕವೀರರಸಂಗಳನೆ ಕಪಟಕ್ರಿಯೆಯಿಂ ಪಿರಿದುಮಾಡಿ ಪೇೞ್ವುದುಂ; ಪಿಂಗಳಕಂ ಭಗ್ನಮನನಾಗಿ ಕಿೞಿದು ಬೇಗಂ ಪಂದೆಯುಂ ಪಾವಡರ್ದಂತೆ ಮೇಗುಸಿರ್ವಿಟ್ಟು ಹಮ್ಮದಂಬೋಗಿ ಮುಮ್ಮನೆ ಬೆಮರ್ತು ತನ್ನಿಂ ತಾಂ ಚೇತರಿಸಿ ಕಾತರತೆಯುಂ ಮಾಣ್ದು ದವನಕಂಗೆ ಪಿಂಗಳಕನಿಂತೆಂದಂ:— [೧೮

ಇಂತಪ್ಪ ರೌದ್ರನುಂ ಕ।
ಲ್ಪಾಂತಕನ ಪ್ರತಿಮನಪ್ಪನುಂ ನಿನ್ನಂ ಕಂ॥
ಡೆಂತು ಕಡೆಗಣಿಸಿ ಕೊಲ್ಲದೆ।
ಸಂತಂಬರಲಿತ್ತನದಱ ತೆಱನಂ ಪೇೞಾ॥ ೧೧ ಎನೆ; [೨೨

ಪಾ—1. ಕೊಣಕಿಟ್ಟು ಪಿಸಟಂಬಱದು ದೆಸೆದೆಸೆಗೆ ಸೈವರಿದು. ಕ॥

ದವನಕನಿಂತೆಂದಂ:—

ಅತುಲಬಲವಿಕ್ರಮಪ್ರಾ ।
[1]ನ್ವಿತನಸಮರ್ಥಂಗೆ ಮುನಿಯಲಱಿಗುಮೆ ಅಧಿಕೋ ॥
ನ್ನತಗಜನಿವಹಂ ಭೂಜ ।
ಪ್ರತತಿಯನುಡಿವಂತೆ ಪುಲ್ಲನೇನುಡಿದಪುದೇ[1] ॥ 100 [೫

ಶ್ಲೋ ॥ "ತೃಣಾನಿ ನೋನ್ಮೂಲಯತಿ ಪ್ರಭಂಜನೋ ಮೃದೂನಿ ನೀಚ್ಯೈಃ ಪ್ರಣತಾನಿ ಸರ್ವತಃ। ಸಮುಚ್ಛ್ರಿತಾನೇವ ತರೂನ್ ಪ್ರಬಾಧತೇ ಮಹಾನ್ ಮಹತ್ಸ್ವೇವ ಕರೋತಿ ವಿಗ್ರಹಂ ॥" ೧೯

[ಟೀಕು—ಪವನಂ ಪೆರ್ಚಿದ ಮಹಾವೃಕ್ಷಂಗಳಂ ಕೀೞ್ವುದಲ್ಲದೆ ಮೃದುವಪ್ಪ ತೃಣಂಗಳಂ ಕೀೞದು; ಅದೆಂತೆನೆ– ನೀಚಂಗಳಾಗಿ ತಲೆವಾಗಿರ್ಪ ಕಾರಣಂ. ಸತ್ವಾಧಿಕರುಂ ತಮ್ಮ ಪರಾಕ್ರಮುವನಧಿಕಬಲನೊಳಲ್ಲದೆ ನೀಚರಲ್ಲಿ ಮಾಡರ್.] [೧೩

ಅದಲ್ಲದೆ,

ಶ್ಲೋ ॥ "ಗಂಡಸ್ಥಲೇ ಮದಕಲೇ ಮದವಾರಿಲೋಭಮತ್ತಭ್ರಮದ್ಭ್ರಮರಪಾದತಲಾಹತೋಪಿ। ಕೋಪಂ ನ ಗಚ್ಛತಿ ನಿತಾಂತಬಲೋಪಿ ನಾಗಸ್ತುಲ್ಯಂ ಬಲೇ ನ ಬಲಿನಃ ಪ್ರತಿಕೋಪಯಂತಿ ॥" ೨೦ [೧೫

[ಟೀಕು—ಮದದಿಂ ಮನೋಹರವಹ ಕಪೋಲಸ್ಥಳದಲ್ಲಿಯ ಮದೋದಕಲೋಭದಿಂ ಸೊರ್ಕಿ ತಿರುಗುತಿರ್ದ ತುಂಬಿಗಳ್ ಪಾದತಳದಿಂದೊದೆದೊಡಂ ಆಹಸ್ತಿ ಅತಿಬಲನಾದೊಡಂ ಕೋಪವನೆಯ್ದದು. ಅದೆಂತೆನೆ–ಬಲವಂತರಪ್ಪರ್ ಸದೃಶಬಲರೊಡನೆ ಕೋಪಮಂ ಮಾಳ್ಪಿರ್.]

ಎಂಬೀ ನೀತಿವಾಕ್ಯಮುಂಟಪ್ಪುದಱಿಂದೆನ್ನಂತಪ್ಪ ಕ್ಷುದ್ರಂಗೆಂತುಂ ಮುಳಿವನಲ್ಲನೆ; ಪಿಂಗಳಕನಿಂತೆಂದಂ:—ನೀನೆಂದಂತೆ ತಪ್ಪದು, ಇನ್ನದಂತಿರ್ಕೆ, ಮುನ್ನಮಾಂ ನಿನಗೇನೆಂದು ಪೇೞ್ದೊಡಂ ನಂಬದೆ ನೀನೆ ಪೋಗಿ ನೋಡಿ ಬಂದೆ, ಇನ್ನೇಗೆಯ್ವೆಂ ಪೇೞಿನೆ; [೨೭

ಪಾ—1. ಕೃತಜನಮಂ ಪರಿಗಣಿಯಿಸದಿರ್ಪುದು ಯುಕ್ತಂ ॥ ಕೃತದ್ರುಮಭಂಜನಮಾರುತ । ನತಿಕೃತತೃಣಮಂ ಮುಱಿವನೆ ಜಗತೀತ್ರಯದೊಳ್ ॥ ಕ ॥

ದವನಕನಿಂತೆಂದಂ — ದೇವರೆಂದಂತೆ ಶತ್ರು ಬಲವಂತನಾದೊಡಂ ಸಂಧಿವಿಗ್ರಹಯಾನಾಸನಸಂಶ್ರಯದ್ವೈಧೀಭಾವಷಾಡ್ಗುಣ್ಯಂಗಳೆಂಬ ನಯಂಗಳೊಳಂ ಸಾಮಭೇದದಾನದಂಡಮೆಂಬ ಚತುರುಪಾಯಂಗಳೊಳಂ ಮತ್ತಮನೇಕವಿಧದೊಳಂ ಶತ್ರುವನುದಾಸೀನನಂ ಮಾಡಲುಂ ಉದಾಸೀನನಂ ಮಿತ್ರನಂ ಮಾಡಲುಂ ಮಿತ್ರನನಾತ್ಮಾಯತ್ತನಂ ಮಾಡಲುಮಾನಱಿವೆನಾಗಿ ನಿನಗಾಯತ್ತಂ ಮಾಡುವೆನೆನೆ; [೬

ಮೃಗೇಂದ್ರನೆಂದಂ: — ಮಂತ್ರಂ ದಿವ್ಯಗ್ರಹಕ್ಕಲ್ಲದೆ ಅಪಸ್ಮಾರಗ್ರಹಕ್ಕಾಗದಂತೆ ನೀಂ ಪ್ರಯೋಗಿಸುವ ಮಂತ್ರದಿಂ ಸಾಧ್ಯವಾಗಲಱಿಯನುಮವನತಿದರ್ಪನುಂ ದುಷ್ಟನುಮಸಾಧ್ಯನುಮಭೇದ್ಯನುಮೆಂದು ನೀನೇ ಪೇೞ್ದೆ. [1]ಅಂತುಮಲ್ಲದೆಯುಂ,[1] [೧೦

ಶ್ಲೋ || "ಸರ್ಪಃ ಕ್ರೂರಃ ಖಳಃ ಕ್ರೂರಃ ಸರ್ಪಾತ್ ಕ್ರೂರತರಃ ಖಳಃ|
ಮಂತ್ರೌಷಧಿವಶಸ್ಸರ್ಪಃ ಖಳಃ ಕೇನೋಪಶಾಮ್ಯತಿ ||" ೧೧

[ಟೀಕು—ಸರ್ಪನುಂ ಖಳನುಂ ಕ್ರೂರಮಾದೊಡಂ ಸರ್ಪನಿಂದಂ ಖಳನೇ ಕ್ರೂರಂ: ಅದೆಂತೆಂದೊಡೆ ಮಂತ್ರೌಷಧಂಗಳಿಂದಂ ಸರ್ಪನಂ ವಶಂಗೆಯ್ಯಲಕ್ಕುಂ ಮಾದುರ್ಜನನೇತಱಿಂದಂ ಶಾಂತನಾಗಂ.] [೧೫

ಎಂಬ ನೀತಿಯುಂಟು. ಇಂತಪ್ಪ ಖಳನನೆಂತೊಡಂಬಡಿಸಿದಪೆ ಎನೆ;

ದವನಕನೆಂದಂ: — ಅವನೆಂತುಮೆನ್ನಂ ನಂಬನಾದೊಡಮುಪಾಯಕುಶಲರಪ್ಪವರ್ ಮದಕರಿಗಳಂ ಸೂಕರಂಗಳಂ ಕಟ್ಟುವಂತೆ ಮನದೊಳ್ [2]ಪಗೆಯಂ[2] ಮನದಿಂ ಮುನ್ನಮಶ್ರಮದಿಂದಿಮೆ ಮುಟ್ಟಲುಂ ಪರಕಾಯಪ್ರವೇಶಂಗೆಯ್ಯಲುಂ ದೇಹಲೋಹಮೆಂಬೆರಡುಮಂ ಸಿದ್ಧರಸವಿದ್ಯೆಯಿಂ ಸುವರ್ಣಚ್ಛಾಯಂಮಾಡಲುಂ ಅಕೂಪಾರಮಂ ಪಾಯಲುಂ ಇಂತಪ್ಪುಪಾಯಂಗಳಂ ಪಲವಂ ಮಾಡಿದರದಱಿಂ ನಿನಗಪ್ರತಿಮಲ್ಲ

ಪಾ—1. ಸುಭಾಷಿತಮಿಂತೆಂಬುದಲ್ತೆ. 2. ಬಗೆದರ್ಪಯಂ. ಖ ||

ನಪ್ಪ ಬಲ್ಲಾಳುಂ ನಿನ್ನಲ್ಲಿಗೆ ವಂದಸ್ಮದಾದಿಗಳಪ್ಪ ಭೃತ್ಯರೋಳಿಯೊಳ್ ಭೃತ್ಯಭಾವಮಂ ನೆಗಱ್ವಂತೆ ಮಾಡಿ ಎನ್ನ ಮಂತ್ರಶಕ್ತಿಯನಿಲ್ಲಿ ಬಲ್ಲ ಮಾೞ್ಕೆಯಿಂ ಮೆಱೆವೆನೆಂದು ನುಡಿದ ದವನಕನ ವಿನಯೋಕ್ತಿಗಳ್ಗೆ ಪಿಂಗಳಕಂ ಸಂತಸಂಬಟ್ಟು,

ಚಳದಳಕಂ ಹರ್ಷೋದ್ಗತ । [೫
ಪುಳಕಂ ನಖಮುಖ[1]ವಿದಾರಿತೋ[1]ಗ್ರೇಭಶಿರಃ ॥
ಫಳಕಂ ಮೃಗತಿಳಕಂ ಪಿಂ ।
ಗಳಕಂ ಪೋಗೆಂದು ಕಳಿಪಿದಂ ದವನಕನಂ ॥101

ಎಂದು ಕಳಿಪುವುದುಂ; ದವನಕಂ ಮಹಾಪ್ರಸಾದಮೆಂದು ತ್ವರಿತಗತಿಯಿಂ ಸಂಜೀವಕನಿರ್ದೆಡೆಯನೆಯ್ದಿ ವಂದು ಎಱ್ತಿಪ್ಪುದನಱಿದೆಂತಿರ್ದೊಡಮೆಂತು ನೋಡಿದೊಡಂ ತನಗೆ ಭಯಮಿಲ್ಲೆಂಬುದನಱಿದಿಂತೆಂದಂ:— ಈಮಹಾಟವಿಯೊಳಿರ್ದೆನ್ನಾಳ್ದನಪ್ಪ ಮೃಗಾಧಿರಾಜಂ ಪಿಂಗಳಕನಂ ಕಾಣದೆಯುಂ ಆಳ್ತನಕ್ಕೆ [2]ಪೂಣದೆಯುಮಿಲ್ಲಿ[2] ನಿನ್ನ ಬಾೞ್ವುಪಾಯಮಾವುದೆನೆ—ಸಂಜೀವಕನೆಂದಂ:—ಪಿಂಗಳಕನೆಂಬಾತನಾರ್? ಆತನಂ ಕಂಡಱಿಯೆಂ, ಎಲ್ಲಿರ್ದಪನೆನೆ — ದವನಕನಿಂತೆಂದಂ:— [೧೫

ಪ್ರಕಟೀಭೂತಪರಾಕ್ರಮಕ್ರಮ[3]ನನುಗ್ರಾ[3]ಟೋಪನಂ ಶ್ವಾಪದ ।
ಪ್ರಕರಾಧೀಶ್ವರ[4]ಚಕ್ರವರ್ತಿಯನರಣ್ಯಾನೀಮಹೀ[4]ಚಕ್ರರ ॥
ಕ್ಷಕನಂ ನೀನಱಿವೈ ಮದಾವಿಳಗಳಪ್ರೋತ್ತುಂಗಮಾತಂಗಮ ।
ಸ್ತಕ[5]ಮಸ್ತಿಷ್ಕರಸಾರ್ದ್ರ[5]ರೌದ್ರನಖರಶ್ರೇಣೀಪ್ರಭಾಭಾಸಿಯಂ॥102
ಬಳಸಿಯುಮೆತ್ತಮೋಲಗಿಪ ವಿಶ್ವಮೃಗಾವಳಿಯಾಧಿಪತ್ಯಮಂ ।

ಪಾ—1. ವಿದಾರಣೋ. ಕ ॥ ಗ ॥ 2. ಪೂಣ್ದಲ್ಲಿಯುಂ. ಕ ॥ 3. ನುದಗ್ರಾ. ಗ ॥ 4. ನಂಮಹಾದ್ಭುತಮಹಾರಣ್ಯೋರ್ವರಾ. ಕ ॥ ಖ ॥ 5. ರಕ್ತಾರ್ದ್ರಕಠೋರ. ಗ ॥

ತಳೆದು ಮಹಾವಿಭೂತಿವೆರಸಾದರದಿಂದೆ[1] ಮಹಾ[1] ವಿಶಾಲಮಂ॥
ಡಳವಟಭೂರಿಭೂರುಹದ ತಣ್ಣೆಳಲೊಳ್ ಮದವಾರಣಾರಿ ಪಿಂ।
ಗಳಕನಖಂಡ[1]ಚಂಡ[2]ಭುಜವಿಕ್ರಮಮಂಡನನಿರ್ದನಲ್ಲವೇ ॥ 103

ಎಂದು ಮಂದರಕ್ಷುಭಿತಪಯೋಧಿನಾದದಿಂ ಗಜಱಿ ಗರ್ಜಿಸಿ ನುಡಿದ ದವನಕನ ಗಭೀರಾಳಾಪಂಗಳಂ ಸಂಜೀವಕಂ ಕೇಳ್ದು ಕಿಱಿದುಬೇಗಂ ವಿಸ್ಮಯಂಬಟ್ಟು—ಈನರಿ ಪೇೞ್ದ ಪಿಂಗಳಕನೆಂಬುದು ಸಿಂಹಮಾಗಲೆವೇೞ್ಕುಂ, ಆಸಿಂಗಂ ಮತ್ತಮಾತಂಗಯೂಥಕ್ಕಲ್ಲದೆ ಕೇವಲಪ್ರಾಣಿಮಾತ್ರಕ್ಕೆ ಮುಳಿಯದೆಂಬುದು ಲೋಕಪ್ರಸಿದ್ಧಂ, ಅಂತಪ್ಪುದೆನಗೆ ಮುಳಿಯದದೆಂತೆನೆ— [೯

ಶ್ಲೋ॥ "ಆಸನ್ನೇಪಿ ನ ಸಾರಂಗೇ ಕರೋತ್ಯೇಷಾಂ ಮೃಗಾಧಿಪಃ।
ಉತ್ತುಂಗಮತ್ತಮಾತಂಗಮಸ್ತಕನ್ಯಸ್ತಲೋಚನಃ ॥" ೨೦

[ಟೀಕು- ಸಮೀಪದೊಳ್ ಸಾರಂಗವಿರ್ದೊಡಂ ಸಿಂಹಮೆಂದುಂ ಕಾಂಕ್ಷಿಸದು; ಮದಸೊರ್ಕಿದಾನೆಯ ಮಸ್ತಕದ ಮೇಲೆ ದಿಟ್ಟಿನಟ್ಟಿರ್ಪುದು.]

ಎಂಬೀಶ್ಲೋಕಾರ್ಥದಿಂ ಮೃಗಾಧಿರಾಜನೆನಗೆ ಮುಳಿಯನಾದೊಡಂ ಮೃಗಧೂರ್ತನನವಜ್ಞೆಗೆಯ್ವುದುಚಿತಮಲ್ಲ. ಎಂತುಂ, [೧೫

ವಾಕ್ಯಂ॥ "ತೃಣಮಪಿ ಪುರುಷೋ ನಾವಮನ್ಯೇತ ॥" ೨೧

[ಟೀಕು—ಪುರುಷನು ಹುಲ್ಲನ್ನೂ ಕಷ್ಟಂಬಗೆಯಲಾಗದು.]

ಎಂಬ ವಾಕ್ಯಾರ್ಥದಿಂದೀತನನುದಾಸೀನಂಮಾಡಿ ಕಳಿಪಿದೆನಪ್ಪೊಡೆ ನಾನುಮಂ ಪುಸಿದು ಪಿಸುಣ್ಬೇೞ್ದಪಂ: ಪೇೞ್ವಾಗಳ್[3] ಪಿಸುಣರ ಮಾತಿಂಗೆ ಮುನಿ ಮೊದಲಾಗಿ ಮನದೊಳ್ ಮುನಿಗುಮೆಂದೊಡೆ, ಆಸಿಂಗಂ ಮುಳಿಯದೇಕೆಕಿರ್ಪದಱಿಂದೀತನ ಮಾತಿಂಗೆ ತಕ್ಕ ಮಱು

ಪಾ—1. ಸೆವಂ. ಕ॥ ಗ॥ 2. ಭೂರಿ. ಗ॥
3. ನಾನಪಜ್ಞೆಯಂ ಪೂಡಿದೊಡೆ ಅವಮಾನಿತನಾಗಿ ಪೋದೊಡಂ ನೆಪವಿಟ್ಟೇನಾನುಮೊಂದು ಪಿಸುಣ್ಬೇೞ್ವನಾದೊಡಂ. ಕ॥

ಮಾತಂ ನುಡಿದೊಡಂಬಡಿಸಿ ಕಳಿಪುವೆನೆಂದು ಸಂಜೀವಕಂ ದವನಕಂ ಗಿಂತೆಂದಂ:- ನಿಮ್ಮರಸಂಗಾಳಾಗಲೆವೇಱ್ಕುಮೆಂದೆನ್ನಂ ನೀನಾಗ್ರಹಂ ಗೆಯ್ದಪೆ, ವಿಚಾರಿಸಿ ನೋೞ್ಪೊಡರಸರ್ ವಿಷಮಸ್ವಭಾವರದೆಂತೆನೆ:—



(ಪಿರಿಯಕ್ಕರವೃತ್ತಂ.)

ಕುಲಜನಪ್ಪನಂ ಕುಲಹೀನನೆಂದಪರ್ ಕುಲಹೀನನಂ ಕುಲಜಾತನೆಂಬರ್। ಕಲಿಯಂ ಕಡುಪಂದೆಯೆಂದು ಮಾತಾಡುವರ್ ಕಡುಪಂದೆಯ ಕಲಿಯೆಂದು ನುಡಿವರ್॥ ಪಲಬರ್ ಜೀಯೆನೆ ನನ್ನಿಯಂ ನುಡಿವನಂ ಪುಸಿಗನೆಂಬರ್ ಪುಸಿವಾತುಗನಂ। ನೆಲದೊಳೀತನೆ ಪುಸಿಯಿಲ್ಲದವನೆಂಬರರಸುಗಳ್ಗಿದು ನೈಜಗುಣಮಾಗಿರ್ಕುಂ ॥104 [೯

ವ॥ ಮತ್ತಮದಲ್ಲದೆಯುಂ, ಅರಸುಗಳ್ಗೆ ವಿರಸಮಾದವಸರದೊಳ್ ಚಾಗಿಯಂ ಲುಬ್ಧನೆಂಬರ್; ಭೋಗಿಯಪ್ಪನಂ ಪೂಜೆಗನೆಂಬರ್; ಸೌಭಾಗ್ಯಮುಳ್ಳವನಂ ಪಾಣ್ಬನೆಂಬರ್; ತ್ಯಾಗಿಯಂ ಅರ್ಥದೂಷಕನೆಂಬರ್ ಅರ್ಥದೂಷಕನಂ ತ್ಯಾಗಿಯೆಂಬರ್; ಏಗೆಯ್ದುಂ ಪೞಿವೆಸ್ಗಾಟಿಸುವನಂ ಶುಚಿಯೆಂಬರ್; ಶುಚಿಯಂ ಅಶುಚಿಯೆಂಬರ್; ಧೂರ್ತನಂ ಛಾಂದಸನೆಂಬರ್; ಮೇಕುದೋಱಿ ಒರೊರ್ವರ ಗುಣಕ್ಕೆ ಮಚ್ಚರಿಸಿ ತೋಱುತ್ತಿರ್ಪರೀಕಾಲದರಸುಗಳ್. ಅದಲ್ಲದೆಯುಂ, [೧೬

(ಅಕ್ಕರವೃತ್ತಂ.)?

ಒರ್ವನಱಿಗೆ ಪರೊರ್ವನಮುನ್ನಂ ಬಱಿಕ್ಕವನೊಳ್ಗುಣಂಗಳಂ
ನೋಡಿ ಸೈರಿಸದೆ ಪುರುಡಿಪಂತಿರೆ ಪೊರೆವರ್ ಮ
ತ್ತೊರ್ವನಂ ಮುನಿಸಿನೊಳ್ ಕಳೆವರಱ್ಕಿಱಿಂ ಕೂ
ತೊರ್ವನಂ ಕೂರದಂತಿರ್ಪರರಸುಗಳವಿಚಾರರಪ್ಪುದಱಿಂ ॥105

ಟೀ—೧೧. ಪೂಜೆಗಂ = ಪುರುಡುಗಾಱಿಂ.



(ತ್ರಿಪದಿ.)

ಹಿತವನತಿಭಕ್ತ[1]ನನ್ವಿತನಿವಂ[1] ಸುಭೃ[2]ತ್ಯಂ।
ಕೃತಕೃತ್ಯನೆನ್ನರ್ ಪಿಸುಣಿಂದೆ ಕಿಡಿಪರೀ।
ಕ್ಷಿತಿಪತಿಗಳಿಂತವಿಚಾರದಿ[2] ॥ 106

ವ॥ ಇಂತಪ್ಪವಿವೇಕಿಗಳುಮಜ್ಞಾನಿಗಳುಮಪ್ಪರಸುಗಳನೋಲೈಪುದರಿದು. ಎಂತುಂ [3]ಸೇವಾ[3]ವೃತ್ತಿಯೇ ಕಷ್ಟಮದೆಂತೆನೆ:— [೭

ಶ್ಲೋ॥ "ಪ್ರಣಮತ್ಯುನ್ನತಿಹೇತೋರ್ಜೀವಿತಹೇತೋರ್ವಿಮುಂಚತಿ ಪ್ರಾಣಾನ್।
[4]ದುಃಖೀಯತಿ ಸುಖ[4]ಹೇತೋಃ ಕೋ ಮೂಢಸ್ಸೇವಕಾದಪರಃ ॥" ೧೪

[ಟೀಕು—ಉನ್ನತನಾಗಿರ್ಪನೆಂಬುವಂ ತನ್ನೊಡೆಯಂಗೆ ಪೊಡೆಮಡವೇಳ್ಕುಂ; ಜೀವಿತಮಂ ಕೊಂಡು ಬಾಳ್ವೆನೆಂಬವಂ ಪ್ರಾಣಮಂ ಕುಡಲ್ವೇಳ್ಕುಮದಲ್ಲದೆ ಸುಖಂಬಡೆವೆನೆಂಬುವಂ ದುಃಖಂಬಡುವನದುಕಾರಣಂ ಓಲಗಿಪವನಿಂ ಮೂಢನಾರುಮಿಲ್ಲ.]

ಮತ್ತಮಲ್ಲದೆಯುಂ,

ಶ್ಲೋ॥ " [5]ಭೇತವ್ಯಂ ನೃಪತೇಸ್ತತಸ್ಸಚಿವತೋ ಧೂರ್ತಾತ್ತತಸ್ಸುಹೃದೋ।
ಯೋ ದೈನ್ಯೇನ ಭವಂತಿ ಯಸ್ಯ ಭವನೇ ಲಬ್ಧಪ್ರಸಾದಾ ವಿಟಾಃ॥
ಕೃಚ್ಛ್ರಾತ್ಮೋದರಪೂರಣಾರ್ಥಮನಿಶಂ ವ್ಯರ್ಥೀಕೃತಾಯಾಸತ। [೧೫
ಸ್ಸೇವಾಂ ಲಾಘವಕಾರಿಣೀಂ ಖಲು ಬುಧಾಃ ಸ್ಥಾನೇ ಶ್ವವೃತ್ತಿಂ ವಿದುಃ[5] ॥ ೧೫

[ಟೀಕು—ಸೇವಕಂ ಮೊದಲೊಳರಸಂಗಂ ತದನಂತರಂ ಪ್ರಧಾನರ್ಗಂ ಅರಸಿನ ಮಿತ್ರರ್ಗಂ ಸಲುಗೆಯುನುಳ್ಳವರ್ಗಂ ಧೂರ್ತಜನಕ್ಕಂ ಭೀತನಾಗಿರಲ್ವೇಳ್ಕುಂ. ಅದಲ್ಲದೆ ತನ್ನ ದೈನ್ಯದಿಂ ಸುಖಂಬಡೆವನೆಂಬ [6]ಲಂಪಳಿಕೆ[6]ಯಾಯಾಸಮಹುದು. ಇಂತು ಲಘುತರಮಪ್ಪ ಸೇವೆಯಿಂ ತನ್ನಿಚ್ಛೆಯೊಳ್ ಬರ್ದುಂಕುವ ಶುನಕಂ ಲೇಸೆಂದು ವಿದ್ವಾಂಸರ್ ಪೇಳ್ವರ್.]

---

ಪಾ—1. ನಮ್ಮಿತಶುಚಿ. ಕ ॥ ,ನನ್ವಿತಶುಚಿ. ಗ ॥ 2. ತ್ಯನಕೃತಕ್ಲೇಶನೆನ್ನರ್ಪಿಸುಣಿಂದೆ ಭೂಪತಿಗಳ್ಸೇವಕನನವಿಚಾರದಿ. ಕ ॥ ಗ 3. ಸೇವಕಾ. ಕ ॥ ಗ ॥
4. ದುಃಖ್ಯತಿಚಸೌಖ್ಯ. ಕ ॥ 5. ಶ್ಲೋ ॥ ಭೇತವ್ಯಂ ನೃಪತೇಸ್ತತಸ್ಸಚಿವತೋ ರಾಜ್ಞಸ್ಸುತಾ (ದ್ವೇಷಿತಃ) ದ್ಧೂರ್ತತಃ । ಧನ್ಯಾಸ್ತೇಸುಖಲೇಶಲೀನಮನಸಃ ಪ್ರಾಪ್ತಪ್ರಸಾದೋದಿತಾಃ ॥ ನೋಚೇತ್ಪೀಡನಮಾನಹಾನಿಮಧಿಕಂ ಯಾಂತಿ ಪ್ರತೀತಂ ತತಃ । ಸೇವಾಲಾಘವಕಾರಿಣೀ ನನು ಮಹಾಕಷ್ಟಂ ವಿಧೇಶ್ಚೇಷ್ಟಿತಂ. ಕ ॥ ಗ ॥
6. ಲಾಂಪಟ್ಯ. ಕ ॥

ಎಂಬ ಪುರಾತನನೀತಿವಾಕ್ಯಮುಂಟಪ್ಪುದಱಿಂ,[1] ಸೇವಾವೃತ್ತಿ ಕಷ್ಟಂ[1]. [2]ರಾಜಸೇವೆಯೆಂಬುದು ಜೀವನೋಪಾಯಕ್ಕೆ ಕಾರಣಂ; ಎನಗೆ ಜೀವಿತಂ ಪುಲ್ಲುಂ ನೀರುಂ; ಇವುಳ್ಳೊಡೆ ಸಾಲ್ಗುಂ; ಅವೀಗಳೆಲ್ಲಿಯುಂ ಸುಲಭಂ; ಅದಱಿನೋಲಗದೊಳಪ್ಪ ಸೌಖ್ಯಂ[2] ಬಾರ್ತೆಯಿಲ್ಲಂ; ಎಂತುಂ

ಸಾಲದೆ ಸೋಲದೆ ಪೊಡೆಮ। [೫
ಟ್ಟೋಲೈಸದೆ ನಿಚ್ಚವಯಣ[3]ಮಿಲ್ಲದೆ[3] ತನ್ನಿ॥
ರ್ದಾಲಯದೊಳಿರ್ದು [4]ಬಾಳ್ವುದೆ[4] ।
ಭೂಲೋಕಮನಾಳ್ವ ಸೊಗದಿನಗ್ಗಳಮಲ್ತೇ ॥107

ಎಂದು ಸಂಜೀವಕಂ ನುಡಿದ ಸಾಭಿಪ್ರಾಯವಚನಂಗಳಂ ದವನಕಂ ಕೇಳ್ದು ಚೋದ್ಯಂಬಟ್ಟು—ಆಃ! ಇದು ಶಾಪೋಪಹತಮಾದ ಮಾನವನಾಗಲೆವೇಳ್ಕುಂ. ಕೇವಲಂ ವೃಷಭನಾಗಲಱಿಯದು. ಇದಱ ಮಾತಂ ಕೇಳ್ದೆನಗಂ ಮೊದಲಾಗಿ ಮನದೊಳ್[5] ಸಮ್ಮೋಹನ[5]ವಾದಪುದು.[5] ಈ ಸಂಜೀವಕನನುಯ್ದು ಪಿಂಗಳಕನೊಳ್ ಕೂಡಿ ಕೆಳೆಯನಂ ಮಾಡಿದೆನಪ್ಪೊಡಿದುವೇ ಪ್ರಧಾನನಕ್ಕುಂ. [6]ಆದಂದು[6] [೧೪

ಶ್ಲೋ ॥ "ಏಕದ)ವ್ಯಾಭಿಲಾಷಿತ್ವಂ ಮಹತಾಂ ವೈರಕಾರಣಂ ॥" ೬

ಎಂಬಂತಿದರ್ಕೆಮೆನಗಂ ಬದ್ಧವೈರಮಕ್ಕುಂ. ಅದಱಿಂದೀತನನುಯ್ದು ಸ್ವಯಂಕೃತಾನರ್ಥಮುಂ ಮಾಡಿಕೊಳ್ವುದಿದಾವಕಾರಣಮೆಂದಾತ್ಮಗತಂಬಗೆದು, ಮತ್ತಮೀವೃಷಭನನಾಂ ತರ್ಪೆನೆಂದು ಪಿಂಗಳಕಂಗೆ

ಟೀ—೧೫. ಒಂದೇ ಪದಾರ್ಥದಲ್ಲಿ ಆಶೆಪಡುವದು ದೊಡ್ಡವರುಗಳಲ್ಲಿಯೂ ವೈರವನ್ನು ಉಂಟುಮಾಡುತ್ತದೆ.

ಪಾ—1. ಸೇವಾಧರ್ಮಮಧಿಕಕಷ್ಟವೃತ್ತಿಯಹುದಾಗಿ ದೈವದಿಂ ಕಲ್ಪಿಸಲ್ಪಟ್ಟುದು, ಎಂಬ ಸೇವಾವೃತ್ತಿಯಂ ಶ್ವವೃತ್ತಿಯೆಂದು ಪೇೞ್ದರ್; ಅಂತುಮಲ್ಲದೆ. 2. ಜೀವನೋಪಾಯಾರ್ಥಮಾಗಿ ರಾಜಸೇವೆಗೆಯ್ವೊಡೆನಗೆ ಪುಲ್ಲುಂ ನೀರುಮುಳ್ಳೊಡೆ ಸಾಲ್ಗುಂ; ಅದಱಿನೋಲಗದೊಳಿರ್ಪರ್ಥಿತ್ವಂ. ಗ ॥ 3. ಪೋಗದೆ. ಖ ॥ ಗ ॥ 4. ಬಾೞ್ವೊಡೆ. ಕ ॥ 5. ಪೊಗೆಯಿಪುದು. ಗ ॥ 6. ಆದೊಡೆ. ಕ ॥ ಗ ॥

ಪೂಣ್ದು ಬಂದೀಗಳ್ ಸ್ವಾರ್ಥಮನಾಳೋಚಿಸಿ ಪುರುಷಾರ್ಥಮಂ ಬಿಸುಟೆನಪ್ಪೊಡೆ,

ಶ್ಲೋ || "ಪ್ರಾರಬ್ಧಸ್ಯಾಂತಗಮನಂ ಮಹಾಪುರುಷಲಕ್ಷಣಂ||" ೨೩

[1]ಎಂಬುದು[1] ಕಿಡುಗುಂ. ತುದಿಯೊಳ್ ಎನಗಪ್ಪುದಾಗಲೀಗಳೀತನನೇತೆಱದೊಳಾದೊಡಮೊಡಂಬಡಿಸಿ ಪಿಂಗಳಕನಲ್ಲಿಗುಯ್ವೆನೆಂಬುದನೆ ನಿಶ್ಚಯಿಸಿ, ಸಂಜೀವಕಂಗಿಂತೆಂದಂ:— ನೀನಪ್ಪೊಡೆ ಪಶು, ನಿನ್ನಂ ಮತ್ಪೂರ್ವಂ ರಕ್ಷಿಸದಂದು ನಿನಗೆ ಕ್ಷುದ್ರಮೃಗೋಪದ್ರವಮಕ್ಕುಮೆಂದು [2]ಪೇೞ್ವೆಂ. ಅದಲ್ಲದೆಯುಂ[2] ದೃಢಕಠಿನದೇಹನಪ್ಪ ನಿನ್ನಂ ಕಂಡಾಸಿಂಹಂ ಇದೊಂದಪೂರ್ವ[3]ಮೃಗ[3]ಮೆಂದು ಮುಳಿದಂದು ಜವಂ ಮುಳಿದಂತಕ್ಕುಮೆಂದು ಹಿತವಂ ಬಗೆದೊಡಂಗೊಂಡು ಪೋದಪೆನಲ್ಲದೆ ನಿನ್ನಿಂದಮೆನ್ನಾಳ್ದಂಗವೊಂದು ವಸ್ತುಸಾಧ್ಯಮಕ್ಕುಮೆಂದುಯ್ವೆನಿಲ್ಲ. ನೀನಮೋಘಂ ರಾಜದರ್ಶನಂಗೆಯ್ವುದುಚಿತಮದೆಂತೆನೆ:— [೧೨

ಶ್ಲೋ|| "ಗಂತವ್ಯಾ ರಾಜಸಭಾ ದ್ರಷ್ಟವ್ಯಾ ರಾಜಪೂಜಿತಾಃ ಪುರುಷಾಃ |
ಯದ್ಯಪಿ ನ ಭವೇದರ್ಥೋ ಭವೇದನರ್ಥಪ್ರತೀಕಾರಃ ||" ೨೪

[ಟೀಕು— ನೃಪಸಭೆಯನ್ನೆಯ್ದಲೆವೇೞ್ಕುಂ, ನೃಪರ್ ಮನ್ನಿಸುವ ಪುರುಷರಂ ಕಾಣಲೆವೇೞ್ಕುಂ: ಎತ್ತಲಾನುಮರ್ಥಮಿಲ್ಲದಿರ್ದೊಡಂ ತನಗೆ ಬಂದನರ್ಥಮಂ ಪರಿಹರಿಸಲ್ ಬಹುದು.] [೧೩

ಎಂಬ ರಾಜನೀತಿಯುಂಟು. ಇದನಱಿವೊಡೆ, ನೀನೆನ್ನ ಬುದ್ಧಿಯಂ ಕೇಳ್ದು ಸುಖಂಬಾೞ್ವೊಡೆ, ಎನ್ನಾಳ್ದನಂ ಕಂಡು ನಿಶ್ಚಿಂತಮಿರ್ಪೆಯಾದೊಡೆ, ಎನ್ನೊಡನೆ ಬರ್ಪುದೊಳ್ಳಿತ್ತೆಂದು ನಯಭಯಮಂ ತೋಱಿ

ಟೀ—೩. ತೊಡಗಿದ ಕೆಲಸವನ್ನು ಕೊನೆಗಾಣಿಸುವದೆ ಮಹಾಪುರುಷಲಕ್ಷಣವು.

ಪಾ—1. ಎಂಬುದಱಿಂದೆನ್ನಗುಣಂ. ಕ || 2, ಅಲ್ಲದಂದು. ಕ || ಗ || 3, ರೂಪ. ಕ || ಗ ||

ನುಡಿದ ದವನಕನ ನುಡಿಗೆ ಸಂಜೀವಕಂ ಕರಮೊಳ್ಳಿತೆಂದಳ್ಕಿ—ನೀನೆಂತುಮೆನ್ನನುಯ್ದಲ್ಲದೆ ಮಾಣೆಯಪ್ಪೊಡೆ, ನಿನ್ನಾಳ್ದನೊಳಭಯವಚನಮಂ ಪಡೆದು ಬಂದೆನ್ನನೊಡಂಗೊಂಡು ಪೋಗೆಂಬುದುಂ; ದವನಕನಂತೆಗೆಯ್ವೆನೆಂದು ಬರುತ್ತೆ, "ಮುಱಿದ ಬಿಲ್ಗೆ ಮೂವ[1]ರಂಜಿದರ್[1]" ಎಂಬ ನಾಣ್ನುಡಿಯಿವರೊಳ್ ಕಾಣಲಾದುದೆಂದು ನಗುತ್ತುಂ ಬರ್ಪ ನರಿಯುಂ ಪಿಂಗಳಕಂ ದೂರಾಂತರದೊಳ್ ಕಂಡಿವಂ ತಡೆದು ಬರ್ಪ ಬರವೇ ಕಾರ್ಯಸಿದ್ಧಿಯಂ [2]ಪೇೞ್ದ[2]ಪ್ಪುದೆಂದು ಬಗೆವಿನಮೆಯ್ದೆವಂದು ಪೊಡೆವಟ್ಟ ದವನಕನ ಮೊಗಮಂ ನೋಡಿ—ನಾಡೆಯುಂ ತಡೆದೆಯೆಂಬುದುಮಾ ದವನಕನಿಂತೆಂದಂ:—ಮಹಾಭದ್ರಾಕಾರನಂ ರೌದ್ರಕೋಪಾಟೋಪನನನೇಕೋಪಾಯದಿನೆಂತಾನುಂ ಸಂಧಾನಕ್ಕೊಡಂಬಡಿಸಿದೊಡೆ ಮತ್ತಮಾ ಧೂರ್ತನೆೞ್ತಿನಂದಮನೆ ಮಾಡಿ ಮರ್ಯಾದೆಯೊಳೊರ್ಮೆಯೊಡಂಬಟ್ಟುಂ ಬರ್ಮೆಯೊಡಂಬಡದೆಯುಂ ಬಳಗವಿಕ್ಕಿ ಕಾಡಿದೊಡೆ ಮತ್ತಮೆಂತಾನುಮೊಡಂಬಡಿಸಿ ದೇವರ ಶ್ರೀಪಾದಮಂ ಕಾಣಲ್ಬರ್ಪಂತು ಮಾಡಿದೆಂ. ಇದೆಲ್ಲಮಂ ದೇವರ್ಗೆ ಪೂರ್ವಸೂಚನೆಗೆಯ್ದು ಬೞಿಕೆಯ್ಕೊಡಗೊಂಡು ಬರ್ಪೆನೆಂದು ಬಂದೆಂ. ದೇವರುಮಾಸಂಜೀವಕಂ ಬಂದು ಕಾಣಲೊಡಂ ಪರಮಮಿತ್ರನಂ ಕಂಡಂತೆ ಸಂಭ್ರಮವೆರಸು ಮನ್ನಿಸಿ ಸಂಭಾಷಣಂಗೆಯ್ವುದೆನೆ—ಪಿಂಗಳಕನಂತೆ ಗೆಯ್ವೆಂ, ನೀನೀಗಳೆ ಪೋಗಿ ಬೇಗಮೊಡಗೊಂಡು ಬರ್ಪುದೆನೆ -- ದವನಕಂ ಸಂಜೀವಕನಲ್ಲಿಗೆಯ್ದೆವಂದು,

ಕರುಣಂಗೆಯ್ದಂ ಮೃಗಗಣ।
ಪರಿವೃಢನಿನ್ನಂಜಬೇಡ[3]ಪಾದಂ[3] ಪುಣ್ಯಂ॥

ಪಾ—1. ರುಂಬೆಂದರೆಂಬ, ಗ ‖ 2. ಸೂಚಿಸಿದ, ಖ ‖ ಗ ‖ 3. ಪಿಂದುಂ. ಕ ‖ ಗ ‖

ದೊರೆಕೊಂಡುದು ನಿನಗೀಗಳ್‌ ।
ಶರಣಾಗತವಜ್ರಪಂಜರಂ ಪಿಂಗಳಕಂ ॥ 108

ಎಂದು ಪಲವು ತೆಱದಿಂ ಸಂಜೀವಕ[1]ನೊಳಾದ ಭಯಂ[1] ಪತ್ತುವಿಡೆ ಸಂತಸಂಬಡೆ ನುಡಿದೊಡಂಗೊಂಡು ಬಂದು,—ದೇವಾ, ಸಂಜೀವಕಂ ಬಂದನೆಂದು ಬಿನ್ನಪಂಗೆಯ್ವುದುಮಾಮೃಗೇಂದ್ರನಿಂದ್ರಪದವಿ ಕೈಸಾರ್ದಂತೆ ಪರಮಾನಂದಮನೆಯ್ದಿ—ತಂದು ಕಾಣಿಸೆಂಬುದುಂ; ದವನಕಂ ಪಡಿಯಱಂಬೆರಸು ಪೋಗಿ ಸಂಜೀವಕನಂ ಕಾಣಿಸಲೊಡಂ; ಮೃಗೇಂದ್ರಂ ವೃಷಭೇಂದ್ರನ ಮೊಗಮನಾದರಂಬೆರಸು ನೀಡುಂ ಭಾವಿಸಿ ನೋಡಿ, ಪಾದಪೀಠಾಂತರಕ್ಕೆ ಕರೆದು, [೯

ಉದಿತಸ್ಮೇರನಿಭೇಂದ್ರವೈರಿ ನಯದಿಂ ಕೈನೀಡಿ ಗೋಮುಖ್ಯ ಬ।
ಲ್ಲಿದಿರೇ ಸಂತಸಮೇ ಕರಂ ಕುಶಲಮೇ ಕ್ಷೇಮಾಂಗಮೇ: ದೇವ ಸ॥
[2]ಮ್ಮದಮುಂಬಲ್ಲಿದೆವಾಂ[2] ಕರಂ ಕುಶಲಮುಂ ಕ್ಷೇಮಾಂಗಮೀಗಳ್‌ ಭವ।
ತ್ಪದಪಂಕೇಜವಿಳೋಕಜಾತದಯೆಯಿಂದಾದೆಂ ಮೃಗಾಧೀಶ್ವರಾ ॥ 109

ಸದಯಂ ಮುಕ್ತಭಯಂ ನಮದ್ದವನಕಾಸ್ಯಾಲೋಕನಸ್ಮೇರಸ।
ದ್ವದನಂ ಸ್ವಾಗತಪೂರ್ವಮಾತ್ಮಕರಮಂ ಸಂಜೀವಕಂಗೊಲ್ದು ನೀ॥
ಡಿದನುದ್ಭಿನ್ನಮದಾಂಧಸಿಂಧುರಘಟಾಸಂಘಟ್ಟಕುಂಭಾಗ್ರನಿ । [೧೬
ರ್ಯದಸೃಕ್ಕುಂಕುಮಪಂಕಪಂಕಿಳಸಟಾಜಾಳಂ ಮೃಗಾಧೀಶ್ವರಂ॥ 110

ಅಂತು ಸಮದಕುಂಜರಘಟಾಪುಂಜಭಂಜನಂ ಮೃಗಾಧಿರಾಜಂ ಕೈನೀಡಿ ಸಂಜೀವಕನನನೇಕ[3]ಪ್ರಕಾರ[3]ಸನ್ಮಾನಕ್ರಿಯೆಗಳಂ ತಣಿಪಿ ಬಱಿಕ್ಕಿಂತೆಂದಂ:— [೨೦

ಪಾ—1. ನ ಮನದೊಳೊದವಿದ ಭೇದಮಂ, ಕ ॥ ಗ ॥
2. ಮ್ಮದಮುಂಬಲ್ಲಿದೆಯುಂ, ಖ ॥ 3. ದಾನ. ಕ ॥

ಶರಭವ್ಯಾಘ್ರೋಗ್ರಖಡ್ಗಿಪ್ರಕರಖರ[1]ಭಯಾಕ್ರಾಂತಮಂ[1]ಕ್ರೂರವಾನೇ। ಶಬರಚಂಚಚ್ಚಾಪಮೌರ್ವೀರವಬಧಿರಿತದಿಕ್ಚಕ್ರಮಂ ಸಿಂಹಸಂಘಾ ॥ [2]ತರವ್ಯೈಕಾಭೀಳಮಂ ಭೀಕರ[2]ಕುಧರಗುಹಾರೌದ್ರಮಂ ಘೋರಮಾದ್ಯ। ದ್ವಿರದವ್ಯಾಕೀರ್ಣಮಂ ನಿರ್ಜನವನಮನಿದಂ ಬಂದು [3]ನೀನೆಂತು ಪೊಕ್ಕೈ[3] ॥ 111

ವ॥ ಎಂದು ಬೆಸಗೊಳ್ವುದುಂ; ಸಂಜೀವಕನಾತ್ಮೀಯವನಪ್ರವೇಶಕಾರಣಮಂ ಸಪ್ರಪಂಚಂ ಬಿನ್ನಪಂಗೆಯ್ಯೆ ಪಂಚಾನನಂ ಕೇಳ್ದಿಂತೆಂದಂ:—

ಕ್ರೂರವನೇಚರಪ್ರಕರಮಂ ದ್ವಿರದೋತ್ಕರಮಂ ಭಯಂಕರಾ।
ಕಾರಚಮೂರುಸಂಕುಳಮನುದ್ಧತಭೀಕರಸೂಕರಾಳಿಯಂ ॥
ಸಾರದೆ ಭದ್ರ ನೀನಿರು ಮದೀಯಭುಜಾಪರಿಪಾಲಿತೋರುಕಾಂ।
ತಾರದೊಳಚ್ಛನೀರದೊಳನೇಕತೃಣಕ್ಷುಪಗುಲ್ಮಜಾಲದೊಳ್ ॥ 211

ಎಂದಿಂತು ಪಿಂಗಳಕಂ ಸಂಜೀವಕಂಗೆ ಸಂತುಷ್ಟ[4]ನುಮಾಗಿ ಬುದ್ಧಿಯಂ ಪೇೞ್ವುದುಂ; — ಮಹಾಪ್ರಸಾದಮಂತೆ[4]ಗೆಯ್ವೆನೆನಲೊಡಮೆರಡರ್ಕಂ ಪರಸ್ಪರಸ್ನೇಹಮಾಗೆ ಬಱಿಕ್ಕೆ ಸಂಜೀವಕನಂ ವಿಸರ್ಜಿಸಿ, ದಮನಕನ ಮೊಗಮಂ ನೋಡಿ—

ಶ್ಲೋ॥ "ಪ್ರತ್ಯಕ್ಷೇ ಗುರವಃ ಸ್ತುತ್ಯಾಃ ಪರೋಕ್ಷೇ ಮಿತ್ರಬಾಂಧವಾಃ।
ಕರ್ಮಾಂತೇ ದಾಸಭೃತ್ಯಾಶ್ಚ ನ ತು ಪುತ್ರೋ ಮೃತಾಃ ಸ್ತ್ರಿಯಃ ॥" ೨೯

[ಟೀಕು— ಗುರುವಂ ಮುಂದೆ ಪೊಗೞ್ವುದು; ಮಿತ್ರರಂ ಬಂಧುಗಳಂ ಪಿಂದೆ ಪೊಗೞ್ವುದು; ಕೆಲಸದ ಕಡೆಯಲ್ಲಿ ದಾಸಭೃತ್ಯರಂ ಪೊಗೞ್ವುದು; ಮಗನನೆಂದುಂ ಪೊಗೞಲಾಗದು; ಸ್ತ್ರೀಯಂ ಸತ್ತ ಬಱಿಕ್ಕೆ ಪೊಗೞ್ವುದು.]

ಎಂಬ ನೀತಿಯುಂಟು. ಈತನೆನಗೆ ಕೃತಕ್ಲೇಶನಪ್ಪುದಱಿಂದೀಯವಸರದೊಳೆ ಸಂತಸಂಬಡಿಸಲ್ವೇೞ್ಕುಮೆಂದಿಂತೆಂದಂ: — ನಿನ್ನಂತೆ

ಪಾ—1. ಭಯವ್ರಾತಮಂ. ಕ ॥ 2. ಕರಮುಂಭೀಕರಮುಂ ಮಹಾ ಕ ॥
3. ಪೊಕ್ಕಂದಮೇನೋ. ಕ ॥ 4. ನಪ್ಪಂತು. ಕ ॥ ಗ ॥

ಪ್ರಾಪ್ತಮಂತ್ರಿಪುತ್ರನಿಂದೆಮಗೆ ಮನೋರಥಸಿದ್ಧಿಯಾದುದೆಂದು ದವನಕನಂ ಸಪ್ರಸಾದವಚನಂಗಳಿಂ ಸಂತಸಂಬಡೆ ನುಡಿದು, ಬಟ್ಟೆಗೆ ನೀರನುಣಲ್ ಪೋಗಲ್ ಬಗೆದಲ್ಲಿಂ ತಳರ್ದು, [೭

ಅಳಿಮಾಳಾನೀಳನೀಳೋತ್ಪಳದಳವಿಳಸತ್ಕಂಜಕಿಂಜಲ್ಕಪುಂಜಾ ।
ವಿಳಕಾಳಿಂದೀನದೀತೀರಮನತಿಮುದದಿಂದೆಯ್ದೆವಂದಂ ಪಿಪಾಸಾ ॥
ಕುಳಿತಂ ಪಂಚಾನನಂ ಶ್ವಾಪದಗಣಸಹಿತಂ ಭಿನ್ನ[1]ವನ್ಯೇಭ[1]ಕುಂಭ ।
ಸ್ಥಳೀಶುಂಭದ್ಬಿಂಬ[2]ಕಾವಗ್ರಹಗಗನಸಿರಾಸಿಕ್ತಸಿಕ್ತಾಂಗಪೀಠಂ[2] (?) ॥ 113

ಅಂತೆಯ್ದಿ, [೮

ಯಮುನಾವಾರಿಯನಿಂದ್ರನೀಲಮಣಿಭೃಂಗಾಕಾರಿಯಂ ಪ್ರಾಣಿವ ।
ರ್ಗಮನೋಹಾರಿಯನುಜ್ಜ್ವಲಾಂಬುಜರಜಶ್ರೀಭಾರಿಯಂ ಸ್ವೇಚ್ಛೆಯಿಂ
ಸಮೃಗವ್ರಾತನಭೀತಚೇತನತುಳಂ ಪೀರ್ದಂ ಗಜಾರಾತಿ ಪಂ ।
ಚಮುಖಂ [3]ತೀಕ್ಷ್ಣನಖಂ ಸಕೇಸರಶಿಖಂ[3] ವಿಕ್ರಾಂತಲಕ್ಷ್ಮೀಸಖಂ ॥

ವ॥ ಅಂತು ಪಿಂಗಳಕಂ ಯಮುನಾಜಳಮನೀಂಟಿ ಮಗುಟ್ದು ಬಂದು [4]ನಿಜಭುಜಪರಿಪಾಲಿತಕಾಂತಾರಮಂ ಪೊಕ್ಕು ಅರಮನೆಗೆ ಬಂದು ದೆಸೆದೆಸೆಗೆಯ್ದಿ ಸಕಲಮೃಗಗಣಸಮೇತಂ ತಾನುಂ ಸಂಜೀವಕನುಂ ಏನೋದಪ್ರಾಣಮಿತ್ರರಾಗಿರ್ದೆಡೆಯೊಳೊಂದು ದಿವಸಂ ಪಿಂಗಳಕನನೇಕ ಕರಿಣೀಕಳಭವ್ರಾತಮನಸಂಖ್ಯಾತಮಂ ಕೊಂದು ಕಾಕಾನೀಕಜಂಬುಕನಿಕುರುಂಬಕ್ಕೆ ಸೋವತಂ ಮಾಡುವುದಂ[1] ಸಂಜೀವಕಂ ಕಂಡು ಕರುಣರಸಾರ್ದ್ರಹೃದಯನಾಗಿ ತಾಂ ಮುನ್ನಮೆ ಧರ್ಮಾರ್ಥಿವರ್ಧನಚಂ

ಪಾ—1. ಮತ್ತೇಭ. ಗ ॥ 2. ತಾವಗ್ರಹಸಹನಶಿರಂಪಿತ . . . ಘಟಾಗ್ರಂ. ॥
3. ದಿವ್ಯನಖಂಸಖೇಚರಸಿಖಂ. ಖ ॥ 4. ಸಂಜೀವಕಂ ಮಿತ್ರನಾದುದೆಂದು ಪರಮಸಂತೋಷದಿಂ ದವನಕಕರಟಕಸಂಜೀವರೊಡಗೊಂಡು ಅರಣ್ಯರಾಜಾಧಿಪತ್ಯಮಂ ಗೆಯ್ಯುತೆ ಬಹುಪಶುಗಳಂ ಹಿಂಸೆಗೆಯ್ದು ಮಾಂಸಂಗಳಂ ತನ್ನಾಶ್ರಿತರ್ಗೆ ತಿನಿಘಾಯದಿಂ ಪ್ರತಿದಿನಂ ಕ್ಷುದ್ರಮೃಗಂಗಳಂ ಹಿಂಸಿಸುತ್ತಿರಲ್ ಪೂರ್ವಾಪರಜ್ಞಾನವಂತನಾದ. ಗ ॥

ದ್ರಾಯುಮಾನನಪ್ಪ ವರ್ಧಮಾನನ ಮನೆಯೊಳಿರ್ಪಂದಷ್ಟಾದಶಪುರಾಣ ಶ್ರುತಿಸ್ಮೃತಿರಾಮಾಯಣಭಾರತಾದಿಕಥಾಶ್ರವಣಪರಿಣತನುಂ ಮನ್ವತ್ರಿ ವಸಿಷ್ಠಹಾರೀತಯಾಜ್ಞವಲ್ಕ್ಯಾಂಗಿರಸಸಂಯಮನಾಪಸ್ತಂಬಸಂವರ್ತ ಕಾತ್ಯಾಯನ ಬೃಹಸ್ಪತಿಪಾರಾಶರವ್ಯಾಸಾಂಬರೀಷಗೌತಮ ಸತ್ಯಂತಪ ಭೃಗುಕಾಶ್ಯಪವಿಶ್ವಾಮಿತ್ರವಾಮದೇವಲೋಕಾಯತಾದಿಸಮಸ್ತಮು ನಿಮುಖ್ಯಮುಖವಿನಿರ್ಗತಶ್ರುತಿಸ್ಮೃತಿವಿಹಿತಧರ್ಮವಿಚಾರಪಾರಗನ ಪ್ಪ ಕಾರಣದಿಂ ವಾರಣಗಣಕ್ಕಕಾರಣಮಪ್ಪ ಪ್ರಾಣಹಾನಿಯುಮಿಷ್ಟಂ ಗದೃಷ್ಟಹಾನಿಯುಮಾಗದಂತು [1]ಮಾಡುವೆನೆಂದು[1] ಮನದೊಳ್ ನೆನೆದು ಪಿಂಗಳಕನಲ್ಲಿಗೆ ವಂದಿಂತೆಂದಂ:— [೯

ಆರೈದು ನೋಡೆ ಧರ್ಮಮೆ ।
ಸಾರಂ ಸಂಸಾರಿಗದಱಿನುತ್ತಮಧರ್ಮಾ ॥
[2]ಧಾರ[2]ಮತಿಯಾಗಿ ನೆಗೞ್ವುದು* ।
ಘೋರಾಘವಿದೂರನೆನಿಪ ಪುರುಷಂ ಧರೆಯೊಳ್ ॥115

ಅನಿಮಿಷಚಾಪದಂತೆ ಸಿರಿ ಶಾರದನೀರದಕಾಂತಿಯಂತೆ ಯೌ ।
ವನದೆಸಕಂ ತೃಣಾಗ್ರಗತವಾಃ[3]ಕಣಿಕಾಗಣದಂತೆ[3] ಸಂದ ಜೀ ॥ [೧೫
ವನಮದಱಿಂ ಭವಪ್ರಭವಜೀವಿಗೆ ನಿರ್ಮಲಧರ್ಮಮಾರ್ಗದೊಳ್ ।
ಮನವೊಸೆದಾಗಳುಂ ನಡೆಯವೇೞ್ಪುದು ವಿಶ್ವಮೃಗೇಂದ್ರವಲ್ಲಭಾ! ॥

ಅದಲ್ಲದೆಯುಂ,

ಶ್ಲೋ॥ [4]"ಇಷ್ಟಾಯ ದುರ್ಮತಿಂ ದದ್ಯಾದ್ಯೋ[4]ನಾಮ ನರಕಂ ವ್ರಜೇತ್।
ತಸ್ಮಾತ್ಸರ್ವಪ್ರಯತ್ನೇನ ಇಷ್ಟಂ ಧರ್ಮೇಣ ಯೋಜಯೇತ್ ॥" ೩೦

ಪಾ— 1. ಮಾಟಿಪ್ಪೆನೆಂದು ನಯವಿನಯೋಕ್ತಿಗಳಿಂ ಭೇದಮಪ್ಪ ಧರ್ಮಬೋಧೆಗಳಂ ಮಾಡುವೆನೆಂದು. ಗ ॥ 2. ಸಾರ. ಗ ॥ 3. ಕಣಸಂಚಯದಂತೆ. ಕ ॥ ಖ ॥
4. ಅನಷ್ಟೇ (ಇಷ್ಟಸ್ಯ) ಧುರ್ಮತಿಂ ಧದ್ಯಾನ್ನಾಶಂಚ. ಕ ॥ ಗ ॥

[ಟೀಕು—ಇಷ್ಟಂಗಾವನದೊರ್ವಂ ದುರ್ಬುದ್ಧಿಯನಿತ್ತಪನವಂ ನರಕದೊಳಗಿಱಿವನದು ಕಾರಣದಿಂ ಸರ್ವಪ್ರಯತ್ನದಿಂದಿಷ್ಟಂಗೆ ಧರ್ಮವನೆ ಮಾಡಿ ಕುಡಲ್ವೇೞ್ಪುದು.]

ಎಂಬ ನೀತಿವಚನಮುಂಟಪ್ಪುದಱಿಂ ನಿಮ್ಮಡಿಗಳ್ಗೆ ಹಿತೋಪದೇಶಂಗೆಯ್ಯಲ್ ಬಂದೆಂ. ಇದಂ ದಿವ್ಯಚಿತ್ತದಿಂದವಧರಿಸಿ ಕೈಕೊಳ್ವುದೆಂದನೇಕಪ್ರಕಾರವಚನರಚನೆಗಳಿಂ ಪಂಚಮುಖನಂ ತನಗಭಿಮುಖನಂ ಮಾಡಿ ಸವಿಸ್ತರಂ ಪೇೞಲ್ ತಗುಳ್ದಂತೆಂದಂ:—

ದೇವರ್ ಮುನ್ನಿನ ಭವದೊಳ್ ಮಾಯಾಪುರಮೆಂಬ ಪಟ್ಟಣದೊಳ್ ಸಿಂಹವರ್ಮನೆಂಬರಸಾಗಿ ರಾಜ್ಯಂಗೆಯ್ಯುತ್ತುಂ ಪಲವು ಕಾಲದಿಂ ಮೇಲೆ ಸಂಸಾರಸುಖಕ್ಕಲಸಿ ತಪೋವನದೊಳ್ ನೆಲಸಿ [1]ನಿಲುತ್ತುಮಾಪ್ತಾ[1]ಗಮಪದಾರ್ಥಂಗಳನಱಿಯದೆ ಗುರೂಪದೇಶಂಗೊಳ್ಳದೆ ಪಂಚಾಗ್ನಿಸಾಧಕನಪ್ಪ ತಪೋಧನನಂ ಕಂಡಾನುಮಿಂತೆ ತಪಂಗೆಯ್ವೆನೆಂದು ಪಂಚಾಗ್ನಿತಾಪತಪ್ತನಾಗಿ ಭಾವಶುದ್ಧಿಗೆಟ್ಟು ಕೋಪಾಗ್ನಿ ಪೆರ್ಚಿ ರೌದ್ರಧ್ಯಾನದೊಳ್ ಸತ್ತತುಳಬಲಪರಾಕ್ರಮನಪ್ಪ ಸಿಂಗನಾಗಿ ಪುಟ್ಟಿದಿರ್. ಆನುಂ ತಪೋವನದೊಳ್ ಪಲಕಾಲಂ ತಪಂಗೆಯ್ಯೆ ಕೇವಲಜ್ಞಾನಂ ಪುಟ್ಟು[2]ವ[2]ಲ್ಲಿ ಜನ್ಮಾಂತರದುಷ್ಕರ್ಮವಾಸನೆ [3]ಮಿಗೆ[3] ಗುರುಗಳಾಜ್ಞೆಯನವಜ್ಞೆಗೆಯ್ದು ತಾಪಸಕನ್ಯಕೆಯಂ ಕಂಡು ಸಾಪೇಕ್ಷನಾಗಿ ನೋಡುವುದುಮಾತಪಸ್ವಿ ಕಂಡು ಮುಳಿದೆನಗೆ — ಪಶುವಿನ ಬಸಿಱೊಳ್ ಬರ್ಪುದೆಂದು ಶಾಪವನೀಯೆ [4]ಶಾಪ[4]ಕ್ಕಳ್ಕಿ ಕೈಕೊಂಡು ನಿಮ್ಮಡಿಗಳಲ್ಲಿ ದಯೆಯುಳ್ಳೊಡೆ ಧರ್ಮಶ್ರವಣಮುಳ್ಳವರ್ಗಳ ಮನೆಯಲ್ಲಿ ಪುಟ್ಟುವಂತು, ಜಾತಿಸ್ಮರನಪ್ಪಂತು, ವರಮಂ ದಯೆಗೆಯ್ಯಿಮೆನೆ; ತಪಸ್ವಿ ಕಾರುಣ್ಯದಿಂ, ತಥಾಸ್ತುವೆನಲದಱಿಂ ನಿರ್ಮಳಧರ್ಮಮಾರ್ಗನಪ್ಪ ವರ್ಧಮಾ

ಪಾ— 1. ನಿಂದುಮಾಪ್ತಾ. ಗ ‖ 2. ತ. ಗ ‖
3. ಮಿಸುಗೆ. ಕ ‖ ಗ ‖ 4. ಪಾಪ ಕ ‖ ; ದೋಷ. ಗ ‖

ನನ ಮನೆಯೊಳ್ ಪಶುವಾಗಿ ಪುಟ್ಟಿ ಧರ್ಮಾಧರ್ಮಂಗಳನಱಿವೆಸಪ್ಪುದಱಿಂ ನಿಮಗೆ ತಿಳಿಪಿದಪೆನದೆಂತೆನೆ :—

ಆಯತಚಿತ್ತ! ಮತ್ತಕಳಭೋತ್ಕರಮಂ ತವೆ ಕೊಂದಕಾರಣಂ ।
ವಾಯಸಗೃಧ್ರಸಂಕುಳವೃಕಪ್ರಕರೋರುತರಕ್ಷುಋಕ್ಷಗೋ ॥
ಮಾಯುನಿಕಾಯಮಂ ತಣಿಪಿ ವಿಶ್ವಮೃಗೇಶ್ವರಚಕ್ರವರ್ತಿಲ ।
ಕ್ಷ್ಮೀಯುತ ಮಾಡಿ ಕೊಳ್ಳದಿರು ನೀನನಿಮಿತ್ತಮದೃಷ್ಟಹಾನಿಯಂ॥ 116

ಎಂದು ಮಾಣದೆ ಮತ್ತಮಿಂತೆಂದಂ:— ನೀನೀಕ್ರೂರಕರ್ಮಮಂ ಪತ್ತುವಿಡದೆ ನಡೆದು, ನರಕದೊಳ್ ನಾರಕರ್ ಮಾೞ್ಪ ಘೋರತರತಾಪಕ್ಕೆ ಪಕ್ಕಾಗಿ ನಿಷ್ಕಾರಣಂ ಕಿಡದೆ, ಎನ್ನ [1]ಪೇೞ್ವುದಂ[1] ಗೆಯ್ವೆಯಪ್ಪೊಡೆ ವೃಥಾಪ್ರಾಣಿವಧೆಯಂ ಮಾಣ್ದು ಪರಲೋಕಸುಖಮಂ ಪಡೆದು ಕೊಳ್ವುದೆ ಬುದ್ಧಿಯೆನೆ — ಪಿಂಗಳಕನಿಂತೆಂದಂ:—ಸಮಸ್ತಪ್ರಾಣಿಗಳುಂ ತಂತಮ್ಮ ಜಾತಿಗೆ ತಕ್ಕಂದದೊಳೆ ಜೀವನೋಪಾಯಮಂ ಚಿಂತಿಸಿಕೊಂಡು ಬಾೞ್ವುದೆ ಧರ್ಮಮದಱಿನೆನಗಂ ಕೊಲ್ವುದುಂ ತಿಂಬುದುಂ ಧರ್ಮಮಲ್ಲದೆ ಪೆಱತು ಧರ್ಮಮಾವುದುಮಿಲ್ಲೆನೆ—ಸಂಜೀವಕಂ ಪೇೞ್ಗುಂ:—

ಈಲೋಕದೊಳ್ ತತ್ವನಿಶ್ಚಯಂಗೆಯ್ವುದೆ ಕಾರಣಮಾಗಿ ಸಮಯಸಿದ್ಧಾಂತಂಗಳ್ ಪಲವಾದುವು. ಅಲ್ಲಿ ಧರ್ಮಮಧರ್ಮಮೆಂದೆರಡೆ ಭೇದಮಕ್ಕುಂ. ಅವಾವುವೆಂದೊಡೆ—[2]"ನ ಹಿಂಸ್ಯಾತ್ ಸರ್ವಭೂತಾನಿ" ಎಂದು ಅಕಳಂಕತರ್ಕಪ್ರತಿಷ್ಠಾನಿಶ್ಚಯಜೈನಸಿದ್ಧಾಂತವಾದಿಗಳುಂ; "ಅಹಿಂಸಾಲಕ್ಷಣೋ ಧರ್ಮಃ" ಎಂಬ ವೈಶೇಷಿಕನೈಯಾಯಿಕಸಾಂಖ್ಯಮೀಮಾಂಸಕಷಟ್ತರ್ಕಸಿದ್ಧಾಂತವಾದಿಗಳುಂ: ಈಯೊಂದೆಡೆಯೊಳ್ ಏಕವಾಕ್ಯರಾಗಿ ಪ್ರಾಣಿರಕ್ಷಣಮೆ ಪರಮಧರ್ಮಂ ಪ್ರಾಣಿವಧೆಯೆ ಪರ

ಪಾ—1. ಪೇೞ್ಕೆ. ಖ ॥ 2. "ಅಹಿಂಸಾಲಕ್ಷಣೋಧರ್ಮಃ" ಎಂದು ವೈದಿಕರೆಂಬರ್ "ನಹಿಂಸ್ಯಾತ್ಸರ್ವಭೂತಾನಿ" ಎಂದಾರ್ಹತಾದಿದರ್ಶನಂಗಳಶಾಸ್ತ್ರದಲ್ಲಿ ಪೇೞ್ವುವದಱಿಂ. ಖ ॥

ಮಪಾತಕಮೆಂಬುದಱಿಂ[2] ಪ್ರಾಣಿವಧೆಗೆಯ್ಯಲಾಗದೆನೆ—ಮತ್ತಂ ಪಿಂಗಳಕನಿಂತೆಂದಂ:—

ಅಂತಪ್ಪೊಡೆ ಶ್ರೋತ್ರಿಯರುಂ ಕ್ಷತ್ರಿಯರುಂ ಪೞಿಗುಟ್ಟಿ ಪಶುಯಾಗಂಗೆಯ್ದೀಲೋಕದೊಳ್ ಪಾತ್ರೀಭೂತರುಂ ಪವಿತ್ರಗೋತ್ರರುಮಾಗಿ ಪರಲೋಕದೊಳ್ [1]ಪಾಕಶಾಸನಸಮಾನಭೋಗಿಗಳಪ್ಪರೆಂದು[1] ಈ ಲೋಕಮೆಲ್ಲಮದನೇ ಪ್ರಮಾಣಮಂ ಮಾಡಿ [2]ನುಡಿದು[2] ಪರಮಾರ್ಥಮಂ ಕಂಡುಮಂತೆ ನಡೆದಪರೆಂತೆನೆ—ಮತ್ತಂ ಸಂಜೀವಕನಿಂತೆಂದಂ:—

ನೀವೆಂದಂತೆ ಬ್ರಾಹ್ಮಣರುಂ ಕ್ಷತ್ರಿಯರುಂ [3]ವೇದ[3] ವಿಹಿತಕರ್ಮಾನುಷ್ಠಾನತತ್ಪರರಪ್ಪುದಱಿಂ ಯಾಗಾತಿಥಿಪಿತೃ[4]ದೇವತಾನಿಮಿತ್ತಂ ವಿಧಿ[4]ಪೂರ್ವಕಂ ಪ್ರಾಣಿವಧೆಗೆಯ್ವರಲ್ಲದೆ [5]ವೃಥಾವಧೆಗೆಯ್ವರಿಲ್ಲ[5]. ಅವರ್ಗಮಾಕರ್ಮಂ ಪುಣ್ಯಫಲಮನೀವುದೊಂದುಂ ಸಂದೆಯಮಿಲ್ಲ. ಈಯಂದಮಲ್ಲದೆ ಪ್ರಾಣಿಗಳಂ ಕೊಂದೊಡಂ ತಿಂದೊಡಂ ಮಹಾಪಾತಕಗತಿಯನೆಯ್ದುವರದೆಂತೆನೆ:—

ಶ್ಲೋ|| "ಯಾವನ್ತಿ ಪಶುರೋಮಾಣಿ ತಾವದ್ಗತ್ವಾ ಹಿ ಮಾರಣಮ್|
ವೃಥಾ ಪಶುತ್ವಮಾಪ್ನೋತಿ ನರಕಂ ಚೈವ ಗಚ್ಛತಿ||" ೩೧

[ಟೀಕು—ಪಶುಗಳ ಮೆಯ್ಯೊಳೆನಿತು ರೋಮಮುಂಟನಿತು ಬಾರಿ ತಾಂ ಕೊಲಿಸಿಕೊಂಬಂ ವೃಥಾ ಪಶುವಧೆಯುಂ ಮಾಡಿದವಂ; ನರಕವನೆಯ್ದುವಂ, ಪಶುತ್ವವನೆಯ್ದುವಂ.]

ಎಂಬುದು ಮಹಾಮನುಮುನಿಗಳ್ ಪೇೞ್ದ ವಾಕ್ಯಮುಂಟದಱಿಂ ವೃಥಾಪ್ರಾಣಿವಧೆಗೆಯ್ಯೆ ನರಕ ತಿರ್ಯಗ್ಯೋನಿಗಳೊಳನೇಕಕಾಲಂ ಬಹುಪ್ರಕಾರ [6]ಜೀವಿ[6]ಗಳಾಗಿ ಪುಟ್ಟುವರೆನೆ—ಮತ್ತಂ ಪಿಂಗಳಕನಿಂತೆಂದಂ:—

---

ಪಾ—1. ಪಾಕಶಾಸನರಪ್ಪರೆಂದು. ಖ || 2. ನುಡಿವರ್, ತಾಮುಮಂತೆ. ಖ ||
3. ದೈವ. ಖ || 4. ಕಾರ್ಯನಿಮಿತ್ತಂವಿಧಿಯಿಂ. ಖ || 5. ವ್ಯರ್ಥಂಮಾಣ್ಬರಲ್ಲ. ಕ ||
6. ಜಾತಿ. ಕ ||

ಓದುಗಳಂ ಬಲ್ಲ ಚದುರರೇನಾನುಮೊಂದನೆಲ್ಲಾತೆಱದಿಂ ಮಾಡ್ಪಿರ ದಱಿಂದೋದುಗಳುಂ ಪ್ರಮಾಣಮಲ್ಲಮೆತ್ತಾನುಂ ನಿನ್ನ ಪೇೞ್ವಂತೋ ದುಗಳುಂ ಪ್ರಮಾಣಮಪ್ಪೊಡೆ,

ಶ್ಲೋ|| "ಯಾವಜ್ಜೀವಂ ಸುಖಂ ಜೀವೇನ್ನಾಸ್ತಿ ಮೃತ್ಯೋರಗೋಚರಃ|
ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂ ಕುತಃ||" ೩೦

[ಟೀಕು—ಎನ್ನೆವರಂ ಜೀವಿಸುವನನ್ನೆವರಂ ಸುಖಂಬಡುವುದು; ಮೃತ್ಯುವಿಂಗೊಳ ಗಾಗದ ಪ್ರಾಣಿಯೇ ಇಲ್ಲಂ; ಬೂದಿಯಾದ ದೇಹಂ ಮರಳಿ ಪುಟ್ಟುವುದೇ ಇಲ್ಲಂ.]

ಎಂಬುದಿದು ಬೃಹಸ್ಪತಿಯ ಮತಂ. ಇದು ಪ್ರತ್ಯಕ್ಷಾನುಭವಸಿದ್ಧಮ ದಱಿಂದಿದುವೆ ಪ್ರಮಾಣಂ. [1]ಬೆಂದ ಬೀಜಂ ಪುಟ್ಟದಂತೆ[1] ಭಸ್ಮಾಂತರಿತ ದೇಹಂ ನಿಶ್ಚಯಂ ಪುಟ್ಟುವದಿಲ್ಲ. ಪರಲೋಕಮಂ ಕಂಡವರಿಲ್ಲ. ಅದು ಕಾರಣದಿಂದಾವ ಪ್ರಾಣಿಯುಂ ತನಗೆ [2]ತಾಂ ತನಗೆ ಪ್ರಾಣಮುಳ್ಳನ್ನೆಗಂ ಸುಖಮಂ[2] ನೆಗೞ್ವುದೆನೆ ಮತ್ತಂ ಸಂಜೀವಕನಿಂತೆಂದಂ:—

[3]ದೇವಾ! ನೀವಿಂತಪ್ಪ ಪಸದ್ಧಾಂತಮಂ ಪಿಡಿದು ನುಡಿದು ಕಿಡಬೇ ಡಿಮದೆಂತೆನೆ[3]:—

ಶ್ಲೋ|| "ಸಂದಿಗ್ಧೇಪಿ ಪರೇ ಲೋಕೇ ತ್ಯಾಜ್ಯಮೇವಾಶುಭಂ ಬುಧೈಃ|
ಯದಿ ನಾಸ್ತಿ ತತಃ ಕಿಂ ಸ್ಯಾದಸ್ತಿ ಚೇನ್ನಾಸ್ತಿಕೋ ಹತಃ||" ೩೩

ಪಾ—1. ಹುರಿದು ಬಿತ್ತಿದ ಬೀಜಂ ಪುಟ್ಟದ ಹಾಂಗೆ. ಖ ||
2. ತನಗೆಂತುಸುಖಮಪ್ಪುದಂತೆ. ಖ ||
3. ದೇವಾ! ನಿಮ್ಮ ಪೇೞ್ವದೀಗಳೀಲೋಕಾಯತಮತವೇ ಪ್ರಮಾಣಾಂತಮಪ್ಪೊಡೆ ಅದು ಪ್ರ ಮಾಣವಾಗಲರಿಯದದೆಂತೆನೆ ಮತ್ತಂಪ್ರಮಾಣಾಂತರವಾದಿಗಳ್ ಪೇೞ್ದಭಿಪ್ರಾಯಂಗಳೊಳ ದಪ್ಪುದಱಿಂ ತನಗೆಂತು ಸುಖತೆಯಂತೆ ನೆಗೞ್ವುದೆಂತುಂ ಸೌಖ್ಯಮಲ್ಲದಂತೆನೆ:—ಪ್ರಾಣಿಗ ಳ್ಗೆ ಸುಖಮಂ ಮಾಡ್ಪವಂಗೆ ಎತ್ತ ಬಾೞ್ದೊಡಂ ಹಂಸತೂಳವಾಸೇಂಬರಲೋಕದೊಳ್ ಸಮ ಸ್ತ ಜನಂಗಳುಂ ಸುಖಾನುರಾಗದೊಳ್ ಪೊಗೞ್ವಮಹಾಖ್ಯಾತಿಯಕ್ಕುಂ. ಅಖ್ಯಾತಿಮೊದ ಲಾಗಿ ಪರಲೋಕದೊಳಿಂದ್ರಚಂದ್ರಾದಿತ್ಯಾದ್ಯನೇಕಭೋಗಸುಖಮಂ ಪಡೆಗುಮೆಂಬ ಸಿದ್ಧಾಂ ತಮಂ ಪಿಡಿದು ನುಡಿವ ನುಡಿ ಕೆಟ್ಟ ಬಟ್ಟೆಯಕ್ಕುಮದೆಂತೆನೆ:— ಕ || ಗ ||

[ಟೀಕು- ಪರಲೋಕವೆತ್ತಲಾನುವಾದಪ್ಪುದೋ ಆಗದೋ ಎಂಬ ಸಂದೆಯವುಳ್ಳೊಡಂ ಬುದ್ಧಿವಂತರಪ್ಪರ್ ಪಾಪವಂ ಮಾಡಲಾಗದು; ಪರಲೋಕವೆತ್ತಲಾನುವಿಲ್ಲದಿದೊರ್ಡಂ ಅರ್ಥವರ್ಗವು ಬಿಟ್ಟುದಱಿಂದಾವಹಾನಿಯುಪ್ಪುದು? ಏಗೆಯುದ್ದಂ ಪರಲೋಕವಿಲ್ಲೆಂಬ ನಾಸ್ತಿಕಂ ಕಿಡುವಂ] [೪

ಎಂಬುದು [1]ತತ್ವವಾಕ್ಯಮುಂ[1] ಟಪ್ಪುದಱಿಂ ಪರಮಿಲ್ಲೆಂಬವನಾಅಪಸಿದ್ಧಾಂತಮನೆ ಪ್ರಮಾಣಮಂ ಮಾಡಿ ಕೇವಲಪಾಪಪರನಪ್ಪಂ, ಪರ[2]ಮುಂಟಾದ ಪಕ್ಷಂ[2] ನಿಷ್ಫಲಂ ಕಿಡುಗುಂ; ಧರ್ಮಪರನಪ್ಪಂ ಪರಮುಳ್ಳೊಡಮಿಲ್ಲದೊಡಂ ಕಿಡಂ. ಅದಲ್ಲದೆಯುಂ,

ವರರುಚಿಭಟ್ಟಂ ಪುಣ್ಯಾರ್ಥಂ ತೀರ್ಥಯಾತ್ರಾನಿಮಿತ್ತಂ ದಂಡಕಾರಣ್ಯದೊಳ್ ಬರುತ್ತಿರಲಲ್ಲೊರ್ವಂ ಬ್ರಹ್ಮರಾಕ್ಷಸಂ ಕಂಡು ತಿನಲೆಂದು ಬಗೆದು, ಕೈಯಂ ಪಿಡಿದು, [೧೧

ವಾಕ್ಯಂ|| "ಕಃ ಪನ್ಥಾಃ ಕಾ ವಾರ್ತಾ ಕೋ ಮೋದತೇ ಕಸ್ಸೇವ್ಯತೇ||" ೩೪

ಎಂಬುದುಂ; ಭಟ್ಟನಾತನ[3]ಚೇಷ್ಟಾಭಾಷೆಗಳಿಂದಾತನಭಿ[3]ಪ್ರಾಯಮನಱಿದು ಇಂತೆಂದಂ:—

ಶ್ಲೋ|| "ಪ್ರಾಣಾಘಾತಾನ್ನಿವೃತ್ತಿಃ ಪರಧನಹರಣೇ ಸಂಯಮಃ ಸತ್ಯವಾಕ್ಯಂ|
ಕಾಲೇ ಶಕ್ತ್ಯಾ ಪ್ರದಾನಂ ಯುವತಿಜನಕಥಾಮೂಕಭಾವಃ ಪರೇಷಾಂ||
ತೃಷ್ಣಾಸ್ರೋತೋವಿಭಂಗೋ ಗುರುಷು ಚ ವಿನಯಃ ಸರ್ವಭೂತಾನುಕಂಪಾ|
ಸಾಮಾನ್ಯಂ ಸರ್ವಶಾಸ್ತ್ರೇಷ್ವನುಪಹತವಿಧಿಃ ಶ್ರೇಯಸಾಮೇಷ ಪನ್ಥಾಃ||

[ಟೀಕು—ಪ್ರಾಣಿಗಳಂ ಕೊಲಲಾಗದು; ಲೋಗರ ವಸ್ತುವಂ ಕೊಳಲಾಗದು; ಸತ್ಯವನೇ ನುಡಿವುದು; ಕಾಲೋಚಿತದಲ್ಲಿ ತನ್ನ ಶಕ್ತಿಯನಱಿದು ದಾನವಂ ಮಾಳ್ಪುದು; ಪರಸ್ತ್ರೀಯರ ಮಾತನಾಡುವಲ್ಲಿ ಮೂಕನಾಗಿರ್ಪುದು; ತೃಷ್ಣೆಯೆಂಬ ತೊಱೆಯಂ ಕಟ್ಟುವುದು; ಗುರುಗಳಲ್ಲಿ ವಿನಯಂಗೆಯ್ವುದು; ಸರ್ವಪ್ರಾಣಿಗಳಲ್ಲಿ ದಯೆಯನೆ ಮಾ

ಟಾ—1. ಯುಕ್ತಿಯುಂ. ಕ ||
2. ಮುಂಟಾನೊಡಂ. ಖ || 3. ಭೀಷ್ಟಚೇಷ್ಟಾಭಾಷೆಗಳಿಂದಾತನಭೀಷ್ಟಾಭಿ. ಖ ||

ಲ್ಲಿಪ್ಪುದು—[1]ಇವೆಲ್ಲವೆಲ್ಲಾ ಶಾಸ್ತ್ರಂಗಳಲ್ಲಿ ಸಾಧಾರಣಂ; ಕಿಡದ ವಿಧಾನವುಮನುಳ್ಳ ಇವು ಲೇಸುಗಳ್ಗೆ ಬಟ್ಟೆಯೆನಿಸುವುವು. [1]]

ಶ್ಲೋ|| "ಅಸ್ಮಿನ್ಮಹತ್ಯಂಡಕಟಾಹಮಧ್ಯೇ ಸೂರ್ಯಾಗ್ನಿನಾ ರಾತ್ರಿದಿನೇಂಧನೇನ|
ಮಾಸರ್ತುದರ್ವೀಪರಿಘಟ್ಟನೇನ ಭೂತಾನಿ ಕಾಲಃ ಪಚತೀತಿ ವಾರ್ತಾ||" ೩೬

[ಟೀಕು—ಬ್ರಹ್ಮಾಂಡವೆಂಬ ಕೊಪ್ಪರಿಕೆಯ ಮಧ್ಯದಲ್ಲಿ ಸೂರ್ಯನೆಂಬಗ್ನಿಯಿಂ ಪಗಲಿರುಳೆಂಬ ಅಡುಗಬ್ಬಗಳಿಂ ಮಾಸಋತುಗಳೆಂಬ ಸಟ್ಟುಗದಿಂ ತೊಳಸುತ್ತುಂ ಭೂತಂಗಳಂ ಜವನಡುತಿರ್ದನಿಂತೆಂಬುದೆ ವಾರ್ತೆ.] [೭

ಶ್ಲೋ|| "ಪಂಚಮೇಽಹನಿ ಷಷ್ಠೇ ವಾ ಶಾಕಂ ಪಚತಿ ಯೋ ಗೃಹೇ|
ಅನೃಣೋಽಪ್ಯಪ್ರವಾಸೀ ಚ ಸ ವಾರಿಚರ ಮೋದತೇ||" ೩೭

[ಟೀಕು—ಐದು ದಿನಕಾದೊಡಮಾರು ದಿನಕಾದೊಡಂ ತನ್ನ ಮನೆಯಲ್ಲಿ ಮಾಧುರಮನಾದೊಡಮಟ್ಟು ಸಾಲವಿಲ್ಲದೆ ಪರರಾಳಲ್ಲದುಂಡಿಹುದುಚಿತಮೆಲೆ ರಾತ್ರಿಂಚರ]

ಶ್ಲೋ|| "ಏಕಾ [2]ಭಾರ್ಯಾ[2] ತ್ರಯಃ ಪುತ್ರಾ ದ್ವೌ ಹಲೌ ದಶ ಧೇನವಃ|
ಮಧ್ಯರಾಷ್ಟ್ರಂ ತು ಸುಕ್ಷೇತ್ರಮಸ್ತಿ ಚೇದತಿ[3] ಸೇವ್ಯತೇ[3]||" ೩೮

[ಟೀಕು—ಒಬ್ಬಳೇ ಹೆಂಡತಿ; ಮೂವರ್ ಪುತ್ರರ್; ಎರಡು ಬೇಸಾಯಂ; ಹತ್ತು ಹಸುಕರುಗಳ್; ಮಧ್ಯದೇಶದೊಳ್ ಸುಕ್ಷೇತ್ರಮಪ್ಪ ತಾಣದೊಳಿರ್ಪುದೇ ಸೇವ್ಯಂ] [೧೫

ಎಂದಿಂತು ವರರುಚಿಭಟ್ಟಂ ನಿರತಿಶಯಶ್ರೇಯಸ್ಕರಮಪ್ಪ ಧರ್ಮಮಂ ಪೇಳ್ವಲ್ಲಿ ಪ್ರಾಣಿರಕ್ಷಣಮೆ ಮುಖ್ಯಧರ್ಮಮೆಂದು ಪೇಳ್ದಂ. ಅದಲ್ಲದೆಯುಂ, [೧೮

ವ್ಯಾಸಭಟ್ಟಂ ಮಹಾಭಾರತಕಥಾಪ್ರಪಂಚಮನನಾಗತಂ ಕಂಡದಂ ಗ್ರಂಥವಿಸ್ತರಂಮಾಡಲ್ಬಗೆದು, ಮುನ್ನಂ ವಾಲ್ಮೀಕಿಮುನಿ ರಾಮಾಯಣಮನನಾಗತಂ ಕಂಡದಂ ಗ್ರಂಥವಿಸ್ತರಂಗೆಯ್ದಲ್ಲಿ ಇನ್ನೆನ್ನಂತಪ್ಪನಾಗತಕರ್ತೃಗಳುಮಾಗದಿರ್ಕೆಂದಾಜ್ಞೆಯಂ ಮಾಡಿದ ಕಾರಣಂ ವ್ಯಾಸಮುನಿ ವಾಲ್ಮೀಕಿಗಳಲ್ಲಿಗೆ ಪೋಗಿ ವಿನಯವಿನಮಿತೋತ್ತಮಾಂಗನಾಗಿ ಕೈಗ

ಪಾ—1. ಎಲ್ಲಾ ಶಾಸ್ತ್ರಗಳಂ ಸರಿಯಾಗಿ ಕಾಣ್ಬುದು; ತನಗೆ ಲೇಸನೀಸುವೊಡೆ ಮುಕ್ತಿಗೆ ದುವೆ ಪಂಥ. ಖ|| 2. ಜಾಯಾ. ಖ|| 3. ಶೇರತೇ. ಖ||

ಳಂ ಮುಗಿದಿಂತೆಂದಂ:—ನಿಮ್ಮಡಿ, ಧರ್ಮಾರ್ಥಕಾಮಮೋಕ್ಷಸಾಧನೋಪಾಯಸಾಧನಮಪ್ಪುದೊಂದು ಕಥೆಯಂ ಕಂಡೆಂ. ಅದಂ ಕಬ್ಬಮಂ ಮಾಡಿದಪೆನನುಗ್ರಹಂಗೆಯ್ಯಿಮೆನೆ—ಮುನಿ ಮನದೊಳಗವಧರಿಸಿ ಬೞಿಕ್ಕಿಂತೆಂದಂ:—ಅಂತಪ್ಪೊಡೆ ಕೇವಲಂ ಧರ್ಮಮಾವುದದಂ ಪೇೞಿಮೆನೆ—ವ್ಯಾಸದೇವನವರ್ಗಿಂತೆಂದಂ:—

ಶ್ಲೋ || "ಶ್ರೂಯತಾಂ ಧರ್ಮಸರ್ವಸ್ವಂ ಶ್ರುತ್ವಾ ಚೈವಾವಧಾರ್ಯತಾಂ |
ಆತ್ಮನಃ ಪ್ರತಿಕೂಲಾನಿ ಪರೇಷಾಂ ನ ಸಮಾಚರೇತ್ ||" ೨೯

[ಟೀಕು— ಎಲ್ಲಾ ಧರ್ಮದ ತಿರುಳಂ ಕೇಳ್ವುದು; ಕೇಳ್ದು ತೆಱನಂ ಲೇಸಾಗವಧರಿಪುದು; ತನಗೆ ಪ್ರತಿಕೂಲಮಪ್ಪುದಂ ಪೆಱರ್ಗೆ ಮಾಡಲಾಗದು]

ಎಂದಿಂತು ಸಕಲಧರ್ಮದ ಸಾರಮಂ ಸಂಕ್ಷೇಪದಿಂ ವ್ಯಾಸಮುನಿ ಪೇಳ್ದಿಸದುಕಾರಣದಿಂ,

ತನಗೆಂದುಂ ಕೇಡಿಲ್ಲದು |
ದನೆ ಬಯಸುವ ಮನುಜನಾವ ಜೀವಮುಮಂ ತ ||
ನ್ನನೆ ಬಗೆವ ತೆಱದೆ ಬಗೆವುದು |
ಮುನಿವೇದವ್ಯಾಸಮತಮಿದತಿಶಯಧರ್ಮಂ || 117

ಅದಱಿಂ ಪ್ರಾಣಿವಧೆಯೇ ಪೊಲ್ಲದು, ಸಕಲಪ್ರಾಣಿಹಿತಮೇ ಧರ್ಮಮೆಂದನೇಕಶ್ರುತದೃಷ್ಟಾನುಮಾನಂಗಳಿಂ ಸಂಜೀವಕಂ [1]ತಿಳಿಪೆ; ಪಿಂಗಳಕಂ[1] ಮೃದುಹೃದಯನಾಗಿ ಮತ್ತಮಿಂತೆಂದಂ:—

ಎಲೆ ಪರಮಮಿತ್ರ ಪುಂಗವ |
ವಿಲಸನ್ಮತಿ ನಿನ್ನ ಪೇಳ್ದ ಧರ್ಮಶ್ರವಣಂ ||
ಪಲತೆಱದಿನೆನ್ನ ಮನದೊಳ್ |
ನೆಲಸಿದುದಿನ್ನೊಂದು ಚಿಂತೆ ಮನದೊಳಗೆನ್ನಾ || 118

ಪಾ— 1. ತಿಳಿಪೆ ಸಾಭಿಪ್ರಾಯವಾಗಿ ಪೇಳ್ದ ಸಿದ್ಧಾಂತವಂ ಕಠಿನಹೃದಯನಪ್ಪ ಮದಮಾತಂಗ ಪ್ರಿಯನಪ್ಪ ಪಿಂಗಳಕಂ ಕೇಳ್ದು. ಕ ||

ಅದಾವುದೆನೆ:—"[1]ಸ್ವಯಂಚತುಷ್ಪದಾದಿಸೇವ್ಯಃ[1]" ಎಂಬ ಅಭಿಧಾನಮಾತ್ರಮಲ್ಲದೆ ನೀನೆಂದಂತೆ ನೆಗೞ್ದು ಪುಲ್ಲಂ ಮೇಯಲಱಿಯೆಂ, ಪಿಶಿತಾಹಾರಮಿಲ್ಲದೆ ಶರೀರಂ ನಿಲ್ಲದೇಗೆಯ್ವೆನೆನೆ; ಸಂಜೀವಕನಿಂತೆಂದಂ:—ಆದೊಡಂ ನಿಮಗೆ ಹರ್ಷಮಾ[2]ದಾಗಳ್[2]ನೇಕಮೃಗಗಣಮನೆಯ್ದಿ ಕೊಲ್ಲದೆ ಕ್ಷುಧಾನಿವಾರಣಾರ್ಥಮಾಗಿ ನಿಮಗೆನಿತುವೇೞ್ಕುಮನಿತನೆ ಕೈಕೊಂಡು ನಿಶ್ಚಿಂತಮಿರ್ಪುದೆನಲ್;—ಅಂತೆ ಗೆಯ್ವೆನೆಂದು ಕ್ರೂರಕರ್ಮಮಂ ಪತ್ತುವಿಟ್ಟು ಶುದ್ಧಚಿತ್ತನಾಗಿ ಸ್ವೋದರಪೂರಣಮಾತ್ರಕ್ಕೆ ತಕ್ಕನಿತನೇ ಸ್ವೀಕರಿಸಿ ನಿಶ್ಚಿಂತಮಿರ್ಪುದುಂ; ಕರಟಕದವನಕಪ್ರಮುಖನಿಖಿಲಕ್ರೂರಮೃಗಂಗಳೆಲ್ಲಂ ಪಲವುದಿವಸಮಾಹಾರಂಬಡೆಯದೆ ಮುಲುಮಲನೆ ಮಱುಗಿ ಸಾವನಿತವಸ್ಥೆ ಪುಟ್ಟೆ ಸೈರಿಸಲಾಱದೆ ಪಿಂಗಳಕನಲ್ಲಿಗೆ ಬಂದು ಪೊಡೆಮಟ್ಟುಮವಱೊಳಗೊಂದು ಜಾಂಬವಂತನೆಂಬ ಪುರಾಣಜಂಬುಕನಿಂತೆಂದುದು:—

ನಿಮ್ಮಡಿ ಬಿನ್ನಪಮಂ ಕೇ |
ಳ್ದಿಮ್ಮಂ ನೀಂ ಪೊರೆದು ಪಲವು ಕಾಲಮನೀಗಳ್ ||
ಕೆಮ್ಮನೆ ಪರಿಹರಿಸುವುದುಂ | [೧೫
ನಿಮ್ಮೊಡಲನೆ ಪೊರೆ[3]ದು ಬಾೞ್ವುದುಂ ಗುಣದೊಳಗೇ[3] ||119

ಅಂತುಮಲ್ಲದೆಲ್ಲಿಯಾನುಂ ಬಂದ[4]ಧೂರ್ತನ[4]ಪ್ಪೇೞ್ತಿನ ಬುದ್ಧಿಯಂ ಕೈಕೊಂಡು ಅನ್ವಯಾಗತರುಂ ಹಿತರುಮಪ್ಪ ಪರಿಗ್ರಹಕ್ಕೆ ನೀಂ ವಿರಕ್ತನಾಗಿರ್ದಂದು,

ಶ್ಲೋ|| "[5]ರಕ್ತಾದ್ವೃತ್ತಿಂ ಸಮಾಪದ್ಯ ಹ್ಯರಕ್ತಂ ತು ಪರಿತ್ಯಜೇತ್[5] ||" ೪೦

ಪಾ—1. ಸ್ವಯಂಚತುಃಪದಾದಿಸ್ವಸವಃ ಖ ||  2. ದೊಡ. ಕ ||
3. ಪುತಿರ್ಪುದುಂ ಗುಣಮಲ್ತೇ. ಖ ||  4. ಕಲ್ಯಾಣಮಿತ್ರನುಂ ಆತನುಮಪ್ಪೆ. ಗ ||
ಪಾ—5. ವಾಕ್ಯಂ "ರಕ್ತಾದ್ವೃತ್ತಿಂಸಮಾಹಿತಃ ಅರಕ್ತಂಚಪರಿತ್ಯಜೇತ್" ಖ ||, ರಕ್ತಾಗ್ನಿವೃತ್ತಿಮಾಪದ್ಯನರಕ್ತಂತುಪಂತ್ಯಜೇತ್. ಗ ||

ಎಂಬ ಯುಕ್ತಿಯುಂಟಪ್ಪುದಱಿಂ, ನೀನಿಂತು ವಿರಕ್ತನಾದುದನಱಿದಿಂ ಬೞಿಕ್ಕೆ ಪರಿಗ್ರಹಂ ಪೆಱನೊರ್ವಾಳ್ದನನಱಸಿ ಪೋಕುಮಂತಾದಂದು,

ಶ್ಲೋ || “ಯೋ ಧ್ರುವಾಣಿ ಪರಿತ್ಯಜ್ಯಾಧ್ರುವಾಣಿ ಪರಿಸೇವತೇ |

ತಸ್ಯ ಧ್ರುವಾಣಿ ನಶ್ಯಂತಿ ಅಧ್ರುವಂ ನಷ್ಟವೇವ ಚ ||” ೪೧

[ಟೀಕು—ಆವನೊರ್ವಂ ಸ್ಥಿರನಾಗಿರ್ಪುದಂ ಬಿಟ್ಟು ಅಸ್ಥಿರವಾದಪ್ಪುವಂ ಸೇವಿಸುತ್ತಿರ್ದಪಂ ಆತಂಗೆ ಸ್ಥಿರವುಪ್ಪುವುಂ ಕಿಡುಗುಂ; ಅಸ್ಥಿರವುಪ್ಪುದೆಂತುಂ ಕೆಟ್ಟುದೇ.] [೬

ಎಂಬ ನೀತಿವಾಕ್ಯಮುಂಟಪ್ಪುದಱಿಂ, ಮುಗಿಲ ನೀರಂ ನಚ್ಚಿ ಹೊಳೆಯ ನೀರಂ ತುಳುಂಕಿದ ಕೋಡಗದಂದಂ ನಿನಗಕ್ಕುಮದಱಿಂ ನಿನ್ನ ಸಂಜೀವಕನ ಬುದ್ಧಿಯುಮನೆನ್ನ ಬುದ್ಧಿಯುಮಂ ವಿಚಾರಿಸಿ ಕೊಳ್ವುದೆಂದು ಪಲತೆಱದಿಂ ನುಡಿದ ಪುರಾಣಜಂಬುಕನ ಮಾತಂ ಕೇಳ್ದು ಪಿಂಗಳಕನೀಪಾಪಿಗುತ್ತರಂಗೊಟ್ಟೊಡೆ ಪಾಪೋಪದೇಶಂಗೆಯ್ದಪನದಱಿಂ “ಮೌನಂ ಸರ್ವಾರ್ಥಸಾಧನಂ” ಎಂಬುದುಂಟೆಂದುಸಿರದಿರ್ಪುದುಂ; ಅಂತಿರ್ದ ಪಿಂಗಳಕನಂ ಕಂಡು ಮೃಗಂಗಳೆಲ್ಲಂ ತಮ್ಮ ತಮ್ಮಿಚ್ಚೆಯೊಳ್ ಪರೆದು ಪೋದುವು. ಅಲ್ಲಿ ದವನಕಂ ಕರಟಕನ ಮೊಗಮಂ ನೋಡಿ, [೧೫

ಎನ್ನ ದುರಾಗ್ರಹದಿಂದವ |
ದನ್ನಯಮೇನಾನುಮಕ್ಕುಮೆಂಬುದನಱಿದಂ ||
ದೆನ್ನಂ ನೀಂ ಬಾರಿಸಿದುದು |
ಸನ್ನಿದಮಾಯ್ತಿನ್ನಿದರ್ಕೆ ಪೇೞೀಗೆಯ್ವೆಂ || 120
ಮುನ್ನಂ ನೀಂ ಬಾರಿಸೆಯುಮು | [೨೦
ದನ್ನಯಮಪ್ಪೆನ್ನ ಮಾಡಿದಱಿಗಜ್ಜಂ ಪೇ ||

ಪಾ—1. ತನ. ಗ ||

ಬೀನ್ನೆಂತು ಮಾಡಲಕ್ಕುಮಿ ।

ದನ್ನಯದೊಳ್ ಕೂಡುವಂತನಾಗತವೇದೀ ॥ 121 ಎಂಬುದುಂ;

ಕರಟಕನಿಂತೆಂದಂ:—ನೀನಾಗಿಯುಮ[1] ನಾಗತ[1] ಕಾರ್ಯಸಿದ್ಧಿ[2] ಅತ್ಯದ್ಭುತಬುದ್ಧಿ[2] ನಿನಗುಳ್ಳನಿತೆನಗಿಲ್ಲ, ಅದರ್ಕೆ ತಕ್ಕುದಂ ನೀನೆಬಲ್ಲೆಯೆಂಬುದುಂ; ದವನಕನಿಂತೆಂದಂ:— [೫

ಕರಟಕ ಕೇಳ್ ಕರಟೀಘುಟ ।

ಕರಟಕನೆನೆ[3] ನೆಗಲ್ದಿ[3] ಪಂಚವದನಂಗಂ ಶಾ ॥

ಕ್ವರಪರಿಬೃಢನೆನಿಪಂಗಂ ।

ವಿರಕ್ತಿಯಪ್ಪಂತು ಮಾಳ್ಪುದಿಂತಿದು ಕಜ್ಜಂ ॥ 122 ಎಂದು;

ಮತ್ತಮಿಂತೆಂದಂ:— ನೀನೆಂದಂತೀಕಜ್ಜಮೆನ್ನಿಂದಮೆ ಸಾಧ್ಯಮಕ್ಕುಮಾದೊಡಿದೆಲ್ಲಂ, [೧೧

ವಾಕ್ಯ ॥ "ತ್ರಯೋನರ್ಥಾಃ ಸ್ವಯಂಕೃತಾಃ ॥"

ಎಂದು ದೇವಶರ್ಮಂ ಪೇಳ್ದ ಕಥೆಯೆಮಗಾದುದೆಂಬುದುಂ; ಕರಟಕನದೆಂತೆನೆ—ದವನಕಂ ಪೇಳ್ಗುಂ: —

## ೬. ದೇವಶರ್ಮನ ಕಥೆ.

ಆಭೀಳಮೆಂಬಜನಪದಮುಂಟು, ಅಲ್ಲಿ

ಅಂಚಿತದೇವತಾಭವನಸಂಕುಳದಿಂ ಗಣಿಕಾನಿವಾಸದಿಂ ।

ಕಾಂಚನಕೂಟಕೋಟಿಗಳನುತ್ತಮಧಾರ್ಮಿಕರಿಂ ಮುನೀಂದ್ರರಿಂ॥

ಕ್ರೌಂಚರಥಾಂಗರಂಜಿತಸರೋರುಹಷಂಡದಿನಾದಮೊಪ್ಪುಗುಂ । [೧೯

ಕ್ರೌಂಚಪುರಂ ಪುರಂದರಪುರಪ್ರತಿಮಂ ಧರೆಯೊಳ್ ನಿರಂತರಂ ॥ 123

ವ॥ ಆಪುರದೊಳ್ ದೇವಶರ್ಮನೆಂಬ ಗೊರವನುಗ್ರೋಗ್ರತಪೋನುಷ್ಠಾನನಿಷ್ಠಿತಚಿತ್ತನಾಗಿ ಪಲಕಾಲಮಿರ್ಪಂ. ಆತಂಗೆ ಧಾರ್ಮಿಕರಪ್ಪ

ಪಾ—1. ನಾರತ. ಖ ॥ 2. ಯಪ್ಪಂತತ್ಯುತ್ಪನ್ನಮತಿ. ಖ ॥ 3. ಪೇಳ್ದ. ಕ ॥

[1]ಗೃಜನ್ಮ[1]ರೆಲ್ಲಂ ಸೋಮಸೂರ್ಯಗ್ರಹಣಾದಿ[2]ಪುಣ್ಯ[2]ತಿಥಿಗಳೊಳ್ ಭಕ್ತಿಪೂರ್ವಕಂ ಸುವರ್ಣದಾನಮಂ ಕುಡೆ, ಪಲವು ಕಾಲಕ್ಕೆ ಸಹಸ್ರಸಂಖ್ಯೆಯಾದ ಪೊನ್ನಂ ದೇವಶರ್ಮಂ ಸರ್ವಪ್ರಯತ್ನದಿಂ ತಾಯ್ ಮಗನಂ, ಉತ್ತಮಸತ್ವಸಂಪನ್ನಂ ಶರಣಾಗತನಂ, ಧಾರ್ಮಿಕಂ ಧರ್ಮಮಂ, ಯಶೋವೃತ್ತಿ ಯಶಮಂ, ಸತ್ಪುರುಷನಾಶ್ರಿತರಂ, ನಿಸರ್ಗಭೀರು ಪ್ರಾಣಂಗಳಂ, ಶೂರಂ ವಿಕ್ರಾಂತಮಂ, ಮಹಾಸತಿ ಪತಿವ್ರತಾಗುಣಮಂ, ಲುಬ್ಧಂ ಧನಮಂ, ಮನಸ್ವಿ ಮಾನಮಂ ರಕ್ಷಿಸುವವೊಲ್ ರಕ್ಷಿಸುತ್ತಿರ್ಪುದುಮಾ[3]ಪುರ[3]ದೊಳ್ ದ್ಯೂತವ್ಯಸನ[4]ವಿಕಳ[4]ಭೂತಿಯಾಷಾಢಭೂತಿಯೆಂಬ ಧೂರ್ತನೊರ್ವನಿರ್ಪಂ. ಆತಂ ತನಗೇನುಮಿಲ್ಲದೆ ಪರಿಭ್ರಮಿಸುತ್ತಿರ್ದು ದೇವಶರ್ಮಂಗೇನಾನುಂ ಧನಮುಂಟೆಂಬುದಂ ಕೇಳ್ದು ತಾನುಮಱಿವನಾಗಿ ದೇವಶರ್ಮನಲ್ಲಿಗೆ ಪೋಗಿ ಸಾಷ್ಟಾಂಗಪ್ರಣತನಾಗಿ—[5]ನಿಮ್ಮಡಿ[5], ವಿದ್ಯಾರ್ಥಿಯಾಗಿ ಬಂದೆನೆನ್ನಂ ಕೈಕೊಳ್ವುದೆನೆ; ತಪಸ್ವಿ ಕರಮೊಳ್ಳಿತ್ತೆಂದು ಕೈಕೊಂಡಿರೆ; ಪರಮಭಕ್ತಿಯಿಂ[6]ದಾಷಾಢಭೂತಿ ಬೆಸಗೆಯ್ಯುತ್ತಿರೆ[6]; ಪಲವು ಕಾಲಕ್ಕೆ ತೀರ್ಥಯಾತ್ರಾಸಕ್ತಚಿತ್ತನಾಗಿ ದೇವಶರ್ಮಂ ತನಗೆ ತಕ್ಕನಿತು ದ್ರವ್ಯಮಂ ದಾನಂಗೆಯ್ಯಲ್ವೇೞ್ಕುಮೆಂದು ದೇವರ ಪೇೞಿಗೆಯೊಳಿಕ್ಕಿ ಬೞಿಕ್ಕ ತಾನುಮಾಷಾಢಭೂತಿ[7]ಯುಂ[7] ಕ್ರೌಂಚಪುರಮಂ ಪೊಱಮಟ್ಟು ಕಿಱಿದಂತರಮಂ ಪೋಗಿ, [೧೭

ಅಂಚೆಗಳೋಳಿಯಿಂ ಝಷನಿಕಾಯದಿನುತ್ತಮಸಾರಸಂಗಳಿಂ ।
ಕ್ರೌಂಚಕುಳಂಗಳಿಂ ಬಕಕದಂಬಕದಿಂ ವರಚಕ್ರಚಕ್ರದಿಂ ॥

---

ಪಾ— 1. ಮಹೀಶ. ಕ ‖ ಖ ‖ 2. ಮಹಾ. ಘ ‖ ಗ ‖ 3. ಸಮಯ. ಕ ‖
4. ವ್ಯಸನಕಳಾದಿ. ಕ ‖ ಗ ‖ 5. ನಿಮ್ಮಡಿಗೆ. ಕ ‖ ಗ ‖
6. ಪರಮಭಕ್ತಿಯಿಂ ಶಿಶ್ರೂಷೆಗೆಯ್ಯುತ್ತಿರೆ. ಕ ‖ 7. ಸಹವಾಗಿ. ಕ ‖

ಚಂಚದಳಿವ್ರಜಾವೃತಸರೋಜನವೋತ್ಪಲಕೈರವಂಗಳಿಂ ।
ದಂಚಿತವಾದ ಪದ್ಮವನಮಂ ಮುನಿ ಕಂಡನುದಾರತೀರಮಂ ॥124

ಅಂತು ಕಂಡಾಸರೋವರದೊಳ್ ದೇವಶರ್ಮಂ ದೇವಪೂಜೆಯಂ ಮಾಡಿ ಪೋಪವೆಂದಾಷಾಢಭೂತಿಯಂ ಮಾತ್ರಾ[1]ಭಾಂಡಕ್ಕೆ[1] ಕಾಪಿರಿಸಿ ಪಾದಪ್ರಕ್ಷಾಳನಂಗೆಯ್ದು ಭಸ್ಮೋದ್ಧೂಳಿತಗಾತ್ರನಾಗಿ ದೇವತಾಸಮಾರಾಧನೆಗೆ ಕುಳ್ಳಿರ್ದು, [೬

ಹರನಂ ಶಂಕರನಂ ಜಿತತ್ರಿಪುರನಂ ನೇತ್ರಾಗ್ನಿಭಸ್ಮೀಕೃತ ।
ಸ್ಮರನಂ ತುಂಗಹಟಜ್ಜಟಾಭರನನುದ್ಯದ್ಭಕ್ತಿಭಾರಾನತಂ ॥
ವರಗಂಗಾಧರನಂ ಮೃಡಾಣಿವರನಂ ವ್ಯಾಲೋಲಬಾಲೇಂದುಶೇ ।
ಖರನಂತಾಳ್ದಿದನಾತ್ಮಹೃತ್ಕಮಳದೊಳ್ ಯೋಗೀಂದ್ರವೃಂದಾರಕಂ॥125

ಅಂತು ತಾಳ್ದಿ ಪರಮಾತ್ಮಧ್ಯಾನಾಧೀನಮಾನಸನಾಗಿ ತಪೋಧನಂ ಪರಮಾತ್ಮಾವಸ್ಥೆಗೆ ಸಂದುದುಮಂ ಕೆಲದೊಳ್ ಪೆಱರಾರುಮಿಲ್ಲದುದುಮಂ ಕಂಡಾಷಾಢಭೂತಿ ತಾಂ ಛಿದ್ರಾನ್ವೇಷಿಯಪ್ಪುದಱಿಂ ತನಗಿದುವೆ ಪದನೆಂದು ಬಗೆದು,

ಶ್ಲೋ ॥ "ವಿಶ್ವಾಸಪ್ರತಿಪನ್ನಾನಾಂ ವಂಚನಂ ಕಾ ವಿದಗ್ಧತಾ ॥" ೪೦ [೧೫

[ ಟೀಕು—ವಿಶ್ವಾಸಿಸಿದವರೊಳ್ ವಂಚನೆಯಾನೆಸಗುವುದಾವ ಪ್ರೌಢಿಮೆ ? ]

ಎಂಬೀಸುಭಾಷಿತಮಂ [2]ಬಗೆಯದೆ[2] ಆದುರಾತ್ಮನಾಮಹಾತ್ಮನ ಧನಮಂ ಕೊಂಡು ಬ್ರಹ್ಮಹರಣಮಂ ಸುವರ್ಣಹರಣಮಂಗೆಯ್ದಾಪಾತಕಂ ನರಕಗತಿಗೆ[3] ಯ್ದುವ ಧೂರ್ತತನದಿಂ[3] ಕುಟಿಲಮಾರ್ಗಾಂತರ್ಗತನಾಗಿ ಪೋಗೆ, ಕಿಱಿದಾನುಂ ಬೇಗದಿಂ ದೇವಶರ್ಮಂ ದೇವಪೂಜಾವಿಧಾನಮಂ ನಿರ್ವರ್ತಿಸಿ ದೆಸೆದೆಸೆಯುಂ ನೋಡಿ ಕೆಲದೊಳಿರ್ದ ಮಾ

ಪಾ—1. ಭಾಂಡಾರಕ್ಕೆ. ಖ ॥ 2. ಬಗೆಗೆಯ್ಯದೆ. ಕ ॥ 3. ಕ ॥ ಖ ॥ ಗಳಲ್ಲಿಲ್ಲ.

ತ್ರಾಭಾಂಡಿಕೆಯುಮನಾಷಾಢಭೂತಿಯುಮಂ ಕಾಣದೆ ಅರ್ಥನಾಶದಿಂ ವಿಕಳಚಿತ್ತನಾಗಿನಿಸಾನುಂ ಬೇಗದಿಂ ತನ್ನಿಂ ತಾನೆ ಸಂಭಾವಿತಾತ್ಮನುಮಾಗಿ, ಪಲಕಾಲದಿಂ ಪಡೆದರ್ಥಂ ನಿರರ್ಥಂ ಕೆಟ್ಟುದೆಂದು ಚಿಂತಾಕ್ರಾಂತನಾಗಿ, ತನ್ನಿಂ ತಾನೆ ಸಂತೈಸಿಕೊಂಡಿಂತೆಂದಂ:—

ಶ್ಲೋ || "ದಾತವ್ಯಂ ಭೋಕ್ತವ್ಯಂ ಸತಿ ವಿಭವೇ [1]ನೈವ ಸಂಚಯೇದರ್ಥಂ[1] |
ಪಶ್ಯೇಹ ಮಧುಕರಾಣಾಂ ಸಂಚಿತಮರ್ಥಂ ಹರಂತ್ಯನ್ಯೇ ||" ೪೩ [೬

[ಟೀಕು—ವಸುವುಂಟಾದೊಡೆ ಪರಪುರುಷಾರ್ಥಮಂ ಮಾಳ್ಪುದು; ತಾನುಣ್ಬುದು; ಅಲ್ಲದೆ ಸಂಚಿತಮಾಗಿರಿಸಲಾಗದೆಂತೆನೆ:—ಜೇನ ನೊಳಂಗಳ್ ತುಪ್ಪವನಿರಿಸಿದೊಡೆ ಲೋಗರ್ ಕೊಂಡುಪೋಪರ್.]

ಎಂಬೀನೀತಿಶಾಸ್ತ್ರಾಭಿಪ್ರಾಯಮಾದುದು. ಎಲ್ಲಮದೃಷ್ಟವಶಮಲ್ಲದೆ ಎನ್ನ ವಶಮಲ್ಲಮೆಂದು ಖೇದಮಂ ಮಾಣ್ದಿರ್ಪುದುಂ; ಆಸಮಯದೊಳ್ ಮಹಾಟವಿಯೊಳಾಡುತಿರ್ಪ ಕುಱಿವಿಂಡು ನೀರುಣಲ್ ಬಗೆದು ಬಂದಲ್ಲಿ ಕೊಣಕಿಟ್ಟು ತಗರೆರಡುಂ ತಮ್ಮೊಳ್ ತಾಗಿ ಕಿಡಿಗುಟ್ಟದಂತಾಗೆ ಪೋರುತ್ತಿರೆ, ನೆತ್ತಿಯೊಡೆದು ಸುರಿವ ಬಿಸುನೆತ್ತರುಮಂ ಕಂಡದಿಂಡೆಯುಮಂ ಕಂಡು ಕ್ಷುಧಾರ್ತನಪ್ಪದೊಂದು ಮೃಗಧೂರ್ತಂ ಪಿಶಿತಖಂಡಕ್ಕೆ ಸಾರ್ದಲ್ಲಿ ಮತ್ತಮಾತಗರೆರಡುಂ ಭರಂಗೆಯ್ದು ತಾಗುವುದುಂ, ನಡುವಿರ್ದ ನರಿ ಕರಿ ಮೆಟ್ಟಿದ ಸೋರೆಯ ಕಾಯಂತೆ ಜಿಗಿಜಿಗಿಯಾಗಿ ಸತ್ತೊಡದಂ ದೇವಶರ್ಮಂ ಕಂಡು,

ಶ್ಲೋ || "ಜಮ್ಬುಕೋ ಮೇಷಯುದ್ಧೇನ ವಯಂ ಚಾಷಾಢಭೂತಿನಾ ||"

ಎಂದಲ್ಲಿಂ ತಳರ್ದು ಕಿಱಿದಂತರದೊಳದೊಂದೂರಂ ಕಂಡು ಅಲ್ಲಿಗೆ ವರ್ಪನ್ನೆಗಂ; [೨೧

ಮುಗಿಯೆ ಸರೋಜಷಂಡಮಲರ್ದೊಪ್ಪೆ ನವೋತ್ಪಲರಾಜಿ ಚಕ್ಕವ |
ಕ್ಕಿಗಳ ಮನಕ್ಕೆ ತಾಪಮೊದವುತ್ತಿರೆ ವಿದ್ರುಮಭಂಗಕಾಂತಿ ಕೈ ||

---

ಪಾ—1, ಸಂಗ್ರಹೋನಕರ್ತವ್ಯಃ. ಕ ||

ಮಿಗೆ ಘನವೀಧಿಯೊಳ್ ನಿಜಕುಳಾಯತನಕ್ಕೆ ಪಾಱಿ ಪ ।
ಕ್ಕಿಗಳಪರಾಂಬುರಾಶಿಗಿೞಿದಂ ನಳಿನೀ[1]ವನ[1]ಜೀವಿತೇಶ್ವರಂ ॥126

ವ॥ ಅಂತಾದಿತ್ಯನಸ್ತಗಿರಿಯನೆಯ್ದುವುದುಮಾಗೊರವನೂರ ಚತುಷ್ಪಥಮಧ್ಯದೊಳ್ ಬೞಲ್ದೞಲ್ದ ಮೆಯ್ಯಿಂ ಶ್ರಮಶ್ರಾಂತ್ಯಾಕ್ರಾಂತನಾಗಿ ಮೆಂಗುಸಿರ್ವಟ್ಟ ಸುಯ್ಯಿಂ ಗೂಢಪ್ರಾಣಿಯಂತೊಳಪೊಕ್ಕಡಂಗಿದ ಕಣ್ಣಿಂ ಬಱಿಗಾಲದ ಕೆಱೆಯಂತೆ ನೆಱೆಬತ್ತಿದ ಬಾಯುಂ, ಬೇತಾಳನ [2]ಬಸಿಱಂತೆ[2] ಬೆನ್ನಂ ಪತ್ತಿದ ಬಸಿಱುಂ ಬೆರಸು ಬರ್ಪ ವೃದ್ಧತಾಪಸನಂ ಕಂಡವರ್ಗೆಲ್ಲಂ ಕರುಣಮಾಗಲ್; ಅಲ್ಲಿಯ ಮೂಲಿಗನಪ್ಪ ಪಟ್ಟಸಾಲಿಗಂ ಕಂಡು ತನ್ನ ಮನೆಗೊಡಗೊಂಡು ಪೋಗಿ ಪರಮಭಕ್ತಿಯಿಂದಂ ಪಥಶ್ರಮಮನಾಱಿಸಿ ಬೞಿಕ್ಕೆ ತನ್ನ ಪೆಂಡತಿಯಂ ಕರೆದು—ಈ ತಪೋಧನಂಗೆ ನಿವಾತಮಪ್ಪೆಡೆಯೊಳ್ ಪೞಿಕ್ಕೆಗೆಡೆಮಾಡಿ ಕುಡೆಂದು ಪೇೞ್ದು ತಾಂ ಮಧುಪಾನಕ್ರೀಡಾನಿರತನಾಗಿ ಪೋಗಲ್ಬಗೆದು ಚಿತ್ರಾಂಬರಪರಿಧಾನನುಂ, ಕರ್ಪೂರಮಿಶ್ರಿತನವಮಲಯಜ[3]ರಸ[3]ವಿಲಿಪ್ತಗಾತ್ರನುಂ, ಸುರಭಿಕುಸುಮಮಾಲಾಲಂಕೃತೋತ್ತಮಾಂಗನುಂ, ಸರ್ವಾಭರಣಭೂಷಿತನುಮಾಗಿ ಕತಿಪಯಸಮಾನಶೀಲ[4]ವ್ಯಸನ[4]ಸಹಾಯರ್ವೆರಸು [೧೨೭

ಕಮನೀಯೋದಾರಚಾಮೀಕರಚಷಕಚಯನ್ಯಸ್ತಮಾಧ್ವೀಕಗಂಧಾಂ।
ಧಮದಾಳಿವ್ರಾತಝುಂಕಾರಿಯನಧಿಕಮನೋಹಾರಿಯಂ ಮತ್ತನೃತ್ಯ॥
ತ್ಪ್ರಮದಾಕಸ್ತೂರಿಕಾಮಿಶ್ರಿತಗುರುಕಬರೀನಿರ್ಗಳತ್ಪುಷ್ಪಸಂದೋ।
ಹಮನುದ್ಯತ್ಪಾನಭೂರಂಗಮನತಿಮುದದಿಂದೆಯ್ದಿದಂ ತಂತುವಾಯಂ॥

ವ ॥ ಅನ್ನೆಗಮಿತ್ತಲ್ ತಂತುವಾಯಿಕೆ ತಪೋಧನಂಗೆ ಮನೆಯೋವರಿಯೊಳ್ ಪಾಸಿಕೊಟ್ಟು—ನಿಮ್ಮಡಿ ನೀವಿಲ್ಲಿ ಸುಖನಿದ್ರೆಗೆಯ್ಯಿಮೆಂದು

ಪಾ—1. ನವ. ಕ॥ 2. ಬೆನ್ನಿನಂತೆ. ಕ॥ ಗ॥ 3. ರಜ. ಕ॥ 4. ಲಬ್ಧಾಸವ. ಖ॥

ತಾಂ ಜೋಡಾಡಲ್ ಬಗೆದು ಮನೆಯಾಣ್ಮಂ ಬಾರದನ್ನಂ, ಕತ್ತಿಲೆ ಪೋಗದನ್ನಂ, ಚಂದ್ರೋದಯಮಾಗದನ್ನಂ, ತನ್ನ ಮನೋರಥಮಂ ತೀರ್ಚುವೆನೆಂದು ದೂತಿಯಂ ಕರೆದು ತನ್ನಾತನಂ ಸಂಕೇತನಿಕೇತನಕ್ಕೊಡಗೊಂಡು[1] ಬರ್ಪುದೆಂದು[1] ಪೇೞ್ದಟ್ಟೆ,

ತೋಯನಿಧಾನಫೇನವಿಶದೋತ್ತಮವಸ್ತ್ರಮನುಟ್ಟು ಪುಷ್ಪಮಾ।
ಲಾಯುತೆಯಾಗಿ ರಾಗದಿನುಪೇಶ್ವರನೊಳ್ ನೆರೆವಾಸೆಯಿಂ ಪ್ರಸೂ।
ನಾಯುಧತಾಪತಪ್ತೆ ಕಡುಗತ್ತಲೆಯೊಳ್ ಹರಿಣಾಕ್ಷಿ ಪುಂಶ್ಚಲೀ। [೭
ನಾಯಕಿ ತಂತುವಾಯಿಕೆ ನಿಜಾಲಯದಿಂ ಪೊಱಮಟ್ಟಳೞ್ತಿಯಿಂ ‖ 128

ವ ‖ ಅಂತು ತಂತುವಾಯಿಕೆ ಪೊಱಮಟ್ಟು ಕಿಱಿದಂತರಂ ಪೋಗುತ್ತುಂ ಕಟ್ಟದಿರೊಳ್ ತಾಮುರ್ಟ್ಟಾಗೆ ಮದಿರಾಮದೋನ್ಮತ್ತನಾಗಿ ತನ್ನಿಚ್ಛೆಯಿಂ ಮೞ್ಚಿದಂತೆ ಗೞಪುತ್ತುಂ ಬರ್ಪ ಮನೆಯಾಣ್ಮನ ಸರಮಂ ಭೋಂಕನೆ ಸಮೀಪದೊಳ್ ಕೇಳ್ದು ಬಟ್ಟೆಯೊಳ್ ಪೋಪ ಬೆಳ್ಳಾಳ್ ಕಳ್ಳಾಳ ಸರಮಂ ಕೇಳ್ದಂತೆ ಪೆಪ್ಪಳಿಸಿ ಮಗುೞ್ದು ಮನೆಗೆ ಬಂದು ವಿಶೇಷಾಲಂಕಾರಮುಮಂ ಶೃಂಗಾರಮುಮಂ ಕಳೆದು ಪೂರ್ವಸ್ವರೂಪಮಂ ತಾಳ್ದಿರುತಿರ್ಪನ್ನೆಗಂ; [2]ಬೆನ್ನನೆ[2] ಬಂದು ಮುಂದೆ ನಿಂದಿರ್ದ ಗಂಡನಂ ಕಂಡು ಪ್ರಚಂಡೆ ವಂಚನೋಪಾಯಮಂ ಕಾಣದೆ [3]ಬಿಲ್ಲಂಬೆಱಗುವಾಗಿರೆ[3] ಕಂಡಿದೇನೆಂದು ಬೆಸಗೊಂಡೊಡವಳ್ ಸನ್ನಿಪಾತಮೆಡೆಗೊಂಡರವೊಲೇನುಮೆನಲಱಿಯದಿರೆಯುಂ ಮಂತ್ರವಾದಿಯುಂ ಕಂಡ ಗ್ರಹದಂತೆ ಸಮ್ಮುಖದೊಳ್ ನೋಡಲಣ್ಮದಿರೆಯುಂ ಆ ತಂತುವಾಯಂ ಮುನ್ನಮೆ ತನ್ನ ಪೆಂಡತಿ ಜೋಡೆಯೆಂದು ಸಂದೇಹಂಬ[4]ಡುವಾತನ[4]ವಳ ವಿಪರೀತವೇಷಂ ತನಗೆ ರೋಷಮನೀಯೆ ಸಾಯೆ ಸದೆಬಡಿದು ಮನೆಯ ನಡುಗಂಭ

ಪಾ— 1. ಬರ್ಪಸಂದು. ಖ ‖ 2. ಬೇಗನೆ. ಕ ‖
3. ಬೆಱಗುವಾಗಿರ್ದಳಂ. ಕ ‖ ಗ ‖ 4. ಟ್ಟ ಅವ. ಗ ‖ ಖ ‖

ದೊಳಡಸಿ ಕಟ್ಟಿ ಕಳ್ಳ ಸೊರ್ಕಿನೊಳಮವಳ ಪೊರ್ಕುೞಿಯೊಳಂ ಬೞಿಲ್ದು ನಿದ್ರಿತನಪ್ಪುದುಂ; ಅನ್ನೆಗಂ ನೆರೆಮನೆಯ ನಾವಿದನ ಪೆಂಡತಿಯಪ್ಪ ದೂದವಿ ಪಾದರಿಗನಂ ಸಂಕೇತಸ್ಥಾನದೊಳಿರಿಸಿ ಪರಿತಂದು ಕಟ್ಟುವಟ್ಟಿರ್ದ ಕೆಳದಿಯಂ ಕಂಡು, ತದ್ವೃತ್ತಾಂತಮನೆಲ್ಲಮನಱಿಪಲ್, ಆಕೆಯ ಕಟ್ಟುಗಳಂ ಬಿಟ್ಟನ್ನೆಗಂ ತನ್ನ[1]ನಲ್ಲಿ ಕಟ್ಟಿಸಿಕೊಂಡು[1] ನಿನ್ನ[2]ಮನೋವಲ್ಲಭನೊಳ್[2] ನೆರೆದು ಬೇಗಂ ಬರ್ಪುದೆಂದು [3]ಪೇೞ್ದು,[3]

ಬಟ್ಟೈಸಿ ಕರ್ಮವಶದಿಂ ।
ತೊಟ್ಟನೆ ಮತಿಗೆಟ್ಟು ದೂತಿ ಕಟ್ಟಿಸಿಕೊಂಡಳ್ ॥
ಮುಟ್ಟುಗೆಡೆ ತಾನೆ ತನ್ನಂ ।
ಕಟ್ಟಿದುದಂ ಕಳೆಯಲಾರ್ಗಮೇಂ ಬಂದಪುದೇ ॥ 129

ಅಂತು ಕಟ್ಟಿಸಿ ಕೊಂಡು ಕತ್ತಲೆಯೊಳ್ [4]ತಲೆಗರೆದಿರ್ಪುದು[4] ಮಿನಿಸಾನುಂ ಬೇಗದಿಂ ತಂತುವಾಯನೆೞ್ಚತ್ತು ಮತ್ತಮಾಕೆಯನನೇಕ ಪ್ರಕಾರದಿಂ ಬಯ್ದು—ನಿನ್ನ ಬೇಟದ ಮಿಂಡನಾವನವನಂ ಪೇೞೆಂದು ಬೆಸಗೊಳೆ; ದೂತಿ ಭೀತಿಯಿಂದುಸಿರಿಕ್ಕದಿರೆ; ಸೈರಿಸಲಾಱದೀತೊತ್ತಿಂಗೆ ತಕ್ಕುದಂ ಮಾೞ್ಪೆನೆಂದು ಬಗೆದು,

ಆಡಿದವಳಾಡಿ ಪೋದಳ್ ।
ನೋಡಲ್ ಬಂದವಳ್ಗೆ* ಮೂಗು ಪೋಯ್ತೆಂಬಿನಿತಂ ॥
ಮಾಡುವೆನೆಂಬಂತಿರ್ದಾ ।
ಜೋಡೆಯ ಮೂಗಿಂಗೆ ಮೃತ್ಯು [5]ಮೂಡುವ ತೆಱದಿಂ[5] ॥130

ಟ— ೧. ಕಳ್ಳ—ಹೆಂಡದ. ಪೊರ್ಕುೞಿ—ಹೊಡೆದಾಟ.

ಪಾ— 1. ನಿಲ್ಲಿಕಟ್ಟಿ. ಕ ॥ 2. ಉಪಪತಿಯೊಳ್. ಖ ॥ 3. ಪೇೞ್ದಟ್ಟಿ. ಕ ॥ ಗ ॥
4. ಮಲಗಿರುತ್ತಿರಲು, ಕ ॥ 5. ಮೂಡಿತ್ತಾಗಳ್. ಕ ॥ ಗ ॥

ಅಂತಾತಂತುವಾಯನೆೞ್ದವಳ ಮೂಗನರಿದು ಮತ್ತಂ ನಿದ್ರಾಂಗನಾಸಂಗತನಾದಂ. ಇತ್ತಲ್ ತಂತುವಾಯಿಕೆ ಜಾರನೊಳ್ ನೆರೆದು ಸುರತಸುಖಮನನುಭವಿಸುತಿರ್ಪನ್ನೆಗಮಿತ್ತಲ್,

[1]ಸೌಂ[1]ದರನಂ ಪ್ರತಾಪಪರನಪ್ಪ ನಿಜೇಶನನೊಲ್ಲದೆಲ್ಲರುಂ ।
ನಿಂದಿಸೆ ತೀಕ್ಷ್ಣಮಪ್ಪ ನೃಪದಂಡನೆಗಳ್ಕದೆ ಮೆಯ್ಗೆ ಮೆಚ್ಚಿ[2]ದೊಂ[2] ॥
ದಂದದೆ ಪಾಣ್ಬರೊಳ್ ನೆರೆವ ಪಾಣ್ಬೆಯರಾಟಮನೀಕ್ಷಿಸಲ್ ಮನಂ ।
ದಂದಿರದೇೞ್ದಂ ಮುದದೆ ಚಂದ್ರಮನಿಂದ್ರಹರಿನ್ನಗೇಂದ್ರಮಂ ॥131

ವ॥ ಅಂತಾಚಂದ್ರೋದಯಮಾದುದಂ ತಂತುವಾಯಿಕೆ ಕಂಡು ಬೆಗಡುಗೊಂಡು ಪಾಣ್ಬನಂ ಬೀೞ್ಕೊಂಡು ಪೊಱಮಟ್ಟು,

ಸುರತಮದೋತ್ಥಘರ್ಮಜಲಬಿಂದುಮನೋಹರಹಾರೆ ವಲ್ಲಭಾ ।
ಧರಮಧುಪಾನನಿರ್ಗತಮನೋಭವತಾಪೆ ನಖವ್ರಣಾವಳೀ ॥ [೧೧
ಸ್ಫುರಿತಘನೋರುಯುಗ್ಮೆ ನೃಪದಂಡಭಯಾತುರೆ ತಂತುವಾಯಸೌಂ ।
ದರಿ ಕಡುವೇಗದಿಂ ಕುಟಿಲಮಾರ್ಗದಿನೆಯ್ದಿದಳಾತ್ಮಗೇಹಮಂ ॥132

ವ॥ ಅಂತೆಯ್ದಿ ಕಟ್ಟಿಲೆಯೊಳ್ ಕಟ್ಟುವಡೆದಿರ್ದಾದ್ರೋಹಿಯಂ ಕಂಡಾಪತಿದ್ರೋಹಿ ಸಾರ್ದು—ನಿಮ್ಮ ಭಾವನೇನಾನುಮೊಂದ ಮಾತುಳ್ಳೊಡೆ ಪೇೞ್ದನಲೇನಂ ಪೇೞ್ವೆಂ? "ಪೊಕ್ಕಿಱಿಯಲ್ ಪೋಗಿ ಮೂಗಱಿವಡೆದರ್" ಎಂಬ ನಾಣ್ನುಡಿ ತನ್ನೊಳ್ ಸನ್ನಿದಮಾದುದಿದರ್ಕೆ ತಕ್ಕುದಂ ನೆಗೞಲ್ವೇೞ್ಕುಂ, ಈ ಕಟ್ಟುಗಳಂ ಬೇಗಂ [3]ಬಿಡಿಸೆಂದು[3] ಬಿಡಿಸಿಕೊಂಡು ಪೋದಳ್. ಇತ್ತಲ್ ತಂತುವಾಯಿಕೆಯುಂ ತನಗೆ ಮುಂತಪ್ಪ ನಿರ್ಗಮೋಪಾಯಮಂ ಚಿಂತಿಸಿಕೊಂಡು ಸಂತಸಂಬಟ್ಟನ್ನೀಬೆಳ್ಳನನಾಳವಾಡಲ್ ಬಲ್ಲೆನೆಂದು ಬಗೆದು ಗೃಹಮಧ್ಯಸ್ತಂಭಾವಷ್ಟಂಭೆಯಾಗಿರೆ; ತಂತು

ಪಾ—1. ಸುಂ. ಕ ॥ ಗ ॥ 2. ಬಂ. ಕ ॥ 3. ಬಿಡೆಂದು. ಕ ॥ ಖ ॥

ಪಾಯನೆೞ್ದು —ಈಗಳ್ ನಿನ್ನ ರೂಪವಿಲಾಸವಿಭ್ರಮಂಗಳ್ ಮಂಗಳ ಮಾಗಿರ್ದುದನೀಪದದೊಳ್ ನಿನ್ನ ಮನೋವಲ್ಲಭನಲ್ಲಿಗೆ ಪೋಗಿ ತೋ ಱದೇಕೆಮಾಣ್ದೆ? ಎಂದು ವಿರಸಮಪ್ಪ ಸರಸವಚನಂಗಳಂ ನುಡಿಯೆ; ತಂತುವಾಯಿಕೆಯಿಂತೆಂದಳ್:—

ನೀನಿಂತು ಕರಂ ಕಯ್ಗೆ । [೫೯
ಯ್ದಾನಂದಮನಸ್ಕನಾದೊಡಾನುಂ ನಿನಗ ॥
ತ್ಯಾನಂದಂಮಾಡುವೆನೆಂ ।
[1]ಬೀ[1]ನೆವದಿಂದೆಸೆ[2]ಯೆ[2] ಪಸದನಂಗೊಂಡಿರ್ದೆಂ ॥133

ಅಂತಿರ್ದೊಡದನೆ ದೋಷಂಗೆಯ್ದು [3]ರೋ[3]ಷಗ್ರಹಾವೇಶನಾಗಿ ನಿಷ್ಕಾರಣಂ [4]ಪರಿಭವಿಸಿ ನೋಯಿಸಿದೆ. ಆದೊಡಮೇಂ. ಆನಂತಪ್ಪ[4] ಬರ್ಬ ತಾಯ್ಗಂ ತಂದೆಗಂ ಪುಟ್ಟಿದೆನಾದೊಡೆ, ನಾಂ ಪತಿವ್ರತೆಯಾ ದೊಡೆ, ಮನೆದೈವಂಗಳೆನಗೆ ಸನ್ನಿದವಾದೊಡೆನ್ನಮೂಗು ಮುನ್ನಿನಂ ತಾಗಲೀಕಟ್ಟಿರ್ದ ಕಟ್ಟೆಲ್ಲಂ ಬಿಟ್ಟು[5]ಪೋಗಲೆವೇೞ್ಕುಂ, ಅದಲ್ಲದಾಗ ಳಾಂ[5] ಮಹಾಸತಿಯಲ್ಲೆಂದು ಪ್ರತಿಜ್ಞೆಗೆಯ್ಯೆ; ತಂತುವಾಯಂ ವಿಸ್ಮಯಂ ಬಟ್ಟೀಕೌತುಕಮಂ ನೋೞ್ಪೆನೆಂದು ತೃಣಾಗ್ನಿಯಂ ಸಂಧಿಸಿ ತಂದು ನೋಡಲ್ ಪೂರ್ವರೂಪಿಯುಮಪೂರ್ವಸ್ವರೂಪಿಯುಮಾಗಿರ್ದಾಮಾ ಯಾವಿಯಂ ಕಂಡು ರೋಮಾಂಚಕಂಚುಕಿತ[6]ಕಾಯಂ[6] ತಂತುವಾ ಯಂ ಕೈಗಳಂ ಮುಗಿದು,

ವನಜಾಕ್ಷಿ ದೋಷಿಯಲ್ಲದ ।
ನಿನಗೆ ಕರಂ ಪೊಲ್ಲಗೆಯ್ದೆನೆಂದಿರದಾತ್ಮಾಂ ॥ [೬೦

ಪಾ— 1. ದೀ. ಕ ॥ 2. ವ. ಕ ॥ ಗ ॥ 3. ದೋ. ಕ ॥ ಗ ॥
4. ನಿಗ್ರಹಿಸಿದೆಯಾದೊಡೆ ನಾನುಂ. ಕ ॥ ಗ ॥ 5. ಪೋಗಿರಲಿಮದಲ್ಲದೊಡೆ. ಕ ॥
6. ಗಾತ್ರಂ. ಕ ॥

ಗನೆಯು ಪದಕ್ಕೆಱಗಿದನೆ ।
ನ್ನನುಮಱಿಗುಮೆ ಧೂರ್ತೆಯಪ್ಪ ಕಾಂತೆಯ ಮನಮಂ ॥134

ಅಂತಿರೆ ತಂತುವಾಯನಾಜೋಡೆಯುಂ ಸಂತಸಂಬಡಿಸಿ ಸುಖನಿದ್ರಿತನಾದಂ. ಅದೆಲ್ಲಮನಲ್ಲಿ ಪಟ್ಟಿರ್ದ ವೃದ್ಧತಾಪಸಂ ಕಂಡು,

ನಂಬಿಪರೆನ್ನರಪ್ಪರುಮನೇತೆಱದಿಂ ಸಲೆ ನಂಬೆ ಪಾಣ್ಬೆಯರ್ । [ಅ
[1]ಡಂಬಿಪ[1]ರಿಂತನೇಕವಿಧದಿಂದೆ ವಿಚಾರಿಸಿ ನೋಡೆ ಪೆಂಡಿರಂ ॥
ನಂಬಲೆಯಾಗ ನಂಬದಿರಲಾಗವರಿಲ್ಲದೆ ಬಾೞಲಾಗದೇ ।
ನೆಂಬುದಿದರ್ಕೆ ತಕ್ಕುದನೆ ಬಲ್ಲವನುಳ್ಳೊಡೆ ದೇವನಲ್ಲವೇ॥135

ಎಂದು ದೇವಶರ್ಮಂ ಚೋದ್ಯಂಬಟ್ಟಿರ್ಪಿನಮಿತ್ತಂ [2]ದೂದವಿ[2]ಯುಂ ನಿಜನಿವಾಸಕ್ಕೆ ಪೋಗಿ, ಇದರ್ಕೇಗೆಯ್ವೆನೆಂದು ಚಿಂತಿಸುತಿರ್ಪಿನಮಿತ್ತಲ್;

ಭುವನಜನವಿನುತಪಾದಂ ।
ದಿವಸಕರಂ ನಿಖಿಳಕಮಲವನಕಾಹ್ಲಾದಂ ॥
ಪ್ರವಿದಿತಕೌಶಿಕಪಾದಂ ।
ದಿವಿಜಾಶಾಶಿಖರಿಶಿಖರಶೇಖರನಾದಂ ॥136 [೧೫

ಅಂತಾದಿತ್ಯೋದಯಮಾಗಲೊಡಂ; ದೂದವಿಯ ಗಂಡಂ ಬಂದು —ಅರಸರ್ ಬೆಸವೇೞ್ದರ್, ಬೇಗಂ ಕ್ಷುರಭಾಂಡಮನೀಯೆಂದು ಬೇಡಿದೊಡವಳ್ ಧೂರ್ತೋಕ್ತಿಯಿಂ ತನ್ನ ದೋಷಮಂ ಪರಿಹರಿಸಲಿದೊಂದು ಉಪಾಯಮಾದುದೆಂದು ಬಾಳಂ ಕಲ್ಲ ಮೇಲೀಡಾಡಿದೊಡದು ಮುಕ್ಕುವೋದುದಂ ಕಂಡು ಕಡುಮುಳಿದು ನಾವಿದನಾಬಾಳನವಳ ಮೇಲೆ ಮಗುೞ್ದೀಡಾಡಿದೊಡವಳ್—ತನ್ನ ಮೂಗನಕಾರಣಂ ಕೊಯ್ದನೆಂದು ಮೂಗಂ ಮತ್ತಂ ನೆತ್ತರ್ ಸುರಿವಿನಮೊರಸಿ ಹಾಹಾಕ್ರಂದನರವದಿಂ ಪುಯ್ಯಲಿ

ಪಾ— 1. ನಂಜಿಸ. ಕ ॥ 2. ಅನಾವಿದನಪೆಂಡತಿ. ಕ ॥

ಡುವ ಕರುಣಾರವವಮಂ ತಳವಾಱಂ ಕೇಳ್ದು ಪರಿತಂದು ನಾವಿದನುಮವನ ಪೆಂಡತಿಯುಮಂ ಪಿಡಿದೊಡಗೊಂಡು ಪೋಗಿ ಧರ್ಮಾಧಿಕರಣದ ತಾಣಾಂತರದೊಳಿರಿಸಿದಂ. ಅನ್ನೆಗಂ ದೇವಶರ್ಮಂ ತನ್ನ ಬಗೆದೆಡೆಗೆ ಪೋಗಲೆಂದು ಬರುತ್ತುಂ ಪಿರಿದಾಗಿ ನೆಱೆದಿರ್ದ ಜನಮುಂ ಕಂಡಿದಿನಿಸಾನುಂ ಕೌತುಕಮಾಗಲೆವೇಳ್ಕುಮಿದಂ ನೋಡುವೆನೆಂದು ಪೋಗಿ ನೋಡುತಿರ್ಪನ್ನೆಗಂ; ಧರ್ಮಾಧಿಕರಣದವರ್ ನಾವಿದನಂ ಕರೆದು— ನೀನಿವಳ ಮೂಗನೇಂ ಕಾರಣಂ ಪಱಿದೆ ಪೇೞೆಂದು ಪಲವುಸೂೞಿಂ ಬೆಸಗೊಂಡೊಡವಂ ಮತಿಭ್ರಾಂತಿಯಿಂದುಸಿರದಿರ್ಪುದುಮದಂ ಕಂಡು — ಪೆಂಡತಿಯ ಮೂಗನಕಾರಣದಿನರಿವವನಂ ಜವನ ಬಾಱಿಗಟ್ಟುವುದೆ ಧರ್ಮಮೆಂದು ಧರ್ಮಾಧಿಕರಣಂ ದಂಡಧರಂಗೆ ಪೇೞ್ವುದುಮಾತಳಾಱರಾ ನಾವಿದನಂ ಪಿಡಿದುಯ್ಯುತಿರ್ದಾಗಳ್; ದೇವಶರ್ಮನನ್ನೆಗಂ ಮಾಣೆಂದು ಧರ್ಮಾಧಿಕರಣರ್ಗಿಂತೆಂದಂ:— ಈ ಪಾತಕಿಯ ಮಾತಂ ನಂಬಿ ದೋಷಿಯಲ್ಲದನಂ ಕೊಲಿಸುವುದು ಧರ್ಮಮಲ್ಲೆಂದು ನುಡಿವುದುಂ;—ನೀನೆಂತಱಿವೆಯೆಂದು ಧರ್ಮಾಧಿಕರಣರ್ ಬೆಸಗೊಂಡೊಡೆ ದೇವಶರ್ಮನಿಂತೆಂದಂ:—

ಶ್ಲೋ || “ಜಂಬುಕೋ ಮೇಷಯುದ್ಧೇನ ವಯಂ ಚಾಷಾಢಭೂತಿನಾ |
ದೂತಿಕಾ ತಂತುವಾಯೇನ ತ್ರಯೋನರ್ಥಾಸ್ಸ್ವಯಂ ಕೃತಾಃ ||” ೪೪

[ಟೀಕು— ತಗರ್ ಕಾದುವಲ್ಲಿ ನಡುವೊಕ್ಕು ನರಿ ಸತ್ತುದು ; ಆಷಾಢಭೂತಿಯಿಂದಂ ದೇವಶರ್ಮನಪ್ಪೆನ್ನ ಧನಂ ಪೋದುದು ; ಸಾಲಿಗನ ಕೈಯೊಳ್ ದೂದವಿಯಪ್ಪವಳ್ ವೃಥಾ ಮೂಗಂ ಕೊಯಿಸಿಕೊಂಡಳ್: ಈ ಮೂಱನರ್ಥಂಗಳ್ ತಮ್ಮಿಂ ತಾವೆ ಮಾಡಿಕೊಂಡುವು.]

ಎಂದಿಂತಿವರ ಕಥಾವೃತ್ತಾಂತಮುಂ ಧರ್ಮಾಧಿಕರಣರ್ಗೆ ದೇವಶರ್ಮಂ ಪೇೞ್ದು ನಾವಿದನ ಸಾವಂ ಮಾಣಿಸಿದಂ.

ಎಂಬಂತೆ ಸಂಜೀವಕನೆಂಬ ಪಾತಕನಂ ತಂದು ಪಿಂಗಳಕನೊಳ್ ಕೂಡಿ ಸ್ವಯಂಕೃತಾನರ್ಥಮಂ ಮಾಡಿಕೊಂಡೆವೆನೆ— ಕರಟಕನಿಂತೆಂದಂ:— ಮಂತ್ರನಿಶ್ಚಯಮಿಲ್ಲದೆ ಅನಾಲೋಚಿತಕಾರ್ಯಾನುಷ್ಠಾನವಿಪತ್ತಿಯೊಳಿದಂ ಮೊದಲೊಳಂತೆ ಮಾಡದೆ ಪೊಲ್ಲದಾಯ್ತೆಂದು ಬೞಿಕ್ಕ ಕಾಣ್ಬ ಕಾಣ್ಕೆಯಿಂ ಮುನ್ನಮೆ ಕಾಣ್ಬಂಗಾವ ಕಾರ್ಯಮುಮಸಾಧ್ಯಮಾಗಲಱಿಯದು. ಇನ್ನಾದೊಡಂ ನಿನ್ನ ಪಶ್ಚಾತ್ತಾಪಮಂ ಮಾಣ್ದು [1]ನಿನ್ನ[1] ಪುತ್ರಮಿತ್ರಕಲತ್ರಬಾಂಧವರ್ ಪಸಿದು ಸಾಯದಂತಪ್ಪುಪಾಯಮನೀಯವಸರದೊಳ್ ಮಾಡಿ ನಿನ್ನ ಬುದ್ಧಿಯನಿಲ್ಲಿ ತೋಱಲ್ ಬಲ್ಲೆಯಪ್ಪೊಡೆ ತೋಱಿನೆ — ದಮನಕನಂತೆಗೆಯ್ವೆನೆಂದಿಂತೆಂದಂ:— [೯

ಶ್ಲೋ|| "ಆಸನ್ನಕಾರ್ಯಸ್ಯ ಸಮುದ್ಭವಾರ್ಥಮಾಗಾಮಿನೋಽರ್ಥಸ್ಯ ಚ ಸಂಗ್ರಹಾರ್ಥಂ|
ಅನರ್ಥಕಾರ್ಯಪ್ರತಿ[2]ಘಾತನಾ[2]ರ್ಥಂ ಯನ್ಮಂತ್ರ್ಯತೇಽಸೌ ಪರಮೋ ಹಿ ಮಂತ್ರಃ||"

[ಟೀಕು— ಆಗಿರ್ದ ಕಾರ್ಯದ ಪೆರ್ಚುಗೆಗಂ ಮುಂತಪ್ಪ [3]ಕಜ್ಜಮುಮಂ ಮಾಡುವುದರ್ಕ[3]ಮನರ್ಥಕಮಪ್ಪ ಕಜ್ಜದ ಪ್ರತೀಕಾರಕ್ಕಮಾವುದಾನೊಂದಾಲೋಚನೆಗೆಯ್ದು ಮಾಡಿಪ್ಪುದುತ್ತಮಮಂತ್ರಂ.] [೧೪

ಅದು ಕಾರಣದಿನೀಗಳ್ ಪಿಂಗಳಕನಪ್ಪೊಡೆ ಮಹಾವ್ಯಸನಮಂ ಕೈಕೊಂಡಂ; ಅವಾವುವೆಂದೊಡೆ—ಅರಸನಪ್ಪಾತಂಗೆ ಸ್ವಭಾವ ಪ್ರದೋಷ ಪ್ರಸಂಗ ಗುಣಪ್ರತಿಲೋಮ ಪೀಡನಮೆಂದಯ್ದು ಮೂಲವ್ಯಸನಂಗಳಕ್ಕುಂ. ಅವಱೊಳ್ ಸ್ವಾಮ್ಯಮಾತ್ಯಜನಪದ[4]ದುರ್ಗಸುಹೃತ್ಕೋಶದಂಡಮೆಂಬೇೞಂಗ[4]ದೊಳೇಕಾಂಗಂ ವಿಕಳಮಾದೊಡಂ ಸ್ವಭಾವಮೆಂಬುದಕ್ಕುಂ. ಬಾಹ್ಯಾಂತಃಪ್ರಕೃತಿಗಳೆರಡುಮೊಮ್ಮೆಯೆ ಪ್ರಕೋಪಂಗೆಯ್ವುದು ಪ್ರದೋಷಮೆಂಬುದಕ್ಕುಂ. ಅಂಗನಾದ್ಯೂತಮೃಗಯಾ

ಪಾ— 1. ನಮ್ಮ. ಕ || 2. ಪೂರಣಾ. ಗ || 3. ಕಾರ್ಯಸಂಗ್ರಹಮು. ಕ || ಗ ||
4. ದುರ್ಗಕೋಶದಂಡವೆಂಬಾಱಿಂ. ಕ || ಗ ||

ಪಾನವಾಗ್ದಂಡಪರುಷಾರ್ಥದೂಷಣಂಗಳೆಂಬೇೞುಂ ಪ್ರಸಂಗಗುಣಮೆಂಬುದಕ್ಕುಂ. ಕಾಂತಾದ್ಯೂತಮೃಗಯಾಪಾನಂಗಳ್ ನಾಲ್ಕುಂ ಕಾಮಜಂಗಳ್; ಉೞಿದ ವಾಗ್ದಂಡಪರುಷಾರ್ಥದೂಷಣಂಗಳ್ ಮೂಱುಂ ಕ್ರೋಧಜಂಗಳಕ್ಕುಂ. ಸಂಧಿವಿಗ್ರಹಯಾನಾಸನದ್ವೈಧೀಭಾವಸಮಾಶ್ರಯಂಗಳೆಂಬಾಱುಗುಣಂಗಳೊಳಂ ಸಂಧಿಕಾರ್ಯದೆಡೆಯೊಳ್ವಿಗ್ರಹಮನೆತ್ತಿಕೊಳ್ವುದುಂ, ವಿಗ್ರಹಮಪ್ಪೆಡೆಯೊಳ್ ಸಂಧಿಯನೊಡರ್ಚುವುದುಮುೞಿದ ಗುಣಂಗಳುಮನೀಯಂದದೊಳ್ ಪ್ರತಿಲೋಮಂಗೆಯ್ವುದುಂ ಪ್ರತಿಲೋಮಮೆಂಬ ವ್ಯಸನಮಕ್ಕುಂ. [1]ವೈರಾಗ್ಯ, ಅಗ್ನಿ, ಉದಕ, ವ್ಯಾತಂಕ,[1] ಮಾರಿಗುತ್ತ, ದುರ್ಭಿಕ್ಷ, ಅತಿವೃಷ್ಟಿ, ಅನಾವೃಷ್ಟಿಗಳೆಂಬೆಂಟುಂ ಪೀಡನಮೆಂಬುದಕ್ಕುಂ. ಇಂತೈದುಂ ವ್ಯಸನಂಗಳೊಳ್ ನಮ್ಮರಸನಪ್ಪ ಪಿಂಗಳಕಂ ಪಶುವಿಂಗೆ ವಶಗತನಾಗಿ ವಿರಕ್ತಪ್ರಕೃತಿಯಪ್ಪುದಱಿಂ ಸ್ವಭಾವಮೆಂಬ ವ್ಯಸನಂಗೂಡಿ ವಿರಕ್ತನಾಗಿರ್ದಪಂ. ಅದಱಿಂದಾತಂಗೆ ಸಂಜೀವಕನೊಳ್ ವಿರಕ್ತಿಯುಂ ಮಾಡುವುದೆ ಕಜ್ಜಮೆನೆ—ಕರಟಕಂ— ಅಂತಪ್ಪೊಡೆ ನಿನ್ನ ಪೇೞ್ದ ಗುಣಂಗಳೀಗಳವರಿರ್ಬರ್ಗಂ ವಿರಕ್ತಿಯುಂ ಮಾಡುವುದುಂ ನಾಡೆಯುಂ ಗಹನಮೆನೆ— ದವನಕನದಾವಗಹನಂ, ಬುದ್ಧಿಗಸಾಧ್ಯಮಾವುದುಮಿಲ್ಲೆಂಬುದಂ ಕೇಳ್ದಱಿವುದಿಲ್ಲಕ್ಕುಮೆಂದಿಂತೆಂದಂ:— [೧೩

ಶ್ಲೋ|| " ಉಪಾಯೇನ ಹಿ[2]ತಂ ಕುರ್ಯಾದನ್ಯಶಕ್ತಿಪರಾಕ್ರಮೈಃ[2] |
[3]ಕಾಕೀ[3] ಕನಕಸೂತ್ರೇಣ ಕೃಷ್ಣ[4]ಸರ್ಪಮಘಾತಯತ್[4] ||" ೪೬

[ಟೀಕು— ಉಪಾಯದಿಂದಂ ತನಗೆ ಹಿತವಂ ಮಾಡಿಕೊಂಬುದು ; ಅವನೊರ್ವಂಗೆ ಪರಾಕ್ರಮಶಕ್ತಿಯಿಲ್ಲದಿರ್ದೊಡವನ್ಯಶಕ್ತಿಪರಾಕ್ರಮದಿಂ ಸಾಧಿಸಿಕೊಂಬುದು ; ಕಾಗೆ ತಂದ ಕನಕಸೂತ್ರದಿಂ ಕೃಷ್ಣಸರ್ಪನೆಹಗೆ ಮರಣಮನೆಯ್ದಿತ್ತಹಗೆ.]

ಪಾ—1. ವೈರ ಅಗ್ನಿವ್ಯಾತಂಕ. ಕ || ;ವೈರಿ ಅಗ್ನಿಉದಕವ್ಯಾಧಿನರಕ. ಗ || ; ವೈರಾಗ್ಯ ಅಗ್ನಿಉದಕವ್ಯಾಧಿನರಕ. ಖ || 2. ಯಚ್ಛಕ್ಯಂ ನ ತಚ್ಛಕ್ಯಂ ಪರಾಕ್ರಮೈಃ | ಗ || 3. ಕಾಕ್ಯಾ. ಕ || ಖ || 4. ಕೃಷ್ಣಸರ್ಪೋನಿಪಾತಿತಃ. ಕ ||

ಅದೆಂತೆನೆ— ಕರಟಕಂ ಪೇೞ್ದುದು:—

೭. ಕಾಗೆ ಕಷ್ಣಸರ್ಪನಂ ಕೊಂದ ಕಥೆ.

ಮಹಾನದೀತೀರದೊಳಿರ್ಪುದೊಂದು ಮಹಾವಟವಿಟಪಿಕೋಟರಮೆ[1]ಕುಲಾಯ[1]ಮಾಗಿ ಕಾಕಮಿಥುನಮಿರ್ಕುಂ. ಅವಱ ತತ್ತಿಗಳನಾ ಮರದ ಮೊದಲ ಪುತ್ತಿನೊಳಿರ್ಪುದೊಂದು ಪಾವು ಪಲಕಾಲಂ ತಿನುತ್ತಿರೆ, ಆವಾಯಸಂ ತಪ್ತಾಯಸರಸಮಂ ಕುಡಿದಂತೆ ಮಲುಮಲನೆ ಮಱುಗಿ ಸೈರಿಸಲಾಱದೆ ಈಪಾವಿಂಗಾನಾವುದಾನುಮೊಂದುಪಾಯದೊಳ್ ಸಾವಂ ಮಾೞ್ಪೆನೆಂದು, ತನಗೆ ಪರಮಮಿತ್ರನಪ್ಪುದೊಂದು ಜಂಬುಕನಲ್ಲಿಗೆ ವಂದು ಶೋಕಂಗೆಯ್ಯೆ; ಜಂಬುಕಂ— ಏಂ ಕಾರಣಂ ಶೋಕಂಗೆಯ್ದಪೆ? ಎಂದು ಬೆಸಗೊಳೆ; ವಾಯಸಂ ಪೇೞ್ಗುಂ:— ಆನಿರ್ಪ ಮರದ ಮೊದಲ ಪುತ್ತಿನೊಳಿರ್ಪುದೊಂದು ಮಹಾಸರ್ಪನೆನ್ನ ಪೆಂಡತಿಯ ಪ್ರಸೂತಿಕಾಲಮಂ ಪಾರ್ದು ಪರಿತಂದು ತತ್ತಿಗಳಂ ತಿಂದೆನಗೆ ವಿಷಾದಂಮಾಡುತಿರ್ದಪುದದುಕಾರಣಂ ನೀನೆನಗೆ ಪರಮಮಿತ್ರನಪ್ಪೊಡೆ, ಉರಗನಂ ಕೊಲ್ವುಪಾಯಮಂ ಪೇೞಲ್ವೇೞ್ಪುದು. ಎಂತುಂ ಸುಭಾಷಿತಮಿಂತೆಂಬುದಲ್ತೆ— [೧೫

ಶ್ಲೋ || "ಆತುರೇ ವ್ಯಸನೇ ಪ್ರಾಪ್ತೇ ದುರ್ಭಿಕ್ಷೇ ಶತ್ರುವಿಗ್ರಹೇ |
ರಾಜದ್ವಾರೇ ಶ್ಮಶಾನೇ ಚ ಯಸ್ತಿಷ್ಠತಿ ಸ ಬಾಂಧವಃ ||" ೪೭

[ಟೀಕು— ವ್ಯಾಧಿಯಲ್ಲಿ, ಕ್ಲೇಶದಲ್ಲಿ, ಬಱಹಿನಲ್ಲಿ, ಹಗೆಗಳ್ ಕೊಲಬಂದಲ್ಲಿ, ಅರಮನೆಯ ದ್ವಾರದಲ್ಲಿ, ಶ್ಮಶಾನದಲ್ಲಿ ತನಗಾದವರೇ ಬಂಧುಗಳ್ ]

ಎಂದು ಪೇೞ್ದ ಸತ್ಪುರುಷರ ಗುಣಮಂ ಕೈಕೊಂಡು ಎನ್ನ ಪಗೆ ಸಾಧ್ಯಮಪ್ಪಂತು ಮಾಡುವುದೆನೆ— ನರಿ ಕರಮೊಳ್ಳಿತ್ತಂತೆಗೆಯ್ವೆನೆಂದೀಯೆಡೆಗೊಂದು ವಾಕ್ಯಮುಂಟದೆಂತೆನೆ:— [೨೦

ಪಾ—1, ಕುಲಾಯತನ. ಕ || ಖ ||

ಶ್ಲೋ|| " ಅತಿಲೌಲ್ಯಾದ್ಬಕಃ ಕಶ್ಚಿತ್ ಮೃತಃ ಕರ್ಕಟ[1]ಸಂ[1]ಗ್ರಹಾತ್ || "

ಎಂಬ ಕಥೆಯುಂ ಸರ್ಪಂಗಾಂ [2]ಮಾೞ್ಪೆ[2]ನೆನೆ— ವಾಯಸನದೆಂತೆನೆ— ಜಂಬುಕಂ ಪೇೞ್ಗುಂ:—

## ೮. ಕೊಕ್ಕರೆಯುಮೇಡಿಯುಂ.

ಮಹಾಗಹನಮಧ್ಯದೊಳೊಂದು ಸರೋವರಮುಂಟು. ಅಲ್ಲಿ ಪಲವು ಮತ್ಸ್ಯಂಗಳಿರ್ಪುದುವೊಂದು ಬಕಂ ಕಂಡು ತಾನೊಂದು ನೆವದಿಂದಾಮಿಾನ್ಗಳಂ ತಿಂದು ಕಾಲಮಂ [3]ಕಳೆವೆನೆಂದು ತಪೋ[3]ರೂಪಮಂ ಕೈಕೊಂಡು ಕಿಱುಮಿಾಂಗಳೆಲ್ಲಮಂ ನೆಱೆಯೆ ತಿಂದು ಪಿರಿಯಮಿಾಂಗಳ್ ದೊರೆಕೊಳ್ಳ[4]ದೊಡೀ[4]ಮಿಾಂಗಳನಾವಪಾಂಗಿನೊಳ್ ನಾಂ ತಿಂಬೆನೆಂದು ನೀರ ತಡಿಯೊಳ್ ಮೋನಂಗೊಂಡು ಜಾನಿಸುತ್ತಿರೆ; ಆಬಕನಂ ಮಿಾಂಗಳೆಲ್ಲಂ ಕಂಡು— [5]ನಿಮ್ಮಡಿ, ನೀವಿಂತೇಕೆ[5] ಚಿಂತಾಕ್ರಾಂತರಾಗಿರ್ಪಿರೆನೆ— ಬಕನಿಂತೆಂದುದು:— [೧೦

ಪಲಕಾಲಂ ಸುಖದಿಂದಂ |
[6]ನೆಲಸಿರ್ದುಂ[6] ನೀಮುಮಾಮುಮಿಾ[7]ಪೂ[7]ಗೊಳದೊಳ್ ||
ಕೆಲವು ದಿನಕ್ಕಾನಿಲ್ಲಿಂ | [೧೫
ತೊಲಗುವುದಂ ನಿಮಗೆ ಸಾವುಮಂ ಕಂಡಿರ್ದೆಂ ||137

ಅಂತು ಕಂಡು ನಿಮ್ಮನಗಲ್ದೆಂತು ಪೋಪೆಂ, ಇರ್ದೆಂತು ರಕ್ಷಿಸುವೆನೆಂದು ಚಿಂತಿಸಿದಪೆನೆನೆ— ಮತ್ಸ್ಯಸಮೂಹಂಗಳಿಂತೆಂದುವು:— ತಮಗೆ ಮರಣಮೇಕಾರಣಮಪ್ಪುದದಂ ನೀವಱಿಯೆ ಪೇೞಿಮೆನೆ— ಬಕಂ

ಪಾ—1. ಕ. ಕ || 2. ಪೇೞ್ವೆ. ಕ ||
3. ಕಂಡುಳಿವೆನೆಂದುಡಪೋಸ. ಕ || 4. ದಿರೆ ಈ. ಕ ||
5. ನಿಮ್ಮಡಿಗಳೇಕೆ. ಕ || ಗ || 6. ಸಲೆಸಂದುಂ. ಖ || 7. ತಿಳಿ. ಗ ||

ವಿಕಟಮಪ್ಪುದೊಂದು ಕಥೆಯಂ ಪೇೞ್ದು ಮತ್ಸ್ಯಂಗಳಂ ನಂಬಿಸಿ ತಿಂಬೆನೆಂದಿಂತೆಂದುದು :—

ವಾಕ್ಯಂ|| "ರಾಜಾ ಕಾಲಸ್ಯ ಕಾರಣಂ ||" ೪೮

ಎಂಬ ವಾಕ್ಯೋಕ್ತಿಯುಂಟಪ್ಪುದಱಿಂದೀದೇಶಮನಾಳ್ವರಸಂ ನಿಜಕುಲಾಂಗನೆಯೊಳೆಂದುಂ ಋತುಕಾಲಸಂಗವಿರಕ್ತನುಂ ದೇವಾಗ್ನಿದ್ವಿಜಗುರುಪಿತೃತರ್ಪಣಂಗಳಂ ಮಾೞ್ಪನುಮಲ್ಲಮದಱಿಂದಾತನಪಚಾರಣಮೆ ಕಾರಣಮಾಗಿ ಪನ್ನೆರಡುವರ್ಷಮನಾವೃಷ್ಟಿಯಾದಪ್ಪುದು, ಈ ಕೊಳನುಂ ಬತ್ತಿದಪ್ಪುದು, ನಿಮಗಪಾಯ[1]ಮಪ್ಪುದೆಂದು ಪೇೞ್ವುದುಂ[1]; ಅಂತಪ್ಪೊಡೆ ನಿಮ್ಮಡಿ ನೀವೆಮ್ಮನೀಯಪಾಯಸ್ಥಳದಿಂ ಪೊಱಮಡುವುಪಾಯಮಂ ಮಾಡಿದಿರಪ್ಪೊಡೆ ನಿಮ್ಮ ಧರ್ಮದಿಂ ಸುಖಂಬಾೞ್ವೆವೆಂಬುದುಂ; ಕರಮೊಳ್ಳಿತ್ತಿಲ್ಲಿಗೊಂದು ಯೋಜನಾಂತರದೊಳೊಂದು ಮಹಾನದಿಯುಂಟಲ್ಲಿಗೆ ನಿಮ್ಮಂ ದಿವಸಗತಿಯಿಂದುಯ್ವೆನೆಂದೊಡಂಬಡಿಸಿ ಪೇೞ್ದು ಕಪಟತಪೋಧನಂಗೆ ಮೀನ್ಗಳಿಂತೆಂದುವು:—ತಮ್ಮಂ ನಂಬಿದರಂ ಸೊರೆಯ ಕಾಯ್ ಮುಂತಾಗಿ ನದಿಯ ತಡಿಯಂ ಸಾರ್ಚುವುದೆಂದೊಡೆ ನೀಂ ತಪೋವೃದ್ಧರುಂ ತ್ರಿಕಾಲದರ್ಶಿಗಳುಂ ಸಕಳಭೂತಂಗಳಂ [2]ಸಮನಾಗಿ[2] ಕಾಣ್ಬ ಕರುಣಾರಸಾರ್ದ್ರಹೃದಯರಪ್ಪುದಱಿಂ ನಿಮ್ಮಂ ನಂಬಿ ಬಂದಪೆವೆಂಬುದುಂ;— ಕರಮೊಳ್ಳಿತ್ತೆಂದು ನಂಬೆ ನುಡಿದೊಡಂಬಡಿಸಿ, ನಿಚ್ಚಲೊಂದೊಂದು ಮೀನಂ ಕರ್ಚಿಕೊಂಡು ಪೋಗಿ ಪಿರಿದಪ್ಪುದೊಂದು ಶಿಲಾತಳದ ಮೇಲಿಕ್ಕಿ ನಿಜಚಂಚುಪುಟದಿಂ ಶತಖಂಡಂಮಾಡಿ ತಿಂದು ಬೆಣ್ಣೆಯಂ ತಿಂದ ಬೆಕ್ಕಿನಂತೆ ಅಱಿಯಲೀಯದೆ ಮತ್ತೆಯುೞಿದ ಮತ್ಸ್ಯಂಗಳನೀತೆಱದೊಳ್ ತಿನುತಿರ್ದು, ಮತ್ಸ್ಯಮಾಂಸಂ ಸಮೆದತ್ತಿನ್ನೇನಂ ತಿಂಬೆನೆನುತ್ತಿರೆ; ಕರ್ಕಟಕಮಂ ಸಮೀಪಕ್ಕೆ ಕರೆದು—ಮಗನೆ!

ಪಾ— 1. ಸಮನಿಪ್ಪುದೆನೆ. ಗ ||   2. ನೀವಾಗಿ, ಕ || ಖ ||

ನೀಂ ಕರಂ ಗರ್ಭಸುಖಿ, ಬಿಸಿಲಾಗದನ್ನಂ ಬೇಗಂ ಬಾ, ನಿನ್ನನುಯ್ದಿರಿಸಿ ಬಱಿಕ್ಕೀಮೀಂಗಳನುಯ್ವೆನೆಂದೊಡೆ; —[1]ಏಡಿ[1]ಬರ್ದುಂ*ಕಿದೆನೆಂದು ಮುಂದೆ ನಿಲೆ; ನಿಜಕಂಠತಳಮಂ ಪತ್ತಿಸಿಕೊಂಡು ಶಿಲಾತಳಮನೆಯ್ದೆ ವರ್ಪುದುಂ; ಕರ್ಕಟಕನುಪಾಯನಿಪುಣಂ ನಾಲ್ದೆಸೆಯುಮಂ[2]ನೋಡಿ ಸದನನದೀತಟಾಕಸರೋವರಂಗಳನೊಂದುಮಂ[2] ಕಾಣದೆ ಮತ್ಸ್ಯಾಸ್ಥಿಮಯಮಾಗಿರ್ಪ [3]ಶಿಲಾತಲಮಂ[3] ನೋಡಿ ಪಾವಿನ ಪೇಳಿಗೆಯಂ ಬಿಟ್ಟು ನೋಡಿದ ಮರ್ಕಟನಂತೆ ಬೆಕ್ಕಸಂಬಟ್ಟು ಮೀವಿಶ್ವಾಸಘಾತುಕಂ ತನ್ನುಮಂ ತಿನ್ನದೆ ಮಾಣಂ, ಈಯುಪಾಯಕ್ಕೆ ವಂಚನೋಪಾಯ[4]ಮಾಪುದುಮಿಲ್ಲ, ಎನಗೆ[4] ಪರಿಚ್ಛೇದಮೇ ಕಾರ್ಯಮದೆಂತೆನೆ:—

ತನ್ನಂ ಕೊಲ್ವುದನಱಿದೊಡೆ ।
ಮುನ್ನಂ ತಾಂ ಕೊಲ್ಗೆ ಪಗೆವನಂ ಶಂಕಿಸದು ॥
ತ್ಪನ್ನಮತಿಯುಪ್ಪವಂ ಪೋ ।
ತನ್ನುಪ್ಪುದದಕ್ಕೆ ದೈವವಶದಿಂ ತುದಿಯೊಳ್ ॥ 138
ಅನಿಮಿಷಸಪತ್ನಬಕಕಂ ।
ಠನಾಳಮಂ ಭೀಮನೊತ್ತುವಂದದಿನೊತ್ತಿ ॥
ತ್ತನಿಮಿಷಸಪತ್ನಬಕಕಂ ।
ಠನಾಳಮಂ [5]ಪಱಿಯೆ[5] [6]ಕೋಡಿ[6]ನೊಳ್ ಕರ್ಕಟಕಂ ॥ 139

ಅಂತು ಕರ್ಕಟಕಂ ನಿಜಕರ್ಕಶಕರ್ತರಿಗ್ರಹಣದಿಂ ಬಾಳಮೃಣಾಳನಾಳೋಪಮಬಕಕಂಠನಾಳಮಂ ಕತ್ತರಿಸಿತ್ತು. ಅದಱಿಂ,

ಶ್ಲೋ॥ “ಭಕ್ಷಯಿತ್ವಾ ಬಹೂನ್ಮತ್ಸ್ಯಾನುತ್ತಮಾಧಮಮಧ್ಯಮಾನ್ ।
ಅತಿಲೌಲ್ಯಾದ್ಬಕಃ ಕಶ್ಚಿನ್ಮೃತಃ ಕರ್ಕಟ[7]ಸಂ[7]ಗ್ರಹಾತ್ ॥” ೪೯

ಪಾ— 1. ಎಸಡಿ. ಖ ॥ 2. ಆಯ್ದು ತೊಱೆಕೆರೆಗಳುಮನೆಲ್ಲಿಯುಂ. ಗ ॥ 3. ಉಪಲಾಗ್ರಮಂ. ॥ 4. ಮನೆಸಗವೇೞ್ಕುಂ. ಗ ॥ 5. ಕಡಿಯೆ. ಕ ॥ 6. ಲಿರವಿ. ಖ ॥ 7. ಕ. ಕ ॥

[ಟೀಕು— ಪಿರಿದುಂ ಲಂಪಟನಪ್ಪೊಂದಾನೊಂದು ಬಕನುತ್ತಮಮಧ್ಯಮಾಧಮಂ ಗಳಪ್ಪ ಮೀಂಗಳಂ ದಿನಕ್ರಮದಿಂ ತಿಂದುದಲ್ಲದೆ ಬಂದೆಸಡಿಯುಂ ತಿಂಬೆನೆಂದು ಕೊಂಡು ಯುತ್ತಮವಿರಲಾಯೆಸಡಿ ತನ್ನ ಗೋಣನಿಱಿಂಕಿಕೊಂದುದು.]

(೩ ನೆಯ ಕಥೆಯ ಶೇಷ.) [೪

ಅಂತಾಬಕನಿಂದಂ ಅತಿ[1]ಚಪಳ[1]ನಪ್ಪ ಸರ್ಪಂಗಮುಪಾಯಮುಪ್ಪುಪಾಯಮಂ ನಿನಗೆ ಪೇೞ್ದಪೆನೆಲ್ಲಿಯಾನುಮೊಂದು ಕನಕಸೂತ್ರಮಂ ತಂದಾಸರ್ಪನಿರ್ಪ ಪುತ್ತಿನೊಳಿಕ್ಕಿದೊಡೆಯಾತುಡುಗೆಯೊಡೆಯರೊಡವೆಯ ಕಾರಣಮಾಗಿ ಪುತ್ತನಗುೞ್ದು ಪಾವಂ ಕೊಲ್ವರೆನೆ— ಅಂತೆಗೆಯ್ವೆನೆಂದಾವಾಯಸಂ ಪೋಗಿ ತೀರ್ಥಸ್ನಾನಾರ್ಥಂ ಬಂದ ನೃಪವಿಲಾಸಿನಿಯರ್ ತುಡುಗೆಯಂ ಕೞಲ್ಚಿ ತಡಿಯೊಳ್ ಬೈತಿಟ್ಟಿರಲವಱೊಳಗೊಂದಂ ಕರ್ಚಿಕೊಂಡಾಕಾಶಮಾರ್ಗಕ್ಕೆ ನೆಗೆಯಲಾತುಡುಗೆಯ ಕಾಪಿನವರ್ ಬೆನ್ನನೆ ಬರೆವರೆ; [೧೨

ಅತಿಶಯಕಾಂಚನಸೂತ್ರಾಂ ।
ಚಿತಚಂಚಚ್ಚಂಚು ಮೆಲ್ಲಮೆಲ್ಲನುರಗೇಂದ್ರೋಪ ॥
ಸ್ಥಿತಭೂರುಹಮಂ ಸಾರ್ದುದು । [೧೫
ಸುತವಿರಹೋದ್ರೇಕಜನಿತಶೋಕಂ ಕಾಕಂ ॥140

ಅಂತಾಕಾಗೆಯುಂ ತುಡುಗೆಯೊಡೆಯರ್ ತನ್ನನೆಯ್ದೆ ವರಲೊಡಂ ವಿಷಧರಂಗೆ ವಿಷಮನಿಕ್ಕುವಂತೆ ಪುತ್ತಿನೊಳಗಾಕನಕಸೂತ್ರವನಿಕ್ಕುವದುಮವಂದಿರ್ ಪುತ್ತನಗುೞ್ದು ಪಾವಂ ಕೊಂದರ್. [೧೯

ಅದಱಿಂದುಪಾಯನಿಪುಣನಪ್ಪಂಗೆ ಆವಕಾರ್ಯಮುಂ ಸಾಧ್ಯಮಲ್ಲದಿರದೆನೆ—ಕರಟಕನೆಂದಂ:—ಎನಿತುಪಾಯಂ (?) ದುರ್ಬಲಂಗಂ ಅಸ

ಪಾ— 1, ಲಂಪಟ, ಗ ॥

ಹಾಯಂಗಂ ಪ್ರತಿಕೂಲಂಗೆಯ್ದನಪ್ಪವಂಗಮಾವ ಕಜ್ಜಮುಂ ಬೆಜ್ಜೆಯಿಲ್ಲದ ಬೇನೆಯಂತೆ ತೀರಲಱಿಯದೆನೆ—ದವನಕನೆಂದಂ:—ಅಂತಲ್ತು ಸಮ್ಯಗುಪಾಯನಿಪುಣನಪ್ಪವಂಗೆಲ್ಲಮನುಕೂಲಮಪ್ಪುದು, ಬಂದುಂ ಸಂದೆಯಮಿಲ್ಲದೆಂತೆನೆ:— [೯

ಶ್ಲೋ || "ಬುದ್ಧಿರ್ನವಿದ್ಯತೇ ಯಸ್ಯ ಬಲಂ ತಸ್ಯ ಕರೋತಿ ಕಿಂ |
ಮಹಾಬಲೋಪಿ ಪಂಚಾಸ್ಯಃ ಶಶಕೇನ ನಿಪಾತಿತಃ ||"೫೦

[ಟೀಕು— ಬುದ್ಧಿಯಿಲ್ಲದಂಗೆ ಶಕ್ತಿಯಿರ್ದುಂ ಪ್ರಯೋಜನವಿಲ್ಲ. ಅದೆಂತೆನೆ:—ಬಲವಂತನಪ್ಪದೊಂದು ಸಿಂಹವಂ ಮೊಲಂ ಕೊಂದುದು.]

ಎಂಬೀಕಥೆಯಂ ನೀಂ ಕೇಳ್ದುದಿಲ್ಲಕ್ಕುಮೆನೆ—ಕರಟಕನದೆಂತೆನೆ—ದವನಕಂ ಪೇೞ್ಗುಂ:— [೧೦

## ೯. ಮೊಲಂ ಸಿಂಹಮಂ ಕೊಂದ ಕಥೆ.

ವೃಕಭಲ್ಲೂಕಸುಗಂಡಚಂಡಹರಿಣಶ್ರೇಣೀರುರೂ[1]ರೂಗ್ರ[1]ಶ |
ಲ್ಯಕಸಾರಂಗಶಶಾವಳೀಶರಭಗೋಲಾಂಗೂಲಮಾಲಾಹರಿ ||
ಪ್ರಕರಾಭೀಳಸೃಗಾಳಜಾಳಮದವಚ್ಛುಂಡಾಲಶಾರ್ದೂಲಕಾ |
ಕಕುಳವ್ಯಾಳಕರಾಳವಿಸ್ಫುರದರಣ್ಯಾನೀಮಹೀದೇಶದೊಳ್ ||141 [೧೫

ದುರ್ಧರವಿಕ್ರಮನುರುತರ |
ದೋರ್ದಂಡಸಹಾಯ[2]ನಿರ್ಪುದೆಂದು[2]ಮಜೇಯಂ ||
ನಿರ್ದಯನನುಪಮಸಖಮುಖ |
ನಿರ್ದಾರಿತವನ್ಯನಾಗ[3]ಸಂಘಂ ಸಿಂಗಂ[3] ||142 [೧೯

ಆಮೃಗಾಧಿರಾಜಂ ಸಾಮಜವೆಲ್ಲವಂ ತವೆ ಕೊಂದು ತಿಂದು ಬೞಿಕ್ಕಮಾಹಾರಂಬಡೆಯದಡವಿಯ ಮೃಗಂಗಳನೆಲ್ಲಮ[4]ನಿಂ[4]ಬಿಟ್ಟು ತಿನು

ಪಾ— 1. ರೌದ್ರ. ಕ || 2. ನಪ್ಪದೊಂದು, ಕ || 3. ಸಿಂಹಂಸಿಂಹಂ. ಕ || ಖ || ಗ ||
4. ಮುಂ. ಕ ||

ತ್ತಿರೆ; ಮೃಗಂಗಳೆಲ್ಲಮೊಂದಾಗಿ ತಮ್ಮೊಳಾಳೋಚನಂಗೆಯ್ದು ಮೃಗೇಂ
ದ್ರನಲ್ಲಿಗೆ ಬಂದು ಪೊಡೆವಟ್ಟು,

ಬಿನ್ನಪಮೀಮೃಗನಿವಹಂ ।
ನಿನ್ನಾಜ್ಞೆ[1]ಯೊಳರ್ಕುಮಿೀಮಹಾಟವಿಯೊಳ್[1] ಶಾ ॥
ಯೆರ್ಱೆನ್ನತ ಕಾವುದು ನೀನೆ । [೫
ಮ್ಮನ್ನಯುವಿದ ಧರ್ಮಮಾರ್ಗದಿಂ ಗಜವೈರೀ ॥143

ಎಂದು, ದೇವಾ! ನೀವಿನಿತು ಕಾಲವೆಮ್ಮಂ ಪೊರೆಯಲಾಯ್ತೀಗಳ್
ನಿಮಗೆಡರಾದಲ್ಲಿ ನಾವೆಲ್ಲಮಿರ್ಪೊಡೇತರ್ಕೆ ಬಾೞ್ತೆ, ನಿಮಗೆ ಕರಿಗ
ಳ್ ದೊರೆಕೊಳ್ವನ್ನಂ ನಿಚ್ಚಲೊಂದೊಂದು ಮೃಗವನಟ್ಟುವೆವದಂ ಕೈ
ಕೊಂಡಿಂತು ನಡೆವಿರಪ್ಪೊಡೆ ನಿರ್ವಹಿಪೆವಾಗದೊಡೋಡಿ ಪೋಪೆವೆನೆ;
ಮೃಗಾಧಿರಾಜನಂತೆಗೆಯ್ವೆನೆಂದೊಡಂಬಟ್ಟು, ಬಾಯಾಳೆಂಬ ಬಳ್ಳುವಂ
ಬಾರಿಕನಂ ಮಾಡಿ, ಪಲಕಾಲಂ[2]ಸಲುತು[2]ಮಿರ್ಪುದುಂ; ಬಂದು ದಿನಮಾ
ಸಿಂಗಕ್ಕೆ ಮಾರಿ ಬರ್ಪಂತೆ ದೀರ್ಘಕರ್ಣನೆಂಬ ಮೊಲಕ್ಕೆ ಬಾರಿ ಬ
ರ್ಪುದುಮಾಮೊಲನುಪಾಯಕುಶಲನಪ್ಪುದಱಿಂ ಕಾಲಜ್ಞಾನಮುಂ ಕಾಲ
ಜಯಮುಮಂ ಬಲ್ಲ ಪರಮಯೋಗಿಯಂತೆ ತನಗಾಸನ್ನಕಾಲಾಪಾಯ
ಕ್ಕೆ ಜಯೋಪಾಯಮಂ ಮನದೊಳಗೆ ಬಗೆದು, [೧೬

ವಾಕ್ಯಂ॥ "ನಾಶಕ್ಯಂ ಬುದ್ಧಿಮತಃ ಪುರುಷಸ್ಯ ॥" ೫೧

ಎಂಬ ವಾಕ್ಯೋಕ್ತಿಯಿಂ ಬುದ್ಧಿವಂತರ್ಗೆ ಕೇಡಿಲ್ಲೆಂದು ನಿಶ್ಚೈಸಿ
ಕೊಂಡು ದಿನಾಂತಂಬರೆಗಂ ತಡೆದು, ಬೞಿಕ್ಕೆಲ್ಲಿಯುಂ ನಿಲ್ಲದೆ, ಪೆಱಗಂ
ನೋಡುತ್ತುಂ ಭಯಾತುರನಂತೆ ಬಂದುಂ, ಮರಣಭ್ರಾಂತಿಯಂ ಚಿಂತಿಸಿ
ಬರುತ್ತುಂ, ತೊಟ್ಟನೆ ಮುಂದಿರ್ದ ಪುರಾಣಕೂಪಮಂ ಕಂಡು, ತೃಷೆ
ಯಿಂ ನೀರ್ಗುಡಿಯಲೆಂದು ನೋಡಿ, ಪಿಱಿ ಇೞಿಯಲುಂ ಬಾ

ಪಾ—1. ಯಿನಿತುಮಿೀಮಹಾರಣ್ಯದಿ. ಕ ॥ 2. ಸಲವು. ಕ ॥

ರದ ಸ್ವಚ್ಛಜಲದೊಳ್ ತನ್ನ ಪ್ರತಿಬಿಂಬಮಂತುಂ ಬಿಂಬಿಸುವುದಂ ಕಂಡು, ಈಸಿಂಹಮನಿಲ್ಲಿಯೆ ಕೊಲಲುಂ ಗೆಲಲುಂ ಸಾಲ್ಗುಮೆಂದುತ್ಸಾಹದಿಂದು ಪಾಯನಿಪುಣನಪ್ಪ ಶಶಕನಾಸಿಂಹಮನಿಲ್ಲಿ ತಂದು ಕೊಲ್ವೆಂ, ಕೊಲಲಾ ಱದಂದು, “ಸಾವಂಗೆ ಸಮುದ್ರಂ ಮೊಱಕಾಲುದ್ದಂ” ಎಂಬಂತೆ [1]“ಕಿ ರ್ಚಿನೊಳ್ ಬಿೞ್ದಂಗೆ ಸಾವು ತಪ್ಪದು,” ಎಂಬಂತೆ[1] ತನಗೆ ಸಾವು ತಪ್ಪ [2]ದು; ಅವಂ ಮುನಿದು ಇರ್ಮುಡಿಸಿ ಕೊಂದಪನೋ? ಭಯಮೇಕೆನ ಗಿಲ್ಲಿ.[2] [೩

ಶ್ಲೋ|| “ಕ್ಷಣವಿಧ್ವಂಸಿನಿ ಕಾಯೇ ಕಾ ಚಿನ್ತಾ ಮರಣೇ ರಣೇ ||” ೫೦

[3]ಎಂಬ ವಾಕ್ಯದಿಂ ಪರಮಯೋಗಿಯಂತೆ ತನಗಾಸನ್ನಕಾಲಜಯೋ ಪಾಯಮಂ ಮನದೊಳ್ ಬಗೆದು, ದಿನಾಂತಂಬರೆಗಂ ತಡೆದು, ಬೞಿಕೆ ಲ್ಲಿಯುಂ ನಿಲ್ಲದೆ ಪೆಱಗಂ ನೋಡುತ್ತುಂ ಭಯಾತುರನಂತೆ ಬಂದು[3]

ಭ್ರುಕುಟಿಪುಟರಕ್ತನೇತ್ರನ ।
[4]ನಕಾಲಕಾಲೋಗ್ರನಂ ಭಯಂಕರದಂಷ್ಟ್ರ[4] ॥
[5]ಪ್ರ[5]ಕರಾಳವದನನಂ ದೀ ।
ರ್ಘಕರ್ಣನೆಯ್ದಿದನರಣ್ಯಮೃಗವಲ್ಲಭನಂ ॥ 144 [೧೪

ಅಂತೈದಿವಂದ ದೀರ್ಘಕರ್ಣನಂ ಕಂಡು ಜಠರಾನಳಶಿಖಾಕಳಾಪ ದಂದಹ್ಯಮಾನಮಾನಸಂ ಸಿಂಗಂ ಮುಳಿದೇನೆಲವೊ! ನೀನಿನಿತು ಪೊ ೞ್ತಾರ ಬಲದೊಳ್ ತಡೆದೆ? ಈಗಳ್ ಬರುತಡಿಗಡಿಗೆ ಪೆಱಗಂ ನೋ ಡುತ್ತುಂ ಭಯಾತುರನಾಗಿ ಬಂದೆ, ನಿನ್ನಂ ಕಾವನೆಂಬನುಳ್ೊಡೆ ತೋ ಱವನಂ ಮುನ್ನಮಾಪೋಶನಂಗೊಂಡು ಬೞಿಕ್ಕೆ ನಿನ್ನಂ ಪ್ರಾಣಾಹುತಿ

---

ಪಾ—1. ಕಿರ್ಚಿನೊಳ್ ಬಿೞ್ದು ಸಾವೆನೆಂದು ಕ || ; ಕರ್ಚಿದಂಬೆಂಕಯೆಂಬಂತೆ. ಖ ||
2. ದೆಂದುನಿಶ್ಚೈಸಿ. ಕ || 3. ಎಂದುಪುರಾಣವಾಕ್ಯಮುಂಟು. ಅದು ಕಾರಣದಿಂದೆನಗೆ ಭಯಂಬೇಡ, ಈಯೆಡೆಯೊಳ್ ಮಹಾದೋಷಂ ನೋಡಿ ನೋಱಿಪ್ಪೆನೆಂದು ಬಗೆದು. ಖ ||
4. ನಖಮುಖಕಾಲಾಗ್ನಿಭಯಂಕರಖರದಂಷ್ಟ್ರ. ಕ || 5. ತಿ. ಕ || ; ವಿ. ಖ ||

ಗೆಯ್ವೆನೆಂಬುದುಂ; —ದೇವ! ನಿಮ್ಮ ಕೋಪಮುಂ ಪ್ರತಾಪಮುಮೆಮ್ಮಂದಿಗರಪ್ಪ ಬಡ[1]ವುಗಳ್ಗ[1]ಲ್ಲದೆ ಪೆಱರ್ಗಿಲ್ಲ. ಆದೊಡಾಂ ಬರ್ಪಗಳೊಂದು ಸಿಂಹಂ ಬರಲೀಯದೆ ತಡೆದಡ್ಡಂ ಬಂದೆನ್ನ ಬರವಿನ ವೃತ್ತಾಂತಮಂ ಬೆಸಗೊಂಡಿಂತೆಂದುದು:—

ತುಂಗಗಜಂಗಳ್ಗಳ್ಕಿ ಮೃ ।
ಗಂಗಳನಾ[2]ಯ್ದು[2]ಱಿಸಿ ತಿಂಬುದಪ್ಪೊಡೆ ಪೆಱತೇಂ ॥
ಸಿಂಗಮದಲ್ಲದು ಪೋಗಾ ।
ಸಿಂಗಂ ತಾಂ ಗಾವಸಿಂಗಮೆಂದುದು ನಿನ್ನಂ ॥ 145

ಎಂದು ನಿಮ್ಮಡಿಯನನೇಕಪ್ರಕಾರದಿಂ ಜಱೋಡಾಡಿ ಬಯ್ಯುತೆನ್ನಂ ಬರಲೀಯದೆ ಕಾಡುತ್ತಿರ್ದ ಕಾರಣದಿನಿನ್ನೆಗಂ ತಡೆದೆನೆಂದು ಪೇಳ್ವುದುಂ; ಕೇಸರಿಯಾಸುರಂ ಮುಸಗಿ ಕ್ಷುಧಾಗ್ನಿಯೊಡನೆ ಕೋಪಾಗ್ನಿ ಪೆರ್ಚೆ ಮೊಲದ ಮಾತಿನ ಬಲೆಯೊಳ್ ಸಿಲ್ಕಿ ಕಡುಮುಳಿದು, ತನ್ನನಿಂತು ಕಡೆನುಡಿದ ಸಿಂಗಮಿರ್ಪೆಡೆಯಂ ತೋಱೆನೆ; ದೀರ್ಘಕರ್ಣನಂತೆ ಗೆಯ್ವೆನೆಂದು ಮುಂದಿಟ್ಟೊಡಗೊಂಡು ಬಂದತರ್ಕ್ಯಪರಾಕ್ರಮನಪ್ಪ ನಿಮ್ಮಂ ಮೆಚ್ಚದೆ ಮಚ್ಚರಿಸುವ ಸಿಂಹಮಿಲ್ಲಿರ್ದುದೆಂದು,

ತರಳ[3]ಸ್ಫಾಟಿಕಭಿತ್ತಿರು ।
ಚಿರಮಂ ತಾಂ[3] ತಾರಹಾರಶಶಿವಿಶದಾಂಭಃ ॥
ಪರಿಪೂರ್ಣಮುರುತರಮಂ ।
ಪುರಾಣಕೂಪಮನಗಾಧಮಂ ಭೀಕರಮಂ ॥ 146

ಅಂತಾಬಾವಿಯುಂ ತೋಱೆ,—ದೇವಾ! ನೋಡಿಮೆನಲೊಡಂ; ಕೋಪಾಂಧಂ ಕೂಪದೊಳಗಂ ನೋಡುವುದುಮಲ್ಲಿ ಪ್ರತಿಬಿಂಬಿಸಿದ ತನ್ನ [4]ರೂಪಮಂ ಮತ್ತೊಂದು ಸಿಂಗಮೆ ಗೆತ್ತು[4]

ಪಾ— 1. ವರ್ಗ. ಖ ॥ 2. ಜಣ. ಕ ॥ 3. ಸ್ಫಾಟಿಕಮಂ ಭಿತ್ತಿರುಚಿರಮುಂ. ಕ. ॥
4. ಪ್ರತಿಬಿಂಬಮಂ ಕಂಡು ಪೆಱತೊಂದು ಸಿಂಗಮೆಂದು ಬಗೆದು. ಗ ॥

ಕೋಪಾನಳನಳುರೆ ಮಹಾ।
ಕೂಪದೊಳಭವೈರಿ ಪಾಯ್ದು ಸತ್ತುದು ಘನಶಾ॥
ಯೋರ್ಪೇತನಾದೊಡಂ ಸಲೆ।
ಕೋಪಾತುರನಪ್ಪನಾವನುಂ ಬಿಳ್ದಪನೇ॥ 147

ಅಂತಾಸಿಂಹಮಂ ಬುದ್ಧಿಯ ಬಲದೊಳ್ ಮೊಲಂ ಮೊದಲಾಗಿ ಕೊಂದುದೆಂದೊಡೆ ವಿಶುದ್ಧಬುದ್ಧಿಯುಂ ನಿಶ್ಚಯಾತ್ಮಕನುಮಪ್ಪಾತನೆತ್ತಿಕೊಂಡ ಕಜ್ಜಂ ಪಲಸಿನ ಮರದಂತೆ [1] ಫಲಮನೆತ್ತಿಕೊಂಡು ಬರಲಕ್ಕುಂ.[1]

ಅದುಕಾರಣದಿಂ ಭಾವಿಸೆ।
ಸದಮಳಮತಿಯುತನೆನಿಪ್ಪವಂಗೆಂತುಂ ತೀ॥
ರದ ಕಜ್ಜಮುಂಟೆ ಬುದ್ಧಿಯೊ।
[2] ಳದೆವೆರಸಿದ ನರರಸಾಧ್ಯರಂ ಸಲೆ ಗೆಲ್ವರ್[2]॥ 148

ಎಂದಿಂತನೇಕದೃಷ್ಟಾಂತಂಗಳಂ ತೋಱಿ ನುಡಿದ ದವನಕನ ಮಾತಂ ಕರಟಕಂ ಕೇಳ್ದು ನೀನುಪಾಯಕುಶಲನುಂ ಕುಶಾಗ್ರಬುದ್ಧಿಯುಮಪ್ಪುದರ್ಕೇನುಂ ಸಂದೆಯಮಿಲ್ಲ. ತಡೆಯದೆ ನೀನೆತ್ತಿದ ಕಜ್ಜದ ಕಡೆಯನೆಯ್ದಿಸೆಂಬುದುಮಂತೆಗೆಯ್ವೆನೆಂದು,

(ಪೃಥ್ವೀ ವೃತ್ತಂ)

ಶಠಪ್ರಕೃತಿ ನಿರ್ಗುಣಂ ಸಕಲಧರ್ಮಭೂಜಾವಳೀ।
ಕುಠಾರ[3] ನಿರದೆ[3] ಯ್ದಿದಂ ದವನಕಂ ಮೃಗಾಧೀಶನಂ॥
ಕಠೋರನಖರಾಹತದ್ವಿರದಕುಂಭಪೀಠಸ್ಥಳೀ।
ಲುಠದ್ರುಧಿರದಾರುಣೋಲ್ಲಸಿತಕೇಸರೋದ್ಭಾಸಿಯಂ॥ 149

---

ಪಾ—1. ಫಲಮನೆ ಕಾಣಲಕ್ಕುಂ. ಗ ॥ ಖ ॥ 2. ಳಿದೆಕರಸುರರನರೆ, ಗ ॥ ; ಳಿದೇವರಸುರನರರ, ಕ ॥ 3. ನವನೆ. ಖ ॥

ಅಂತೆಯಿದ್ದು ಪೊಡೆಮಟ್ಟು ಸಮುಚಿತ[1]ಸ್ಥಾ[1]ನದೊಳ್ ಕುಳ್ಳಿರ್ದು ತಲೆಯಂ ಬಾಗಿ ನೆಲನಂ ಬರೆಯುತ್ತಿರ್ದ ದವನಕನ ಕೃತಕವೇಷಮಂ ಕಂಡು ಪ್ರಾಕೃತವೇಷಮೆಂದು ನಂಬಿ ಪಿಂಗಳಕನಿಂತೆಂದಂ:—ಏಂ ದವನಕ! ನೀನಿಂತು ಚಿಂತಾಕ್ರಾಂತನುಂ ಭ್ರಾಂತಚಿತ್ತನುಮಾಗಿರ್ಪುದಾವ ಕಾರಣಂ, ಪೇಳೆನೆ—ದವನಕನಿಂತೆಂದಂ:— [೫

ದೇವ ಸರಭಸದಿನೀಸಂ।
ಜೀವಕನೆಂಬೆತ್ತು ಕೆಲೆದೊಡಾಧ್ವನಿಗೊಂದಂ॥
ಭಾವಿಸದೆ ನೀಂ ಭಯಂಬ।
ಟ್ಟೀವನಮಂ ಬಿಟ್ಟು ಪೋಪೆನೆಂಬುದುಮಾಗಳ್ ॥ 150

ಅಂ ನಿಮ್ಮಡಿಯ ಭಯಮಂ ಕಳೆಯಲೆಂದಾಮಹಾಸತ್ತ್ವಸಂಪನ್ನನಂ ನಿಮ್ಮೊಳ್ ಕೂಡುವುದುಂ; ಕೂಡಿದೊಡಾಪಾಪಕರ್ಮಂ ಪೊಲೆಗೆಳೆಯುಂತೆಯುಂ, ಶಾಂತಿಗೆಯ್ಯೆ ಬೇತಾಳಂ ಮೂಡಿದಂತೆ ತಾಂ ಜಾತಿಯೊಳ್ ಪಶುವಪ್ಪುದಱಿಂ ಮೊಱೆಯುಂ ಧರ್ಮಮುಮನಱಿಯದಾಮೂಢಂ ನಿನ್ನ ರಾಜ್ಯಕ್ಕಾಸೆವಟ್ಟು ನಿನ್ನಂ ಕೊಂದಪೆನೆಂದು ಸಮುಕಟ್ಟುತ್ತಿರ್ದಪನದನಾನಱಿದೆನಪ್ಪುದಱಿಂ[2]ದಿಲ್ಲಿ ಕರ್ತವ್ಯಮಾವುದೆಂದು[2] ಚಿಂತಿಸಿದಪೆನೆಂದು ಬಿನ್ನಪಂಗೆಯ್ವುದುಂ; ಪಿಂಗಳಕನಿಂತೆಂದಂ:— [೧೬

ಅನುರಕ್ತಂ ಭ[3]ಕ್ತಂ ಹಿತ[3]।
[4]ನೆನಗೀಗಳ್ ಜೀವಮಾಗಿ[4] ಸಂಜೀವಕನಿಂ॥
ಬೆನೆ ನಡಪುತಿರ್ದಪೆಂ ಮ।
ತ್ತಿನಿಸುಂ ವಿಪರೀತಮಪ್ಪುದಂ ಕಂಡಱಿಯೆಂ॥ 151 [೨೦

ಅಂತುಮಲ್ಲದೀಗಳೆನಗೆ ಅತ್ಯಾಸನ್ನವರ್ತಿಯಪ್ಪುದಱಿಂ ನಮ್ಮ ದುಷ್ಟಪರಿಗ್ರಹಂ ಕೆಮ್ಮನೆ ದ್ವೇಷಂಗೆಯ್ದು ತಾ[5]ನೆಲ್ಲ[5]ರಾಜಿದೆ ನಿನ್ನನು

ಪಾ—1. ತಾಸ. ಕ ॥ ಗ ॥ 2. ದೇಗೆಯ್ವನೆಂದು. ಗ ॥ 3. ಕ್ತಯುತಂ ಕ ॥
4. ಎನಗೀಗಳಿನಾಗೆತಾನೆ. ಗ ॥ 5. ವಂದಿ. ಗ ॥

ಪೇಕ್ಷಿಸಿದರವಂದಿರ ಮಾತಂ ಕೇಳಲುಂ ನೀಂ ಮನಂಗುಡಲ್ವೇಡೆಂದು ನುಡಿವುದುಂ; ದವನಕನಿಂತೆಂದಂ:—ನಾನಾವ ಕಜ್ಜವನಾದೊಡಂ ತ್ರಿಕಾಲಜ್ಞಾನಿಯ ಕಾಣ್ಕೆಯಂತೆ ಕಂಡುದಂ, ಸಮಸ್ತಶಾಸ್ತ್ರಶ್ರವಣಪರಿಣತಂ ಕೇಳ್ದ ನಿಶ್ಚಯಾರ್ಥದಂತೆ ಕೇಳ್ದುದನಲ್ಲದೆ ಜಾತ್ಯಂಧನಂತೆ ಪೆಱರ ಕಾಣ್ಕೆಯೊಳ್ ಕಂಡುದಂ, ಜಾತಿಬಧಿರನಂತನ್ಯರ ಕಿವಿಯೊಳ್ ಕೇಳ್ದುದಂ ನುಡಿವನಲ್ಲೆಂ: ದೇವರೆನ್ನ ಬುದ್ಧಿಯ ನೆಗೞ್ದ ಸಾಹಸಂಗಳುಮಂ ಪುರುಷಕಾರಂಗಳುಮನಱಿತುಮಱಿಯದಂತೆ ಪರಪ್ರೇರಕನುಮನವಿಚಾರಕನುಮಂ ಮಾಡಿ ನುಡಿದಿರ್. ಎಂತುಂ [೮

ವಾಕ್ಯಂ|| "ಯಃ ಸಂಧಿಪರಃ ದೋಷಾನ್ವೇತ್ತಿ ತಸ್ಯ ದೋಷಬಹುತ್ವಂ ಪ್ರಖ್ಯಾಪಯತಿ|| " ೫೨

ಎಂಬ ನೀತಿಯುನಱಿವೆನಪ್ಪುದಱಿಂದಾಂ ಕಂಡುಂ ಕೇಳ್ದುಂ ನುಡಿವೆನಲ್ಲದೆ ವೃಥಾಪರನಿಂದೆಗೆಯ್ವೆನಲ್ಲಂ. ಇದು ಸ್ವಾಮಿಕಾರ್ಯಮಪ್ಪುದಱಿಂದುಪೇಕ್ಷಿಸಿರ್ಪುದು ಅನುಜೀವಿಗಳ್ಗೆ ಗುಣಮಲ್ಲಂ. ಅದಱಿಂ ನುಡಿದಪೆನದೆಂತೆನೆ:—

ಸ್ವಾಮಿಹಿತನಪ್ಪವಂ [1]ಸ್ವ[1]| [೧೫
ಸ್ವಾಮಿಗೆ ಹಿತಮಪ್ಪ ಕಜ್ಜಮುಳ್ಳೊಡೆ ಪಿರಿದುಂ||
ಪ್ರೇಮದಿನಱಿಪುವುದಱಿಪದೊ|
ಡೀಮಾತಿಗಪರವಿರುದ್ಧಮಪ್ಪುದಮೋಘಂ||152

ಅಱಿದುದ[2]ನಾಳ್ದ[2]ನೊಳ್ಮಱಿಸಿ ಮಾಣ್ದಿರದೊಯ್ಯನೆ ಪೇೞದಾತನೇ|
ತೞಿ ಹಿತನೆಯ್ದೆ ಕೂರ್ಪವರ ಪೇೞ್ದುದನಿಂಬೆನೆ ಕೇಳದಾತನೇ|| [೨೦
ತೞಿವಿಭುಮಂತ್ರಿಯುಂನೃಪತಿಯುಂಬಗೆಗೊಂಡನುಕೂಲವೃತ್ತಿಯೊಳ್
[3]ನೆ[3]ಱೆದಿರೆ ಕೂಡುಗುಂ ನಿಖಿಲರಾಜ್ಯವಿಭೂತಿಗಳಾವ ಕಾಲಮುಂ||

ಪಾ—1, ಸು. ಗ || ನಾಣ್ಮ. ಕ || ಮೆ. ಕ || ಗ ||

ಹಿತನಪ್ಪ ಭೃತ್ಯನೆಂದುಂ।
ಪತಿಗಪಜಯಮಾಗದಂತು [1]ನೆಗ[1]ೞ್ವುದು ಪತಿ ದು॥
ರ್ಮತಿಯಾಗಿ ದುಷ್ಟಜನಸಂ।
ಗತಿಗೆೞಗಿದೊಡೆೞಗಲೀಯದಿರ್ಪುದವೋಘಂ॥154

ಎಂತುಂ ಪೂರ್ವೋಕ್ತಮಿಂತೆಂಬುದಲ್ತೆ — [೫

ಶ್ಲೋ॥ "ಯದಿಷ್ಟಂ ತಸ್ಯ ತದ್ಬ್ರೂಯಾದ್ಯಸ್ಯ ನೇಚ್ಛೇತ್ಪರಾಭವಂ।
ಏಷ ಏವ ಸತಾಂ ಧರ್ಮೋ ವಿಪರೀತಮತೋಽನ್ಯಥಾ ॥" ೫೭

[ಟೀಕು—ಆವನಾವನೊರ್ವಂಗೆ ಹೊಲ್ಲಹಮಂ ಬಯಸುವಾತನಾತಂಗನುಕೂಲವಾಗಿಯೆ ಪೇೞ್ವುದು; ಲೇಸಂ ಬಯಸುವಾತಂ ಅಕಾರ್ಯವನನುಕೂಲವಾಗಿ ನುಡಿಯಲಾಗದು.] [೧೦

ಎಂದಿಂತನುರಕ್ತನಪ್ಪ ಸದ್ಭೃತ್ಯಂಗಂ [2]ಸಚಿವಂಗಂ[2] ಪೇೞ್ದೀಗುಣಂಗಳನಾನಱವೆನಾಗಿಯುಂ ನೀಂ ಕಿಡೆ ಕಿಡಲುಂ ನೀಂ ಬಾೞೆ ಬಾೞಲುಮಿರ್ದೆನಾಗಿಯುಂ ಕಂಡ ಕಜ್ಜಮಂ ದೇವರ್ಗಱಯೆ ಬಿನ್ನಪಂಗೆಯ್ದೆನೆಂಬುದುಂ; ಪಿಂಗಳಕನಿಂತೆಂದಂ:—ನೀನೀಗಳ್ ನುಡಿದ ಮಾತಿನಿತುಮಾಪ್ತಂಗಂ ಹಿತವಂಗಂ ನುಡಿಯಲಪ್ಪುದಾದೊಡಮವಾಙ್ಮನಸಗೋಚರಮಪ್ಪಾತ್ಮತತ್ತ್ವಮುಂ ತತ್ತ್ವವಿಚಾರಪಾರಗರುಂ ಅನುಮಾನಪ್ರಮಾಣರುಮಾಗಿ ಕೈಕೊಂಡೊರ್ವರೊಂದನೆ ಕಂಡೆಂತುಂ ನಿಶ್ಚಯಿಸಲುಮೇಕವಾಕ್ಯರಾಗಲುಮಱದಪರಿಲ್ಲದಱಂ ಅಂತಪ್ಪಾತ್ಮತತ್ತ್ವಮನೆನಗಱಪಿದ ಸದಾಚಾರನುಂ ಸಾಧುವೇಷನುಂ ಸತ್ಪುರುಷನುಮಪ್ಪ ಸಂಜೀವಕನ ಗುಣಂಗಳುಮಂ ಪ್ರತ್ಯಕ್ಷಪ್ರಮಾಣಂಗಳನಾವಱದಿರ್ದಂ ನಮಗಾತಂ ತಪ್ಪುವನೆಂದು ನಿಶ್ಚೈಸಲ್ಬರ್ಕುಮೆ? ಎನೆ— ದವನಕಂ ಮುಗುಳ್ನಗೆನಗುತ್ತಿಂತೆಂದಂ:—

ಪಾ—1. ಪೇ. ಕ॥ 2. ಚಿವಸಂಗಂ. ಗ॥

ಶ್ಲೋ॥ "[1]ಅಭ್ರಾಂತಶ್ಚ[1]ನೃಪೋ ನಾಸ್ತಿ ಶ್ರೋತ್ರಿಯೋ ನಾಸ್ತಿ ಬುದ್ಧಿಮಾನ್।
ಅವಿದಗ್ಧಾಂಗನಾ ನಾಸ್ತಿ ಕಿರಾಟೋ ನಾಸ್ತಿ ನಿಶ್ಶಠಃ॥" ೫೪

[ಟೀಕು— ಮರುಳನಲ್ಲದರಸಿಲ್ಲ; ಬುದ್ಧಿಯುಳ್ಳ ಧಾಂದಸರಿಲ್ಲ; ಜಾಣೆಯಲ್ಲದ ಸ್ತ್ರೀಯಿಲ್ಲ; ಹುಸಿಯದ ವ್ಯವಹಾರಿಯಿಲ್ಲ.] [೪

ಎಂಬೀಶ್ಲೋಕಾರ್ಥಮುಂಟಪ್ಪುದಱಿಂ "ಪರಮಾಣು[2]ಪ್ರಮಾಣ[2]ನೊರ್ವ ಕ್ಷತ್ರಿಯನ ಮೇಲೆ ಪರ್ವತಪ್ರಮಾಣಪಂಚಶತಪಿಶಾಚಂಗಳಿರ್ಪುವು." ಎಂಬ ನಾಣ್ನುಡಿಯುಂಟು. [3]"ಅರಸುಮಾನೆಯುಂ ತಿರಿಪುವರಿಚ್ಚೆ"[3] ಎಂಬ ಲೋಕಗಾದೆ[4]ಯೇಕೆ[4] ಪುಸಿಯಕ್ಕುಂ? ಇದೆಲ್ಲಂ ಸಂಜೀವಕನೆಂಬ ಹಸುವಂ ತಂದು ನಿಮ್ಮೊಳ್ ಕೂಡಿದೆನ್ನ ಮರುಳ್ತನಮಲ್ಲದೆ ನಿಮ್ಮೊಳನಿತುಂ ದೋಷಮಿಲ್ಲ. ಅದಂತಿರ್ಕೆ. ಆತನನಾಂ ತಂದು ಕಾಣಿಸಿ ಕೂಡಿದಂದಿಂತೊಟ್ಟು ಇಂದುವರಮೆನ್ನಂ ಕರಂ ಮನ್ನಿಸಿ ನಡಪುತ್ತಿರ್ದು ಈಗಳುಂ ಎನ್ನಂ ತನ್ನಾತನೆಂದೇ ಬಗೆದೆನ್ನಂ ಕಟ್ಟೇಕಾಂತಕ್ಕುಯ್ದಿಂತೆಂದಂ:— [೧೩

ಆಪದ್ವಿನೀತನಂ ಧೃತ।
ಕೋಪನನಜ್ಞಾನಿಯುಂ ಕೃತಘ್ನನನೆಂದುಂ॥
ಪಾಪಿಯುನವಿಚಾರಿಯುನಿಂ।
ತೀಪಿಂಗಳಕನನಶೇಷದೋಷಾವಿಳನಂ॥ 155 [೧೨

ಇಂತಪ್ಪನನಾಳ್ದನೆಂ[5] ದೋಲಗಿ[5] ಪರ್ಗೆ ನಾನುಮೊಂದು ನೆವದಿಂದಾತನ ಕೈಯೊಳೇ ಸಾವಾಗ[6]ದೆ ಪೋಗದು, ಅವನಂ ನೀಂ ಮುನ್ನಂ ಶಾಂತನುಂ ಪಿರಿಯನುಮಾಗಿ ಪೇೞ್ದಿ, ಈಗಳಾತನ ಪುರುಷಾರ್ಥದ ಪುರುಳುಂ ಶಕ್ತಿಯುಳವುಂ ಕಲಿತನದ ಗುಣ್ಪುಂ ಪರಾಕ್ರಮದ ಬಿಣ್ಪುಂ[6] ಕರತಳಾ

ಪಾ—1. ಅಪಿಶಾಚೋ. ಗ॥ 2. ರೂಪ. ಕ॥
3. ಅರಸನ ಮನಮುಂ ಕಱುಗೂಸುಂ ತಿಳಿಪುವರಿಚ್ಚೆ. ಕ॥ ಗ॥
4. ಕ॥ ಗ॥ ಇಲ್ಲ. 5. ದೊಡಗಿ, ಕ॥
6. ದಿಠದಡಲ್ಲದೆನಗಾತನ ಪುರುಳಿಲ್ಲಂ. ಕ॥

ಮಳಕವಾಗಿರ್ದಪ್ಪುದು, ಆಹರಿಯನೊಂದು ನರಿಯಂ ಕೊಲ್ವಂತಶ್ರಮ[1]ದಿಂದೆ[1] ಕೊಂದು ಗಜಾದಿಮೃಗಗಣಮಂ ನಿರ್ಬಾಧೆಯಿಂ ನಿಶ್ಚಿಂತಮಿರ್ಪಂತು ಮಾಳ್ಪೆನೆಂದು ಮತ್ತಮಿಂತೆಂದಂ:—

ಅಸದೃಶಮೆನಿಪ್ಪ ಭವದೀ।
ಯಸತ್ತ್ವಮಂ ಬಗೆಯದಾತ್ಮಸತ್ತ್ವಮನೆ ಸಮ॥
ರ್ಥಿಸಿ ದೇವ ವೀರಭೋಜ್ಯಾ।
ವಸುಂಧರಾ ಎಂದು ನುಡಿದನಾವೃಷಭೇಂದ್ರಂ ॥ 156

ಮೃಗರಾಜನ ಶಕ್ತಿತ್ರಯ।
ದ ಗುಣ್ಪುಮಂ ಬಾಹುಬಲದ ತಿಣ್ಪುಮನಱಿದೆಂ॥
ಬಗೆಯೊಳ್ ಕೊಂದಾತನನಾ।
ಮೃಗರಾಜಶ್ರೀಯನಾವಗಂ ಕೈಕೊಳ್ವೆಂ ॥ 157

ಎಂಬಂ. ಅದಲ್ಲದೆಯುಂ,

ವೃಷಭೇಂದ್ರಸಂದಮಾಗಳ್।
ವಿಷಮತರಂ ಮುನ್ನಿನಂದಮಲ್ಲಂ ಬಗೆ[2]ಯಂ[2]॥
ವಿಷಧರವಲ್ಲಭಭೂಷಣ।
ವೃಷಭನುಮಂ ದೇವ ನಿಮ್ಮನೇಂ ಬಗೆದಪನೇ ॥ 158

ಸಕಲೋರ್ವೀತಳ[3]ಪೂಜ್ಯ[3]ಮಪ್ಪ ಭವದೀಯಪ್ರಾಜ್ಯರಾಜ್ಯಕ್ಕೆ ಕಂ।
ಟಕನಾದಂ ಕ್ರಮದಿಂದೆ ಸಂವರಿಸಿದಂ ಕ್ರೋಧಾದಿವರ್ಗಂಗಳಂ ॥
[4]ಸುಕರಂ[4] ಭಾವಿಸಿ ನೋಡೆ ದೇವ ಪೆಱತೇಂ ಸಂಜೀವಕಂ ದಾವಪಾ।
ವಕನಾದಂ [5]ಭವದಿಷ್ಟಸೇವಕಗಣಕ್ಕೇಂ ಪರ್ಚುವೇಂ ಮಂತಣಂ[5] ॥ 159

---

ಪಾ—1. ದೊಳಿಕ ॥ 2. ಯಲ್. ಠ ॥ ಗ ॥ 3. ಪುಣ್ಯ. ಕ ॥
4. ಪ್ರಕಟಂ. ಕ ॥ 5. ಭವದೀಯಸೇವಕಗಣಂಗಳ್ಗೆತ್ತು ತನ್ನಿಷ್ಟಮಂ.ಕ ॥, ಭವದಿಷ್ಟ...ಪಚ್ಚವೇಂ...ಖ ॥

ಕೇಸರಿಚಕ್ರವರ್ತಿ ಪೆಱತೇಂ ನಿನಗಲ್ತು ವಿರೋಧಿನಾಯಕ।
ತ್ರಾಸಕನೆಂಬ ಪೆಂಪನೊಳಕೊಂಡ ಹಿರಣ್ಯಕನಂ ಪರಾಕ್ರಮೋ॥
ದ್ಭಾಸಿಯನಾತ್ಮತೀಕ್ಷ್ಣನಖರಂಗಳನಾಸುರಮಾಗಿ [1]ಸೀಳ್ದ[1] ಪುಂ।
ಸ್ಕೇಸರಿಗಂ ಬಲಾಧಿಕನಸಾಧ್ಯತರಂ ನೆಗೞ್ವಿಂ ವೃಷಾಧಿಪಂ॥ 160

ವ॥ ಮತ್ತಂ ನಿನಗೆ ಶತ್ರುಮಿತ್ರೋದಾಸೀನರಾಗಿರ್ದವರ್ಗಳಲ್ಲಿಗೆ ತನ್ನ ಗುಪ್ತಚರರನಟ್ಟಿ ತನಗೆ ಮಾಡಿಕೊಳುತಿರ್ದಪನದೆಂತೆನೆ:— [೬

ವೃಕಶಾರ್ದೂಲವರಾಹಮುಖ್ಯರ ಮನಂಗೊಂಡಂ ಮಹಾಶ್ವಾಪದ।
ಪ್ರಕರಾಮಾತ್ಯರೊಳಂ ಗಜಾಧಿಪರೊಳಂ [2]ನಂಟರ್ತನಂ[2]ಗೊಂಡನ॥
ಪ್ರಕಟಂ ನೀತಿವಿರುದ್ಧಮಾ[3]ದೆಡೆ[3]ಯೊಳಂ ತಾನೆಂಬ ಸನ್ಮಂ[4]ತ್ರಿಯಿಂ[4]।
ವಿಕಳಂಮಾಡುವನಿಂತು ತೊಟ್ಟನೆ ಭವತ್ಸಪ್ತಾಂಗವಂ ಪುಂಗವಂ॥ 161

ವ॥ ಅದಲ್ಲದೆಯುಂ ದೇವರ್ ತನಗೆ ಸಮಾನಬಲರಪ್ಪುದಱಿಂ, ಸಮಬಲನೊಳಮಧಿಕಬಲನೊಳಂ ಯುದ್ಧಂ ನಿಷಿದ್ಧಂ ಜಯಂ ಸಂದೆಯಮೆಂದಱಿವನಪ್ಪುದಱಿಂ, ದೇವರ್ಗೆ ಬಲಕ್ಷಯಮಪ್ಪಂತು ಸಂಜೀವಕನುಮೇನಾನುಮೊಂದಂ ತಂತ್ರಿಸಿ ಸಂಸಾರಿಯುಂ ಪರಾಕ್ರಮಿಯುಮಪ್ಪನಿನಗೆ ದಿವ್ಯ[5]ಮುನಿಗೆ[5] ಪೇೞ್ವಂತೆ ನಿವೃತ್ತಿಧರ್ಮಮಂ ಪೇೞ್ದೊಡದನೇಕ್ಷತ್ರಧರ್ಮಮಂ ಪತ್ತುವಿಟ್ಟು ನೀಂ ನೆಗೞುತಿರ್ಪ ಕಾರಣಂ, [೧೬

ಬಿಡದೀಗಳ್ ಮೃಗಯಾನಿಮಿತ್ತಮೆಸೆವೀಕಾಂತಾರದೊಳ್ ವ್ಯಾಧರಾ।
ಗಡೆಯತ್ಯಾಗ್ರಹದಿಂ ಕೊಱೆಲ್ವರೞಿದಿತ್ತೀಗಳ್ ಮೃಗವ್ರಾತಮಿಂ॥
ಪಡೆ[6]ಮಾತೇಂ ಮದ[6]ಗಂಧಸಿಂಧುರಘಟಾಚಕ್ರಂ ಮನೋರಾಗದಿಂ।
ಕುಡಿಗುಂ ಸಂತತಮೀಗಳಂಜದೆ ಭವತ್ಕ್ರೀಡಾಸರೋವಾರಿಯಂ॥162

ಪಾ—1. ಸೀಳ್ದು. ಕ॥ ಗ॥ 2. ತಾಂ ನರ್ತನಂ. ಗ॥ 3. ಪೆಡೆ. ಖ॥ 4. ತ್ರದಿಂ. ಗ॥ 5. ಮುನಿ. ಖ॥ 6. ಮಾತುನ್ಮದ. ಖ॥

ಪಿರಿದಾಳಾಪದೊಳೇಂ ಮೃಗ।
ಪರಿವೃಢ ನೀಂ ನಂಬು ನಂಬದಿರ್ ಕೈಕೊಳ್ ಮೇಣ್ ॥
ಪರಿಹರಿಸು ಗಂಧಸಿಂಧುರ।
ವಿರೋಧಿ ನಿನ್ನಿಚ್ಛೆ ನಿನ[1]ಗಮಂ[1]ಜದೆ ಸುಡಿವೆಂ ॥ 163

ಹರಿಣೀನೇತ್ರೆಯುಮಬ್ಜಷಂಡಮುಖಿಯುಂ ಬಿಂಬೋಷ್ಠಿಯುಂ ಕುಂದಸೌಂ।
ದರದಂತೋಜ್ಜ್ವಲೆಯುಂ ಸುರೂಪವತಿಯುಂ ಶ್ಯಾಮಾಂಗಿಯುಂ ಭೂರಿಭೂ॥
ಧರತುಂಗಸ್ತನೆಯುಂ ಮಯೂರಕಚಭಾರಾಕ್ರಾಂತೆಯುಂ ದೇವ ಶಾ।
ಕ್ವರಚಕ್ರೇಶ್ವರನೀವನಪ್ರಮದೆಯುಂ ಕೈಕೊಳ್ಳದೇಂ ಮಾಣ್ಬನೇ ॥164

ಶ್ಲೋ ॥ "ಯಸ್ಮಿನ್ನೇ[2]ವಾಧಿಕಂ[2] ಭಾರಮಾರೋಪಯತಿ ಪಾರ್ಥಿವಃ।
ಸುತೇ ವಾ ತತ್ಕುಲೀನೇ ವಾ [3]ಸ್ವಲಕ್ಷ್ಮೀಂ[3] ಹರತೇ [4]ಸದಾ[4] ॥" ೫೫

[ಟೀಕು—ಅರಸಂ ತನ್ನ ಮಗನಲ್ಲಿಯಾದೊಡಂ ತನ್ನ ಕುಲದಲ್ಲಿಯಾದೊಡಂ ಆವನೊರ್ವನ ಮೇಲೆ[5] ರಾಜ್ಯಭಾರಮಂ ಹೊಱಿಸಿಯಿಹಂ, ತಾನವನೈಶ್ವರ್ಯವನಪಹರಿಸಪೇಕಾಗಿ ಮಾಡಿದವಂ.[5]]

ಮತ್ತಮದಲ್ಲದೆಯುಂ, [೧೪

ಶ್ಲೋ ॥ "ಮೂಲಭೃತ್ಯೇ[6]ಽಪರಾಧೇಽಪ್ಯಾಗತಂ ತು ನ [6]ಮಾನಯೇತ್।
ಪೂರ್ವಾಶ್ರಿತೇನ ರಾಜ್ಯಂ ಚ ಸಾಧ್ಯತೇ ನ ಪರೇಣ ಚ ॥" ೫೬

[ಟೀಕು—ಪಳೆಯನಾಗಿರ್ದವನ ಮೇಲಪರಾಧಮಾದೊಡಂ ಪೊಸತಾಗಿ ಬಂದಾತಂಗೆ ಸತ್ಕಾರಮಂ ಮಾಡಲಾಗದು; ತನ್ನ ಪೂರ್ವಾಶ್ರಿತನಲ್ಲದೆ ಮತ್ತೊರ್ವಂ ರಾಜ್ಯಮಂ ಸಾಧಿಸಲಱಿಯಂ.]

ಎಂಬ ನೀತಿಯುಂಟದಱಿಂದೀಸಂಜೀವಕನನಾಪ್ತನೆಂದು ಮಂತ್ರಿಯಂ ಮಾಡಿ ಕೊಂಡಾಡಿ ತೇಜವನಿತ್ತು ಮೂಲಬಲಮನೆಲ್ಲಮನವಜ್ಞೆ

ಪಾ—1. ಗೆಯಂ. ಕ ॥ ಗ ॥ 2. ಕಾಥಿಕಂ. ಕ ॥ ಗ ॥ 3. ಸಲ್ಲಕ್ಷ್ಯಂ. ಕ ॥
4. ಮನಃ. ಕ ॥ ಗ ॥ 5. ಯಾದೊಡಂ ರಾಜ್ಯಭಾರವನಿರಿಸಿಹನಾದೊಡಂ ಲೆಸಾಗುಣ ಯಾದಂಥ ಮನಸ್ಸನ್ನು ಕೂಡಿ ಅಪಹರಿಸುವುದು. ಕ ॥
6. ಪರಾಧೇಪಿ ನಾಗತಂ ಪ್ರತಿ. ಕ ॥ ಗ ॥

ಗೈದು ವಿರಕ್ತಪ್ರಕೃತಿಯುಮೇಕಾಕಿಯುಮಾದೆ. ಅದುಕಾರಣದಿಂ ನಿನ್ನ ರಾಜ್ಯಕ್ಕಾತನೇ [1]ನೇತೃ[1]ವಾದನೆಂದು ನುಡಿದ ದವನಕನ ನಿಷ್ಠುರಾಲಾಪಂಗಳ್ಗೆ ಪಿಂಗಳಕಂ ಕರಂ ಮುಳಿದಿಂತೆಂದಂ:—

ದವನಕ ನೀನೇನೆಂದೊಡ ।
ಮವಶ್ಯಮಾಂ ಮುಳಿವುದಿಲ್ಲಮಾಭದ್ರಮನಂ ॥ [೫
ಗೆ ವೃಷೋತ್ತಮಂಗೆ ಧರ್ಮೋ ।
[2]ಕ್ತವಿದಿತ[2]ಸಂಜೀವಕಂಗೆ ನಿಷ್ಕಾರಣದಿಂ ॥ 165

ಅದಱಿಂ ಸಂಜೀವಕನೆನ್ನನೇಗೆಯ್ದೊಡಮೊಳ್ಳಿತ್ತು, ನೀನುಸಿರದಿರೆಂಬುದುಂ; ಮತ್ತಂ ದವನಕನಿಂತೆಂದಂ:— [೯

ಶ್ಲೋ || "ಸ್ವಾಮಿಹಿತನಿಷ್ಠುರಾಣಾಂ ವಿಜ್ಞಾಪಯತಾಂ ಯಥೋಚಿತಂ ಕಾಲೇ ।
ಭೃತ್ಯಾನಾಂ ಯಸ್ತಸ್ಮಾನ್ಮೃತ್ಯುರಪಿ ಶ್ಲಾಘನೀ[3]ಯೋಸೌ || " ೫೭

[ಟೀಕು—ಭೃತ್ಯರೊಳಗಾವನಾನೊರ್ವಂ ವೇಳೆಯಲ್ಲಿ ಯಥೋಚಿತವಾಗಿ ಆಳ್ದಂಗೆ ಹಿತಮಪ್ಪ ನಿಷ್ಠುರಮಂ ಬಿನ್ನಪಂಗೆಯ್ದಪನಾಭೃತ್ಯನೊಡೆಯನಿಂ ಹೊಲ್ಲಹಂ ಬಂದೊಡಂ ಕೊಂಡಾಡಬೇಕು.]

ಎಂಬುದುಪಜೀವಿಗೆ ಗುಣಮೆಂದು ಪೇೞ್ದ ನೀತಿಯುಂಟಪ್ಪುದಱಿಂ ನೀನೆನ್ನಂ ಏಗೆಯ್ದೊಡಮಕ್ಕುಂ; ಭವದೀಯರಾಜ್ಯಲಕ್ಷ್ಮೀಗರ್ವಪರ್ವತಾರೂಢನುಂ ಬಲಾಧಿಕನುಮಪ್ಪ ಸಂಜೀವಕನಂ ಕಿಡಿಸುವುದೆ ನಯಂ. ಪೂರ್ವೋಕ್ತಮಿಂತೆಂಬುದಲ್ತೆ:— [೧೮

ಶ್ಲೋ || "ವಿರುದ್ಧಸ್ಯ ಚ ಭೃತ್ಯಸ್ಯ ದಂತಸ್ಯ ಚಲಿತಸ್ಯ ಚ ।
ಅಮಾತ್ಯಸ್ಯ ಚ ದುಷ್ಟಸ್ಯ ಮೂಲಾದುದ್ಧರಣಂ ಸುಖಂ || " ೫೮

[ಟೀಕು—ಪಗೆಯಪ್ಪ ಭೃತ್ಯನಂ, ಅಲುಗಾಡುವ ಹಲ್ಲಂ, ದುಷ್ಟನಪ್ಪ ಮಂತ್ರಿಯುಮಂ ಬೇರ್ವೆರಸಿ ಕೀೞ್ವುದೇ ಸುಖಂ.]

ಅದೆಂತೆನೆ:—

ಪಾ—1. ಧೂಮಕೇತುಂ. ಕ ||, ಕೇತುಂ. ಗ || 2. ಕ್ತವಿದಂ. ಖ || 3. ಯಸ್ಸ್ಯಾತ್. ಕ ||

ಶ್ಲೋ || "ಗಚ್ಛ ದೂರಮಪಿ ಯತ್ರ ನಂದಸೇ ಪೃಚ್ಛ ಬಾಲಮಪಿ ಬುದ್ಧಿವಿಸ್ತರಂ |
ದೇಹಿ ದೇಹಮಪಿ ಪಾತ್ರ ಆಗತೇ ಛಿಂದ್ಧಿ ಬಾಹುಮಪಿ ದುಷ್ಟಮಾತ್ಮನಃ ||"

[ಟೀಕು— ಎನಿತು ದೂರಮಾದೊಡಂ ತನಗೆ ಸುಖಮುಂಟಾದಲ್ಲಿಗೆ ಪೋಪುದು; ಚಿಕ್ಕಾತನಾದೊಡಂ ಬುದ್ಧಿವಂತನಲ್ಲಿ ಕಾರ್ಯವಂ ಕೇಳ್ವುದು; ಸತ್ಪಾತ್ರಕ್ಕೆ ಶರೀರವನಾದೊಡಂ ಕುಡುವುದು; ದೋಷಮುಳ್ಳೊಡೆ ತನ್ನ ತೋಳನಾದೊಡಂ ಕಡಿದು ಬಿಡುವುದು.]

ಎಂಬುದುಂ; ಅದೆಲ್ಲಮಂ ಕೇಳ್ದು ಪಿಂಗಳಕನಿಂತೆಂದಂ:—ಸಂಜೀವಕ[1]ನಪ್ಪೊಡೆ[1]ನಗೆ ಪರಮವಿಶ್ವಾಸಿಯುಂ ಸದ್ಭೃತ್ಯನುಮಾಗಿ[2]ರ್ಪನೆಂತು ತಪ್ಪುವನೆನೆ[2] ; ದವನಕನಿಂತೆಂದಂ:—[3]ಅವಂ[3]ಭೃತ್ಯಾಭೃತ್ಯನೆಂಬುದನೇಕಾಂತಿಕಮಪ್ಪುದದೆಂತೆಂದೊಡೆ:—

ಅರಸರನೋಲೈಸುವರಾ | [೧೦
ದರದಿಂ ಬಲಹೀನರಾಗಿ ಸೇವಕರೆಂದುಂ ||
ವರರಾಜ್ಯಂ ಶ್ರೀಸಹಿತಂ|
ದೊರೆಕಲ್ ಕೈಕೊಳ್ಳದಿರ್ಪರಾರೀ[4]ಜಗದೊಳ್[4]|| 166

ಅದಲ್ಲದೆಯುಂ, [೧೪

ಶ್ಲೋ || "ನ ಚಾಸ್ತಿ ಪುರುಷೋ ರಾಜ್ಞಾಂ ಯೋ ನ ಕಾಮಯತೇ ಶ್ರಿಯಂ|
ಅಶಕ್ತಾ ಶ್ರಿಯಮಾನೇತುಂ ನರೇಂದ್ರಂ ಪರ್ಯುಪಾಸತೇ ||" ೬೦

[ಟೀಕು—ಅರಸುಗಳ ಐಶ್ವರ್ಯವಂ ಬಯಸದಿರ್ಪ ಮನುಷ್ಯರೆಂದುಮಿಲ್ಲ; ಅಶಕ್ತರಪ್ಪವರ್ ಬಹಳೈಶ್ವರ್ಯವಂ ಪಡೆಯಬೇಕೆಂದರಸರನೋಲೈಸುವರ್.]

ಶ್ಲೋ || "ಅನೇಕದೋಷದುಷ್ಟೋಽಪಿ ಕಾಯಃ ಕಸ್ಯ ನ ವಲ್ಲಭಃ |
ಕುರ್ವನ್ನಪಿ ವ್ಯಲೀಕಾನಿ ಯಃ ಪ್ರಿಯಃ ಪ್ರಿಯ ಏವ ಸಃ ||" ೬೧

[ಟೀಕು—ಅನೇಕದೋಷದಿಂ ದುಷ್ಟಮಪ್ಪುದಾದೊಡಂ ಶರೀರಮಾರ್ಗೆ ಪ್ರಿಯಮಲ್ಲ [5]ಅವಿವೇಕಿಗಳ್ ಶತ್ರು ಕಪಟದಿಂ ಮಾಳ್ಪ ಹಿತಮಂ ಕಂಡು ಪ್ರಿಯಮೆಂದೇ ಬಗೆವರ್[5].]

---

ಪಾ—1. ನಪ್ಪವನೆ. ಗ || 2. ಯುಮಿರ್ಪನೆಂತುಂ ತಪ್ಪಲಾಱನೆನೆ. ಗ ||
3. ಕ, ಗ || ಇಲ್ಲ. 4. ಧರೆಯೊಳ್. ಚ || ಗ ||
5. ಅವುದಾನೊಂದು ಹೊಲ್ಲಹಮಂ ಮಾಡುತಿರ್ದೊಡಮದುವೆ ಪ್ರಿಯಮಾಗಿರ್ಪುದು. ಕ ||

ಪ್ರಿಯನಾದ[1]ನತ್ಯ[1]ವಶ್ಯಂ ।
ಪ್ರಿಯನಕ್ಕುಂ ದುಷ್ಟನಾಗಿಯುಂ ಸಲೆ ದುಷ್ಟಾ ॥
ಪ್ರಿಯ[2]ಮಾ[2]ಗಿಯುಂ ಶರೀರಂ ।
ಪ್ರಿಯಮಾದುದು ಸಕಲವಸುಮತೀತಳಕೆಲ್ಲಂ ॥ 167

ಅದಱಿಂ ಸಂಜೀವಕಂಗೆ ನೀಂ ಕೂರ್ಪೆಯುಪ್ಪ ಕಾರಣದಿಂದಾತನೆನಿತು ಪೊಲ್ಲಮೆಗೆಯ್ದನಾದೊಡಮೊಳ್ಳಿದನೆಂದು ನುಡಿದಪೆ. ಇದು ನಿನ್ನ ಅಜ್ಞಾನಮಲ್ಲದೆ ಪರಮಜ್ಞಾನಮಲ್ಲೆಂದು ಮತ್ತಮಿಂತೆಂದಂ:—

ಅನುಪಮಬಲಂ ಮಹಾಕಾ ।
ಯನೆನಗೆ ಪಿರಿದುಂ ಸಹಾಯನೆಂದೇನಾನುಂ ॥
ಮನದೊಳ್ ನೆನೆಮ್ವೈ ವೃಷಭೇಂ । [೧೦
ದ್ರನನದು ಕೂಡದು ಮೃಗೇಂದ್ರ ನಿನಗೀಪದದೊಳ್ ॥168

ಅದೆಂತೆನೆ:—

[3]ಶ್ಲೋ॥ "ಕಿಂ ಗಜೇನ ಪ್ರಮತ್ತೇನ ಕಿಂ ದುಷ್ಟೇನ ಚ ಮಂತ್ರಿಣಾ ।
ಕಿಂ ಧನೇನಾತಿದುಃಖೇನ ಕಿಂ ಮಿತ್ರೇಣ ಶಠೇನ ಚ ॥" ೬೦

[ಟೀಕು— ಸೊರ್ಕಿದಾನೆಯಿಂ, ದುಷ್ಟನಾದ ಮಂತ್ರಿಯಿಂ ಹಿರಿದು ದುಃಖವಹ ಧನದಿಂ, ಕಪಟಿಯಾದ ಮಿತ್ರನಿಂದೇಂ ಪ್ರಯೋಜನಂ ][3]

ಅದುಕಾರಣದಿಂ ಸಂಜೀವಕನಪ್ಪೊಡೆ ನಿಮ್ಮಡಿಗೊಂದು ಪ್ರಯೋಜನಮಾತ್ರ[4]ನಲ್ಲಂ[4]. ಎನ್ನ ಬಿನ್ನಪವನವಧರಿಸುವಿರಪ್ಪೊಡೆ ಪರಿಹರಿಸುವುದೆ ಕಾರ್ಯಮದಲ್ಲದಾಗಳ್ ಪಿರಿದುಮಪಾಯಮಕ್ಕುಮದೆಂತೆನೆ:—

ಪಾ— 1. ನವನ. ಕ ॥ ಗ ॥ 2. ನಾ. ಕ ॥ ಗ ॥
3. ಶ್ಲೋ॥ "ಕಿಂ ಗಜೇನ ಪ್ರಭಿನ್ನೇನ ಗಜಕಾರ್ಯಾಣಿ ಲಿಪ್ಸತಾ ।
ಸ್ಥಳೀವಾ ಯದಿ ನಿಮ್ನೇವಾ ಶ್ರೀಯರ್ಕೃತಗಜಸ್ತುವಃ ॥"
[ಟೀಕು—ಮದ್ದಱಿಯಿಂದೇಂ ಪ್ರಯೋಜನವಿಲ್ಲ ಕುಬ್ಜಯಾದೊಡಂ ತೆವರಾದೊಡಂ ಆನೆ ಮಾಡುವ ಕಾರ್ಯವನಾರುಂ ಮಾಡಲಱಿಯರ್; ಕೃತಕಕರಿಯಾದೊಡಮದೇ ಲೇಸು.]
4. ಮದಲ್ಲ. ಕ ॥ ಗ ॥

ಶ್ಲೋ|| "ಸತಾಂ ಮತಿಮತಿಕ್ರಮ್ಯ ಯೋಽಸತಾಂ ವರ್ತತೇ ವಶೇ |

ಅಚಿರಾತ್ ಸಸ್ಥಿತಸ್ಥಾನೇ ದ್ವಿಷತಾಂ [1]ವರ್ತತೇ ವಶೇ[1] ||" ೬೭

[ಟೀಕು— ಆವನೊರ್ವಂ ಸಜ್ಜನರ ಬುದ್ಧಿಯನತಿಕ್ರಮಿಸಿ ದುರ್ಜನರ ವಶದೊಳ್ ರ್ದಪಂ, ಆತಂ ತಾನಿರ್ದ ತಾವಿನಲ್ಲೆ ಹಗೆವರ್ಗೆ ಸಾಧ್ಯವಹಂ.]

ಅದಲ್ಲದೆಯುಂ, [೯

ಶ್ಲೋ|| "ಅಪ್ರಿಯಸ್ಯಾಪಿ ವಚಸಃ ಪರಿಣಾಮವಿರೋಧಿನಃ |

ವಕ್ತಾ ಶ್ರೋತಾ ಚ ಯತ್ರಾಸ್ತಿ ರಮಂತೇ ತತ್ರ ಸಂಪದಃ ||" ೬೮

[ಟೀಕು— ಅಪ್ರಿಯಮಾದೊಡಂ ಮೇಲೆ ಹಿತಕರಮಪ್ಪ ನುಡಿಯಂ ನುಡಿಯಬಲ್ಲ ವನುಂ ನುಡಿದುದನದಱಿದು ಕೇಳಬಲ್ಲವನುಮೆಲ್ಲಿಯುಂಟು ಅಲ್ಲಿ ಸಂಪತ್ತುಮಪ್ಪವು.]

ಮತ್ತಮಲ್ಲದೆಯುಂ, [೧೦

ಶ್ಲೋ|| "ಸುಲಭಾಃ ಪುರುಷಾ ರಾಜ್ಞಃ ಸತತಂ ಪ್ರಿಯವಾದಿನಃ |

ಅಪ್ರಿಯಸ್ಯ ಚ ಪಥ್ಯಸ್ಯ ವಕ್ತಾ ಶ್ರೋತಾ ಚ ದುರ್ಲಭಃ ||" ೬೯

[ಟೀಕು— ಅರಸಿಂಗೆ ಎಲ್ಲಾ ಹೊತ್ತು ಹಿತವಂ ನುಡಿವ ಮನುಷ್ಯರ್ ಹಲವರುಂಟು; ಅಪ್ರಿಯಮಾಗಿಯುಂ ಹಿತವಂ ನುಡಿವವನುಂ ಕೇಳ ಬಲ್ಲವನುಂ ದುರ್ಲಭಂ.]

ಎಂಬೀರಾಜನೀತಿಯ ಕ್ರಮಂಗಳನತಿ[2]ಕ್ರಮಿಸಿ ನಡೆವುದು[2]ಚಿತಮ ಲ್ಲೆಂದು ನುಡಿದ ದವನಕನ ಮಾತನಾಕರ್ಣಿಸಿ ಪಿಂಗಳಕನಿಂತೆಂದಂ:—

ಶರಣಾಗತನೆಂದತ್ಯಾ |
ದರದಿಂ ಕೈಕೊಂಡು ಮಗುಳ್ದು* ಸಂಜೀವಕನಂ ||
ಪರಮಸ್ನೇಹಿತನಂ ಪರಿ |
ಹರಿಸುವನಲ್ಲೆಂ ಸಮಸ್ತಗುಣಸಂಯುತನಂ || 169 [೨೦

ಅಂತುಮಲ್ಲದಾತಂಗಾ[3]ನೇತಱಿಂ[3]ಳಂ ಪೊಲ್ಲೆನಲ್ಲೆಂ, ಏನಾನುಂ ನಿ ರ್ಮಳಧರ್ಮಮಾರ್ಗಾನುವರ್ತಿಯಪ್ಪುದಱಿಂದೆನ್ನಂ ತನ್ನ ಸಹಧರ್ಮಿ

---

ಪಾ—1. ವಶಮಾಪ್ನುಯಾತ್. ಕ || 2. ಕ್ರಮಂಗೆಯ್ದು ನುಡಿವುದು. ಕ || ; ಕ್ರಮಂಗಳಿಂ ಕೈಕೊಂಡು ಮಗುಳ್ದು ಸಂಜೀವಕನಂ ಪರಮಸ್ನೇಹಿತನಂ ಪರಿಹರಿಸುವನಲ್ಲೆಂ, ಸಮಸ್ತಗುಣಾತಿಕ್ರಮಂಗೆಯ್ದು ನೆಗಱ್ದುದು. ಗ || 3. ನಾವ ತೆಱ. ಕ || ಗ ||

ಯಪ್ಪಂತು ಧರ್ಮೋಪದೇಶಂಗೆಯ್ದನಪ್ಪುದಱಿಂ ಗುರುಸ್ಥಾನನುಂ ಶರಣಾಗತನಪ್ಪುದಱಿಂ ಪುತ್ರಸ್ಥಾನನುಮಾಗಿರ್ಪಂ. ಅಂತಪ್ಪಾತಂಗೆಂತುಂ ತಪ್ಪುವನಲ್ಲೆಂ.

ಶ್ಲೋ॥"ಕ್ಷುದ್ರೇಽಪಿ ನೂನಂ ಶರಣಂ ಪ್ರಪನ್ನೇ ಮಮತ್ವಮುಚ್ಚೈಃ [1]ಶಿರಸಾಂ[1] ಸತೀವ॥"

[ಟೀಕು— ದುಷ್ಟನಾದೊಡಂ ಶರಣ್ಬೊಕ್ಕನಲ್ಲಿ ಮಹಾಪುರುಷರ್ಗೆ ಹಿಂದು ಸ್ನೇಹ ಮುಂಟಾಗಿಹುದು.]

ಸುರಪತಿ ಗೃಧ್ರನಾಗಿ ತಗುಳಲ್ ಮಱಿವೊಕ್ಕ ಕಪೋತನಂ ಕ್ಷಿತೀ।
ಶ್ವರಕುಲಚಕ್ರವರ್ತಿ ಶಿಬಿಯೆಂಬ ನೃಪೋತ್ತಮನಾತ್ಮಮಾಂಸಮಂ॥
ಸುರಪತಿಗಿತ್ತು ರಕ್ಷಿಸಿ ಪಯೋಧಿಪರೀತಧರಿತ್ರಿ ಬಣ್ಣಿಸು। [F
ತ್ತಿರೆ ತಳೆದಂ ಶರತ್ಸಮಯಚಂದ್ರಕರೋಜ್ಜ್ವಲರುಂದ್ರಕೀರ್ತಿಯಂ॥170

ಆತತಕೀರ್ತಿ ರಾಮನೃಪನಾತ್ಮಕುಲಾಂಗನೆಯಂ ಮನೋಜ್ಞೆಯಂ।
ಸೀತೆಯನುಯ್ದ ರಾವಣನ ತಮ್ಮನನಾತನ ಪಕ್ಷವೆನ್ನದೀ॥
ಭೂತಳವಾಸಿಗಳ್ ಪೊಗೞೆ ರಕ್ಷಿಸಿ ತುಂಗನಿಜಪ್ರತಾಪಮಂ।
ಸೇತುವರಂ ನಿಮಿರ್ಚಿ ತಳೆದಂ ಜಸಮಂ ರಘುವಂಶಮಂಡನಂ॥171

ಕುಲಿಶಾಸ್ತ್ರಭೀತಿಯಿಂ ಬರೆ। [೧೫
ಜಲನಿಧಿ [2]ಮುಂ ಮಱೆಗೆ[2] ವಂದ ಕುಲಪರ್ವತಸಂ॥
ಕುಲಮಂ ರಕ್ಷಿಸಿ ತಳೆದ।
ತ್ತುಲಘುತರಶ್ರೀಯನ[3]ಸಮ[3]ಗಂಭೀರತೆಯಂ॥ 172

ಎಂದು ನುಡಿದ ಪಿಂಗಳಕಂಗೆ ದವನಕನಿಂತೆಂದಂ:—ದೇವಾ! ಸಂಜೀವಕಂ ನಿಮ್ಮಡಿಯಾಧಿಪತ್ಯಮಂ [4]ಕೊಳಲ್ ಬಂದು[4] ಮುನ್ನಮೆ ತನ್ನ ಗರ್ಜನೆಗೆ ಭಯಂಬಟ್ಟೀನೆಲನಂ ಪತ್ತುವಿಟ್ಟು ಪೋಪಂತು ಮಾಡಿಪ್ಪೆನೆಂ

ಪಾ— 1. ಸಿತಸಾ. ಗ॥ 2. ಮುಂತುದಿಗೆ. ಗ॥ 3. ಮಲ. ಕ॥
4. ಕಳಯಲೆಂದು. ಕ॥ ಗ॥

ದು ಸಮಕಟ್ಟಿಕೊಂಡು ಬಂದಿರ್ದಂ. ಅದಲ್ಲದೆಯುಂ [1]ಅದು ಕಡೆಸಲ್ಲದಿ[1] ದೊರ್ಡೆ ಭಯಸ್ಥನಾಗಿ ಬಂದು ನಿಮಗೆ ಶರಣಾಗತನಾದಂ. ಅಂತುಮಲ್ಲದಾತಂ ಬಕವೇಷಿಯುಂ ಬದ್ಧದ್ವೇಷಿಯುಂ ಬುದ್ಧಿವಂತನುಮಪ್ಪುದಱಿಂ

ಶ್ಲೋ|| "ಸ್ವಾರ್ಥಮುದ್ಧರತೇ ಪ್ರಾಜ್ಞಃ ಸ್ವಾರ್ಥಭ್ರಂಶೋ ಹಿ ಮೂರ್ಖತಾ ||" ೬೭

[ಟೀಕು — ಬುದ್ಧಿವಂತನಪ್ಪುದಱಿಂ ತನ್ನ ಕಾರ್ಯವನೆ ಮಾಡಿಕೊಳ್ವುದು ; ತನ್ನ ಕಾರ್ಯವಂ ಕೆಡಿಸುವದೆ ಮೂರ್ಖತೆ.]

ಅದುಕಾರಣಂ ತನ್ನಕಾರ್ಯವಪ್ಪನ್ನೆವರಮಾತಂ,

ಶ್ಲೋ|| "ಬಹಿಸ್ಸರ್ವಕಾ[2]ರ[2]ಪ್ರವಣರಮಣೀಯಂ ವ್ಯವಹರನ್ |
ಪರಾ[3]ನೂಹ್ಯ[3]ಸ್ಥಾನಾನ್ಯಪಿ ತನುತರಾಣಿ ಸ್ಥಗಯತಿ ||
ಜಗದ್ವಿದ್ವಾನೇವಂ ನಿಪುಣಮತಿಸಂಧಾಯ ಕಪಟ್ಯೈಃ |
ತಟಸ್ಥಃ ಸ್ವಾನರ್ಥಾನ್ ಘಟಯತಿ ಚ ಮೌನಂ ಚ ಭಜತೇ ||" ೬೮

[ಟೀಕು — ಬಹಿರಾಕಾರವೆಲ್ಲಂ ಚೆಲ್ವಾಗಿರ್ಪಂತು ವ್ಯವಹರಿಸುವಂ ; ಪರರ ದೆಸೆಯಿಂ ತನ್ನ ಮರ್ಮಸ್ಥಾನಂಗಳನತ್ಯಂತಸೂಕ್ಷ್ಮಮಾದೊಡಂ ಮಱಸುವಂ; ಪ್ರೌಢತರಬುದ್ಧಿಯನುಂಟುಮಾಡಿ ನಿರ್ವಾಹೋಪಾಯಂಗಳಿಂ ತಟಸ್ಥನಾಗಿ ತನಗೆ ಪ್ರಯೋಜನಮಪ್ಪುದಂ ಮಾಡಿಕೊಳುತ್ತುಂ ನುಡಿಯದಿಹಂ.]

ಎಂಬ ನೀತಿಯೊಳಾತಂ ಪರಿಣತನಪ್ಪುದಱಿಂ ತನ್ನ ಮೊಟ್ಟಿ ಸಜ್ಜಮನೆನ್ನರುಮಱಿಯದಂತು ನೆಗಟ್ದಪಂ. ಪಾವು ಪಾವಿನ ಪಜ್ಜೆಯನಱಿವಂತೆಮ್ಮಂದಿಗರ್ಗಲ್ಲದಾತನಭಿಪ್ರಾಯಮಂ ಪೆಱರ್ಗಱಿಯಲ್ ಬಾರದು. ಆಧೂರ್ತಂ ಸ್ವಾರ್ಥಸಿದ್ಧಿಯಪ್ಪನ್ನೆವರಮಿಂತಿರ್ದಪನಲ್ಲದೆ ತನ್ನ ದುರ್ಜನತ್ವಮನೆಂತುಂ ಬಿಡಂ. [4]ಅದೆಂತೆನೆ[4]:—

ಶ್ಲೋ|| "ದುರ್ಜನಃ ಪ್ರಕೃತಿಂ ಯಾತಿ ಸೇವ್ಯಮಾನೋಽಪಿ ಯತ್ನತಃ|
ಸ್ವೇದನಾಭ್ಯಂಜನೋಪಾಯೈಃ ಶ್ವಪುಚ್ಛಮಿವ ನಾಮಿತಂ||" ೬೯

ಪಾ—1. ಕಡಿಸಲೆಂ. ಕ || ಕಡಿಸಲ. ಗ || 2. ರಂ. ಕ || ಗ ||
3. ದ್ಗಹ್ಯ, ಕ || ದೂಹ್ಯ. ಗ || 4. ಅಂತುಮಲ್ಲದೆಯುಂ. ಗ ||

[ಟೀಕು— ದುರ್ಜನಸ್ವಭಾವವಂ ಕಂಡು ಯತ್ನದಿಂ ನಡಸುವೊಡಂ ನೈಜಗುಣಂ ಬಿಡದು; ಅದು ಎಹಗೆಂದೊಡೆ—ನಾಯ ಬಾಲವಂ ಕಾಸಿ ತಿರ್ದಿದೊಡಂ ಕೊಂಕು ಮಾಣದಹಗೆ,] [೯

ಎಂದು ನುಡಿದ ಮೃಗಧೂರ್ತಕನ ನುಡಿಯಂ ಪಿಂಗಳಕಂ ಕೇಳ್ದು —ಈಪಾಪಿಗಾಪಶುವಿನ ಮೇಲೆ ಕೋಪಂ ಪೋದುದಿಲ್ಲೇಗೆಯ್ವೆನೆಂದು ಬೆಱಗಾಗಿ ಮಱುಮಾತಂ ಕುಡಲಱಿಯದಿರ್ದನಂ ಕಂಡು ದವನಕನಿಂ ತೆಂದಂ:—ದೇವಾ, ನಿಮ್ಮ ಮುನ್ನಿನ ಭವದ ಅಗಣ್ಯಪುಣ್ಯೋದಯದಿಂ ಮೃಗಾಧಿರಾಜನಾಗಿ ಪುಟ್ಟಿದೆ; ಎಮ್ಮಂತಪ್ಪ[1] ಪೞ[3]ಯರುಮನಾಪ್ತರು ಮನವಜ್ಞೆಗೆಯ್ದಲ್ಲಿಯಾನುಂ ಬಂದ ಚಲ್ಲವೊತ್ತನ ಬೆಲ್ಲವಾತುಗಳಂ ಕೈಕೊಂಡು ರಾಜ್ಯಮಂ ಕಿಡಿಸಲ್ಬಗೆದೆಯಪ್ಪೊಡದನುಪೇಕ್ಷಿಸಲ್ಬಾರದೆಂತೆನೆ:

ಶ್ಲೋ || "ನೃಪಃ ಕಾಮಾಸಕ್ತೋ ನ ಗಣಯತಿ ಕಾರ್ಯಂ ನ ಚ ಹಿತಂ | [೧೧
ಯಥೇಷ್ಟಂ ಸ್ವಚ್ಛಂದೋ ವಿಹರತಿ ಚ ಮತ್ತೋ ಗಜ ಇವ ||
[2]ತದಾಧ್ಮಾತಃ ಪಶ್ಚಾತ್ಪತತಿ ಸ ಯದಾ ಶೋಕ[2]ಗಹನೇ |
ತದಾಮಾತ್ಯೇ ದೋಷಾನ್ ಕ್ಷಿಪತಿ ನ ನಿಜಂ ವೇತ್ತ್ಯವಿನಯಂ || "೭೦

[ಟೀಕು—ಬಂದಿಚ್ಛೆಯಲ್ಲಿ ಆಸಕ್ತನಾಗಿರ್ದರಸು ತನಗೆ ಕಾರ್ಯವಂ ಹಿತವಪ್ಪುದಂ ಬಗೆಯುಂ; ಮದಸೊರ್ಕಿದಾನೆಯಂತೆ ತನ್ನಿಚ್ಛೆಯಿಂ ಬೇಟ್ಪನಿತು ವಿಸಟಂಬಱಿವಂ; ಆವು ಬರ್ಿಂದೊಂದು ಬಾರಿ ದುಃಖಂಬಡೆವಂ; ಆವೇಳೆಯಲ್ಲಿ ಸ್ವಭಾವಾವಿನಯವಂ ಬಿಟ್ಟು ಪ್ರಧಾನನ ಮೇಲೆ ದೋಷಂಗಳನಾರೋಪಿಸುವಂ.]

ಮತ್ತಮಲ್ಲದೆಯುಂ

ಜನನಾಥಂ ಕಾಮಾಸ | [೨೦
ಕ್ತನಾಗಿ ಮದದಂತಿಯಂತೆ ಚರಿಯಿಸಿ ತುದಿಯೊಳ್ ||
ತನಗಾಪತ್ತಾದೊಡಮಾ |
ತ್ಯನಿಂದಮಾಯ್ತೆಂ[3]ಗು[3]ಮಱಿಯನಾತ್ಮಸ್ಥಿತಿಯಂ ||173

ಟಿ—೯. "ಚಲ್ಲವೊತ್ತನೆಂದು ನಂಬಿಸಿ ತಿಂಬವಂ." ಶ. ದ. ಪು. ೪೯೬

ಪಾ—1. ಕಿಳಿ. ಗ || ಕ ||     2. ತತಃಪಶ್ಚಾತ್ತಾಪಾತ್ಪತತಿ ಭಯಶೋಕಾರ್ಣ, ಕ ||
3, ದು. ಕ || ಖ ||

ಅದಱಿಂ,

ಆಗ್ರಹದಿಂ ಬಾರಿಪುದು ದು ।
ರಾಗ್ರಹನನಕಾರ್ಯಮಾರ್ಗಯುಕ್ತನನಾಕೇ ॥
ಶಗ್ರಹಣಾಂತಂ ಸಾಧುಜ ।
ನಾಗ್ರಣಿಯುಂ ಹಿತನುಮೆನಿಪ ಸಚಿವಂ ನೃಪನಂ ॥174 [೫

ಎಂದಿಂತು ದವನಕಂ [1]ನೂಱಿಯುಂ[1] ತೋಱಿ ನುಡಿಯೆ; ಪಿಂಗಳಕಂ ಕಿನಿಸಿ ಕೆರಳ್ದು ಕಿಡಿಕಿಡಿವೋಗಿ, ಪಲವುಮಾತಿನೊಳೇಂ, ಈಬೂತಂ ನಿರುತ್ತರಂಮಾಡಿದಪೆನೆಂದಿಂತೆಂದಂ:— ಎಲವೋ! ನೀಂ ಪೞಿಮೆಯನೆ ತೋಱಿ ಕೀಱಿ ಕಡೆನುಡಿದಪೆ; ಬಂದೆಡೆಗೆ ಪೞಿಯನಿಂ ಪೊಸಂಬನೆ ಲೇಸು. ಅದೆಂತೆನೆ:— [೧೦

ಶ್ಲೋ || " ಮೂಷಕಾ ಗೃಹಜಾತಾಶ್ಚ ಹಂತವ್ಯಾಹ್ಯಪಕಾರಿಣಃ ।
[2]ಉಪಪ್ರದಾನೈ[2]ರ್ಮಾರ್ಜಾರೋ ಹಿತಕೃದ್ರಕ್ಷ್ಯತೇ ಬುಧೈಃ ॥ " ೭೧

[ಟೀಕು— ಇಲಿಗಳ್ ಮನೆಯಲ್ಲಿ ಪುಟ್ಟಿದುವಾದೊಡಂ ಅಪಕಾರಿಗಳಾದುದಱಿಂ ಕೊಲಿಸಿಕೊಂಡುವು. ಲೋಗರ ಕೈಯಲ್ಲಿ ಕೊಂಡು ಸಲಹಿದ ಬೆಕ್ಕು ಹಿತಂಮಾಡುವ ಕಾರಣದಿಂ ರಕ್ಷಿಸಿಕೊಳಲ್ಪಟ್ಟುದು.] [೧೫

ಮತ್ತಮದಲ್ಲದೆಯುಂ

ಇಲಿಗಳ್ ಮನೆಯೊಳ್ ಪುಟ್ಟಿಯು ।
ಮಲಸದೆ ತವೆ ತೋಡಿ ಮನೆಗಳಂ ಕಿಡಿಸುವವೊಲ್ ॥
ಖಲನೆನಿತು ಪೞಿಯನಾದೊಡ ।
ಮಿಳೇಶ್ವರಂಗೞಿವನೊಡರಿಕುಂ ದುಷ್ಟತೆಯಿಂ ॥175

ಅದಱಿಂ ಕೇವಳಂ ಪೞಿಮೆಯೇ ಪ್ರಯೋಜನಮಿಲ್ಲ; ನೀಂ ಪೞಿಯನಾದೊಡಂ ಧೂರ್ತನುಮಪ್ರಯೋಜಕನುಮಪ್ಪೆ; ಗಳಪದಿರ್; ಅನು

ಪಾ—1. ಫೋಱಿಯುಂ. ಕ ॥ ಗ ॥ 2. ಅಪಪ್ರದಾನೋ. ಗ ॥

ಮಾತನುಂ ಪರಸ್ಪರೋಪಕಾರಿಗಳದಱಿಂದೋರೊರ್ವರ್ಗೆ ತಪ್ಪುವರ ಲ್ಲನೆ; ದವನಕನಿಂತೆಂದಂ: — ದೇವಾ! ಸಂಜೀವಕನಪ್ಪೊಡೆ, ನೀಚನುಂ ನಿಸ್ತ್ರಿಂಶನುಮಾಗಿರ್ದನವನಂ ನಂಬಿದಂದು ಪೊಲ್ಲ[1]ಮ[1]ಕ್ಕುಮದೆಂತೆನೆ:—

ಶ್ಲೋ || "ಉಪಕರ್ತರಿ ಸಜ್ಜನೇಪಿ ನೀಚಃ ಕೃತಕೃತ್ಯಸ್ತ್ವಪಕರ್ತುರ್ವಿಹತೇ ||
ಅತ ಏವ ಹತೋ ವನೇ ಸಪುತ್ರೋಽಹ್ಯುಪಕರ್ತಾ ಕಥಕೇನ ವಾನರಃ||"

[ಟೀಕು—ಉಪಕಾರವಂ ಮಾಡಿದ ಸಜ್ಜನನಲ್ಲಿಯಾದೊಡಂ ನೀಚನಾಗಿರ್ದಪನಪಕಾರವನೇ ಮಾಡಲುದ್ಯೋಗಿಸುವಂ. ಅದೆಹಗೆಂದೊಡೆ—ವನದೊಳ್ ತನ್ನ ಮಱಿಗಳೊಡಗೂಡಿರ್ಪುದೊಂದು ವಾನರಂ ಕಥಕನೆಂಬ ಬೇಡಂಗುಪಕಾರವಂ ಮಾಡಿ ಕೊಲಿಸಿಕೊಳಲ್ಪಟ್ಟುದು.] [೯

ಎಂಬ ಕಥೆಯಂತಕ್ಕುಮೆನೆ— ಪಿಂಗಳಕನದೆಂತೆನೆ— ದವನಕಂ ಪೇೞ್ಗುಂ:—

೧೦. ಉಪಕಾರವಂ ಮಾಡಿ ಕೆಟ್ಟ ಕಪಿಯ ಕಥೆ.

ಕಾಮ್ಯಕವನವೆಂಬ[2]ವನ[2]ದಲ್ಲಿ ಕಥಕನೆಂಬ ಬೇಡನಿರ್ಪಂ. ಆತನೊಂದು ದಿವಸಂ ಬೇಂಟೆವೋಗಿ, ವಯೋಧಿಕನಪ್ಪುದೊಂದು ಪುಲಿಯಂ ಕಂಡು, ಅದನೆೞ್ಚು [3]ತಪ್ಪುವುದುಂ;[3] ಆಪುಲಿ ಮುನಿದವನನೆಬ್ಬಿಟ್ಟ[4]ಲೊಡಂ;[4] [೧೭

ಮನದಿಂ ಬೇಗಂ ಕಪಿಯುಂ |
ಧನಿಲಯಮಂ ವಿಪುಲತರವಟೋರ್ವೀರುಹಮಂ ||
ಘನ[5]ಕೂಟಮಂ ಪಲಾ[5]ಯನ |
ಜನಿತವಿಷಾದಂ [6]ನಿಷಾದ[6]ನೆಯ್ದಿದನಾಗಳ್ ||176 [೨೦

ಅಂತೆಯ್ದಿ ತರುಶಿಖೆಯಂ ಪಿಡಿದಡರ್ವನನಲ್ಲಿರ್ಪುದೊಂದು ಕಪಿ ಕಂಡು ಬೇಗಮಿದಿರಂ ಬಂದು ಅಂಜದಿರೆಂದು ಕೈಯಂ ಪಿಡಿದು ತೆಗೆವು

ಪಾ—1. ದ. ಕ || ಗ || 2. ಮಹಾರಣ್ಯ. ಕ || ಗ || 3. ಲೈತರ್ಪುದುಂ. ಗ ||
4. ವುದುಂ, ಗ || 5. ವಿಘಟನಮುಂ ಪಲ. ಕ || ಗ || 6. ನಿಶಾಟ. ಕ || ಗ ||

ದುಂ; ಆಜರಚ್ಛಮೂರಂ ಕಂಡು—ಎಲೆ ಶಾಖಾಚರ, ನೀನೀವನೇಚರನೆಂ ತಗೆದೆನಗೆಯ್ದುಲ್ಬಾರದಂತು ದೂರಂಮಾಡಲ್ವೇಡ: ಇವನಪ್ಪೊಡೆ, ಮಹಾಪಾತಕಂ, ವಿಶ್ವಾಸಘಾತುಕಂ, ತನಗಿಂಬುವರೆ ನಿನಗಂ ತಪ್ಪದಿರ್ದನಲ್ಲಿವನನದಱಿಂ ಕೆಡೆನೂಂಕು, ಕೊಂದು ತಿಂದಪೆನೆಂದೊಡಾಕಪಿ ಕುಪಿತನಾಗಿ — ಶರಣ್ಬೊಕ್ಕ ಪುಳಿಂದನನೊಪ್ಪಿಸುವನಲೆಂ, ನಿನ್ನ ಬಂದ ಬಟ್ಟೆಯನೆ ಪೋಗೆಂದೊಡೆ; ಮತ್ತಂ ಪುಲಿಯಿಂತೆಂದುದು:—

ವಲಿಮುಖ ನೀತಿಬಹಿರ್ಮುಖ ।
ಮಲಿನಾತ್ಮನನೆನ್ನ ಮಾತುಗೇಳದೆ ನೀನೀ ॥
ಖಲನನೊಳಕೊಂಡೊಡೆಲೆ ಕಂ ।
ಬಲಕಂ ಶಿವಭೂತಿಗಾದ ಕಥೆಯಂತಕ್ಕುಂ ॥177

ಎಂಬುದುಂ; ಅದೆಂತೆಂದು ಗೋಲಾಂಗೂಲಂ ಬೆಸಗೊಳೆ—ಶಾರ್ದೂಲಂ ಪೇೞ್ಗುಂ: —

೧೧. ಶಿವಭೂತಿಯ ಕಥೆ

ಒಂದು ಮಹಾಟವಿಯೊಳ್ ಕಂಬಳಕನೆಂಬ ಬೇಡನೊಂದು ಪುಲಿ ತನ್ನನಟ್ಟೆವರೆ ಪ್ರಾಣಭಯದಿಂ ದೆಸೆಗಾಣದೆ ಪುರಾಣಕೂಪದೊಳ್ ಬಿರ್ದಂ. ಆಪುಲಿಯುಂ ಕೋಪಾಂಧನಪ್ಪುದಱಿಂದಲ್ಲಿಯೆ ಬಿರ್ದುದು. ಅನ್ನೆಗಮೊಂದು ಚಪಲಕನೆಂಬ ಕಪಿ ನೀರ್ಗುಡಿಯಲೆಂದು ಬಾವಿಯಂ ಪುಗುತಂದು ತತ್ಕೂಪಸಮೀಪದೊಳ್ ನಿಂದು ಪೋಗಲಿಂಬಿಲ್ಲದೆ ತಡಿವಿಡಿದೆಳಲು[1]ತ್ತಿರ್ದ ಸರ್ಪನ ಬಾಲಮಂ ಬಳ್ಳಿಯೆಂದು ಬಗೆದು ಪಿಡಿ[2]ದಿ[3]ಯುತ್ತುಮಹಿಸಹಿತಂ ಬಿರ್ದುದು. ಅನ್ನೆಗಂ,

ಮಲರಹಿತನನೂನದಯಾ ।
ನಿಲಯನದೃಷ್ಟಾ[3]ರ್ಥ[3] ತೀರ್ಥಯಾತ್ರಾಶ್ರಮವಿ ॥

ಪಾ—1. ಬಿಟ್ಟುದು. ಗ ॥ 2. ದಿಕ್ಕೆ. ಚ ॥ ಗ ॥ 3. ಥ್ರ. ಖ ॥

ಹ್ವಲಮಾನಸಂ ಪಿಪಾಸಾ ।

ಕುಲಿತಂ ಶಿವಭೂತಿಯೆಂಬ ಪಾರ್ವಂ ಬರುತುಂ ‖188

ತತ್ಕೂಪಮಂ ಕಂಡು ತನ್ನ ಕಯ್ಯ ಕಳಶಮಂ ಬಳ್ಳಿಯೊಳ್ ಕಟ್ಟಿ ನೀರಂ ತೆಗೆವಾಗಳದಂ ಪುಲಿ ಪಿಡಿದು ನೇಲ್ವುದುಮದು ಕಯ್ಗೆ ಬಿಣ್ಣಿತ್ತಾದೊಡದಂ ನೋೞ್ಪೆನೆಂದು ಬಲಿದು ಪಿಡಿದು ಮೆಲ್ಲನೆ ತೆಗೆಯೆ; ಪುಲಿ ಪೊಱಮಟ್ಟು [1]ಪೊಡೆಮಡೆ,[1]ಕಂಡು ಚೋದ್ಯಂಬಟ್ಟು,— ನೀನೀಬಾವಿಯೊಳ್ [2]ಬಿರ್ದು[2] ಕಾರಣವಾವುದೆಂದು ವಸುಧಾಮರಂ ಬೆಸಗೊಳೆ; ತಾನುಂ [3]ಬೇಡ[3]ನುಂ ವ್ಯಾಳನುಂ ಗೋಲಾಂಗೂಲನುಂ ಬಿರ್ದ ಕಾರಣಮಂ ಪೇೞ್ದು—ನಿಮ್ಮಡಿಗಳ ಕೃಪೆಯಿಂ ಮೃತ್ಯುಮುಖದಿಂ ಪೊಱಮಟ್ಟು ಬರ್ದುಂಕಿದೆಂ. [4]ಈತೋಱ್ಪ[4]ಪಿರಿಯಗಿರಿಯ ತಪ್ಪಲ ಗುಹೆಯೊಳಿರ್ಪೆನಲ್ಲಿಗೆ ಬನ್ನಿಂ. ನಿಮಗಮೌಲ್ಯಮಪ್ಪ ವಸ್ತುಗಳನೀವೆನೆಂದೊಡೆ—ನೀಂ ಪೇೞ್ದ ಪ್ರಾಣಿಗಳಂ ತೆಗೆದು ತೀರ್ಥಯಾತ್ರೆಗೆಯ್ದು ಮಗುೞ್ದು ಬರ್ಪಲ್ಲಿ ನಿನ್ನಲ್ಲಿಗೆ ಬರ್ಪೆನೆಂದೊಡಾಶಾರ್ದೂಲಂ—ಅಂತಪ್ಪೊಡೆ ಈವ್ಯಾಧನಂ ತೆಗೆಯದಿರಿಂ. ನೀಚಂಗೆನಿತುಪಕಾರಂಗೆಯ್ದೊಡಮೊಳ್ಳಿತ್ತುಗೆಯ್ವನಲ್ಲದೆಂತೆನೆ: — [೧೫

ಶ್ಲೋ || "ಉಪಕಾರೋ [5]ಪಿ[5] ನೀಚಾನಾಮಪಕಾ[6]ರಾಯ ಕಲ್ಪತೇ[6] ||

ಪಯಃಪಾನಂ ಭುಜಂಗಾನಾಂ ಕೇವಲಂ ವಿಷವರ್ಧನಂ || "೭೩

[ಟೀಕು—ನೀಚಂಗುಪಕಾರವಂ ಮಾಡಿದೊಡೆ ಅಪಕಾರವನೆ ಮಾಡುವನಲ್ಲದೆ ಶಾಂತನಾಗಲರಿಯಂ. ಅದೆಂತೆಂದೊಡೆ—ಪಾವಿಂಗೆ ಹಾಲನೆಱೆದೊಡೆ ವಿಷಂ ಪೆರ್ಚುವಂತೆ.]

ಎಂಬೀಶ್ಲೋಕಾರ್ಥಮನವಧರಿಸಿ ನೆಗಳ್ವುದೆಂದು ಪುಲಿ ಪೇೞ್ದು ಪೋಪುದುಂ; ಆಪಾರ್ವಂ ತತ್ಕೂಪಸ್ಥಮಪ್ಪ ವ್ಯಾಳನುಮಂ ಗೋ

ಪಾ—1. ಎಱಗಿಪೊಡೆವಟ್ಟೊಡೆ. ಗ ‖ 2. ಇರ್ದ. ಗ ‖ 3. ವ್ಯಾಧ. ಗ ‖ 4. ಇಂತಪ್ಪ. ಖ ‖ 5. ಹಿ. ಗ ‖ 6. ರೋಜನಶಾಸ್ತ್ರಯೇ. ಗ ‖

ಲಾಂಗೂಲನುಮಂ ತೆಗೆವುದುಮವೆರಡುಂ ಪೋಗಿವಟ್ಟು ಪೊಡೆವಟ್ಟು ಬಱಿಯುಂ ವಳೀಮುಖನಿಂತೆಂದುದು: — ನಿಮ್ಮಡಿ, ನಿಮ್ಮ ಪ್ರಸಾದದಿಂ ದೆನಗೆ ಪುನರ್ಜನ್ಮಮಾದುದು, ಆಂ ಬದರಿಕಾಶ್ರಮದುಪವನದೊಳಿರ್ಪೆಂ, ಅಲ್ಲಿಗೆತ್ತಾನುಂ ಬಂದಿರಪ್ಪೊಡೆನ್ನಾರ್ಪ ಶಕ್ತಿಯಿಂ ಭಕ್ತಿಗೆಯ್ವೆನೆಂದು ಗೋಲಾಂಗೂಲಂ ಪೇೞ್ದು ಪೋಪುದುಂ; ಉರಗಂ—ನಿಮ್ಮಡಿ ನೀಮೆನಗೆ ಪ್ರಾಣೋಪಕಾರಂ[1]ಗೆಯ್ದಿರ್[1] ನಿಮಗೇನಾನುಮಧ್ವಾನಮಾದಾಗಳೆನ್ನಂ ನೆನೆ[2]ದೊಡಾಂ[2] ಬಂದು ದೇವರ ಸೇವೆಯುಂ ಮಾಡಿ ಪೋಪೆನೆಂದುರಗಂ ಪೇೞ್ದು ಪೋಪುದುಂ; ಆದ್ವಿಜಂ ತನ್ನ ಮನದೊಳಿಂತೆಂದು ಬಗೆದು,

ಪೊಲ್ಲ ಗಡ ತೆಗೆಯಲಪ್ಪೊಡೆ ।
ಭಿಲ್ಲನನೆಂದೆನಗೆ ಪುಂಡರೀಕಂ ಪೇೞ್ದು ॥ [೧೦
ತ್ತಿಲ್ಲುಭಯಪಕ್ಷಪಾತಮೆ ।
ಪೊಲ್ಲದು ಪೊಲ್ಲದೆ ಪರೋಪಕಾರವ್ಯಸನಂ ॥179

ಎಂತುಂ "ಯತ್ಪರಾರ್ಥಂ ಶರೀರಂ" ಎಂಬ [3]ಸುಭಾಷಿತಂ ಪೇೞ್ದಂತೆ[3] ಈಪುರುಷನಂ ತೆಗೆಯದಂದು ಕಾಪುರುಷನಪ್ಪೆಂ; ತನ್ನಪ್ಪುದಕ್ಕೆಂದು ಪರೋಪಕಾರವಿಭೂತಿ ಶಿವಭೂತಿ

ಕರುಣಾರಸಾರ್ದ್ರಹೃದಯಂ ।
ದುರಾತ್ಮನೆನ್ನದೆ ಕಿರಾತನಂ ತೆಗೆದನಿಳಾ ॥
ಮರಜನ[4]ವಿನುತಂ[4]ಭಾವಿಸೆ । [೧೮
ಪರಹಿತನಿರತಾತ್ಮನಪ್ಪವಂಗಱಿದುಂಟೇ ॥180

ಅಂತು ತೆಗೆವುದುಂ; ಕಿರಾತನುಂ ಪೊಡೆವಟ್ಟು—ನಿಮ್ಮಡಿಯ ಧರ್ಮದಿಂ ನಾಂ ಬರ್ದು*ಂಕಿದೆಂ. ಆಂ ಪದ್ಮನಗರದೊಳಿರ್ಪೆಂ. [5]ನೀಮೆ[5]ತ್ತಾ

ಪಾ—1. ಗೆಯ್ದುಪಿರ್. ಕ ॥ 2. ಯಿಂಅಂ. ಖ ॥
3. ಸುಭಾಷಿತಂಗಳೊಳವು. ಗ ॥ 4. ಎನಿತುಂ. ಕ ॥ ಗ ॥ 5. ನಿಮಗೆ. ಗ ॥

ನುಂ ಬಾರ್ತೆಯಪ್ಪೊಡಲ್ಲಿಗೆ ಬನ್ನಿಂ. ಎನ್ನಾರ್ಪನಿತು ಶಕ್ತಿಯೊಳುಪಕರಿಸಿದಪ್ಪೆನೆಂದು ಪೋದಂ.

ಶಿವಭೂತಿಯುಂ ಕೆಲವು ಕಾಲಕ್ಕೆ ತೀರ್ಥಯಾತ್ರೆಗೆಯ್ದು ಮಗುಳ್ದು ಬರುತ್ತುಂ ಉತ್ತುಂಗಶಿಖರಿಯ ತಪ್ಪಲೊಳ್ ಇರ್ಪುದನಾವ್ಯಾಘ್ರಂ ಕಂಡು ಶೀಘ್ರಮಿದಿರಂ ಬಂದು ಶಿವಭೂತಿಗೆ ಪಾದಾಕ್ರಾಂತನಾಗಿ ತನ್ನಿರ್ಪ ಗುಹೆಗೊಡಂಗೊಂಡು ಪೋಗಿ, [೬

ಹಾರಾಂಗದಕುಂಡಲವಿ ।
ಸ್ತಾರಕಿರೀಟಾದ್ಯಮೂಲ್ಯಭೂಷಣಚಯಮಂ ॥
ಚಾರುಗುಣಾಂಕಿತನಿರದೆ ಚ ।
ಮೂರಂ ಶಿವಭೂತಿಗಿತ್ತುದತ್ಯಾದರದಿಂ ॥181

ಅಂತು ತೊಡಿಗೆಗಳಂ ಪುಲಿಯಿಂ ಪಡೆದು, ಶಿವಭೂತಿ ಪರಮವಿಭೂತಿಗಾಸ್ಪದನಾದೆನೆಂದು ಸಂತಸಂಬಟ್ಟಲ್ಲಿಂ ತಳರ್ದು, ಬದರಿಕಾಶ್ರಮವನಕ್ಕೆ ಬಂದು ಪಥಪರಿಶ್ರಮವನಾರಿಸಲೆಂದು ಧರಾಮರಂ ಮಾಮರದಡಿಯೊಳ್ ವಿಶ್ರಮಿಸಿರ್ಪುದುಮಾವನದೊಳಿರ್ಪ ಬಲೀಮುಖಂ ಕಂಡತಿಪ್ರೀತಿಯಿಂ ಪ್ರಸನ್ನಮುಖನಾಗಿ ಬಂದು ಪೊಡೆಮಟ್ಟು,

ಪನಸಾಮ್ರಜಂಬುಜಂಬೀ । [೧೬
ರನಾರಿಕೇಳೀಕಪಿತ್ಥಕದಳೀನಾರಂ ॥
ಗನವೀನಫಲಾವಳಿಯಂ ।
ವಿನಯದಿನಾದ್ವಿ[1]ಜವರಂಗೆ ಕಪಿವರನಿತ್ತಂ[1] ॥182

ಅಂತು ಶಾಖಾಚರಂ ತಂದಿತ್ತ [2]ಫಲಂಗಳಂ ಕೊಂಡು[2] ಶಿವಭೂತಿಯುಮಂದಿನ ದಿವಸಮಲ್ಲಿರ್ದು ಕೆಲವಾನುಂ ದಿವಸಕ್ಕೆ ಪದ್ಮನಗರಮ

ಪಾ—1. ಜಂಗೆ ಕಪಿ ತಂದಿತ್ತಂ. ಕ ॥ 2. ಪಲಾದಿಗಳಂ ಮೆಲ್ದು, ಕ ॥ ಗ ॥

ನೆಯ್ದಿ ಕಂಬಳಕನ ಮನೆಯನಱಿಸುತ್ತುಂ ಬರ್ಪುದುಮಾ ಕಿರಾತಂ ಕಂಡು ಪೊಡೆವಟ್ಟು ಮನೆಗೊಡಂಗೊಂಡುಯ್ದು ಶಿವಭೂತಿಗಭ್ಯಾಗತ[1]ಕ್ರಿಯೆಯಂ[1] ಮಾಡಲುಪಾಯಮಿಲ್ಲದುಸಿರದಿರ್ಪನಂ ಕಂಡೇಂ ಮಗನೆ! ಚಿಂತಿಸುತಿರ್ದಪೆಯೆಂಬುದುಂ;—ನಿಮ್ಮಡಿಗಳುಂ ಬಿಜಯಂಗೆಯ್ದಿರಾನುಂ ನಿರುಪಾಯನಾಗಿರ್ದಪೆನೆಂಬುದುಂ; — ಇನ್ನುಮಿದರ್ಕೊಂದುಂ ಚಿಂತೆಗೆಯ್ಯಲ್ವೇಡಿನ್ನುಂ ನಿನಗೆ ಬಾೞ್ವುಪಾಯಮನಾನೇ ಮಾೞ್ಪೆನೆಂದೇಕಾಂತದೊಳ್ ಕುಳ್ಳಿರ್ದು ತನ್ನ ತಂದ ಮೂಲ್ಯವಸ್ತುಗಳನವಂಗೆ ತೋಱುವುದುಂ; [೪

ಎನಗೆ ಹಿತಂ ಬ್ರಾಹ್ಮಣನೀ ।
ತನೆನ್ನದವಿವೇಕಿಯಾಗಿ ಶಿವಭೂತಿಗೆ ತೊ ॥
ಟ್ಟನೆ ಬಗೆದನಹಿತಮಂ ತ ।
ದ್ವನಚರನೆಂತುಂ ಕೃತಘ್ನರೇನಂ ಮಾಡರ್ ॥183 [೧೦

ಅಂತು ಬಗೆದು, ಪೊೞಲನಾಳ್ವರಸನಲ್ಲಿಗೆ ಪೋಗಿ,—ದೇವಾ! ನಿಮ್ಮ ತುಡುವಾಭರಣಂಗಳಂ ಪಲವಮೂಲ್ಯವಸ್ತುಗಳಂ ತಂದೆನ್ನ ಮನೆಯೊಳೊರ್ವ ಪಾರ್ವನಿರ್ದಪನೆಂದು ಪೇೞ್ವುದುಮರಸಂ ತಳಾಱಿರ್ಗೆ ಪೇೞಲೊಡಮವರ್ ಪರಿದಾಪಾರ್ವನಂ ಪಿಡಿದು ಪೆಡಗೈಯಂ ಕಟ್ಟಿ ತಂದೊಪ್ಪಿಸುವುದುಮರಸನಾತನ ಕೈಯೊಳಿರ್ದ ವಸ್ತುಗಳೆಲ್ಲಮಂ ಕೊಂಡು ಬೞಿಕ್ಕೆ ಸೆಱೆಯೊಳಿಕ್ಕೆ, ಕಿಱಿದು ಬೇಗಂ ಬೆಱಗಾಗಿರ್ದು, ತನ್ನ ಮರುಳ್ತನಕ್ಕೆ ತಾನೆ ಹಾಸ್ಯಂಗೆಯ್ದು, ತನಗೆ ಬಂಧನಮೋಕ್ಷೋಪಾಯಮಂ ಚಿಂತಿಸಿ, ನಿನಗಧ್ಯಾನಮಾದಾಗಳೆನ್ನಂ ನೆನೆವುದೆಂದು ಪಾವು ಪೇೞ್ದು ಪೋದುದಂ ನೆನೆದು ನೋೞ್ಪೆನೆಂದು ನೆನೆಯಲೊಡಮಾಪಾವು ಮನದಿಂ ಮುನ್ನವೆ ಬಂದು ಪೊಡೆಮಟ್ಟು—ಬೆಸನೇನೆಂಬುದುಮಾಪೊೞ

ಪಾ—1. ಪ್ರತಿಪತ್ತಿಯಂ. ಕ ॥ ಗ ॥

ಲನಾಳ್ವರಸನೆನ್ನರ್ಥಮೆಲ್ಲಮಂ ಕೊಂಡುದಲ್ಲದೆಯುಮೆನಗಿಂತಪ್ಪವಸ್ಥೆಯಂ ಮಾಡಿದನಿದರ್ಕೆ ತಕ್ಕುದಂ ನೀನೆ ಬಲ್ಲೆಯೆಂಬುದುಮಿದಾವಗಹನಮರಸನ ಪಿರಿಯಮಗನನೀಗಳೆ ಪೋಗಿ ಕೊಂದಪೆಂ, ನಿಮಗಲ್ಲದೆ ಪೆಱರಾರ್ಗಂ ಸಾಧ್ಯಮಾಗೆಂ, ನೀವೊಂದುಪಾಯದಿಂ ಬಂದು ನೀರನಭಿಮಂತ್ರಿಸಿ ತಳಯಲೊಡಂ ನಿರ್ವಿಷಮಪ್ಪೆಂ, ಅಲ್ಲಿ ನಿಮ್ಮ ಸ್ವಾರ್ಥ [೫ಮೆಲ್ಲಮಂ ತೀರ್ಚಿಕೊಳ್ಳಿಮೆಂದು ಪೇೞ್ದು ಪೋಗಿ ನಂದನವನದೊಳಾಡುತ್ತಿರ್ದ ನೃಪನಂದನನಂ ಕಂಡಾಗಳ್,

ಸಕಲಕಲಾಧರನಂ ರಾ |
ಹು ಕೊಳ್ವ ತೆಱದಿಂ ವಿಷಾತಿಭೀಕರದಂಷ್ಟ್ರಾ ||
ನಿಕರಂ ಕೊಂಡುದು ನರಪಾ | [೧೦
ಲಕಸುತನಂ ಮಿತ್ರಕಾರ್ಯತತ್ಪರನುರಗಂ || 184

ಅಂತು ಪಾವು ಕೊಳಲೊಡಂ, ವಿಷಮವಿಷಧರವಿಷದೂಷಿತನಾಗಿರ್ದ ಕುಮಾರನಂ ಗಾರುಡಿಗರ್ ಬಂದು ಕಂಡು ತಮ್ಮ ತಮ್ಮಱವಂದದಿಂ ಮಂತ್ರಿಸಿದೊಡೆಂತುಂ ನಿರ್ವಿಷಮಾಗದಿರ್ಪುದುಮರಸಂ ಕಂಡೀಕುಮಾರ ನನೆತ್ತಿದಂಗೆ ಬೇಡಿತ್ತಂ ಕುಡುವೆನೆಂದು ಡಂಗುರಂಬೊ [೧೫ಯ್ಸಲೊಡಂ; ಶಿವಭೂತಿ ಕೇಳ್ದು ತಾನೆತ್ತುವೆನೆಂದು ಪೇೞ್ದೊಡರಸಂ ಕೇಳ್ದು ಪರಿತಂದು ಶಿವಭೂತಿಯಂ ಸೆಱೆಯಂ ಬಿಟ್ಟೊಡಗೊಂಡು ಪೋಪುದು ಮಾತಂ ಪೋಗಿ ಗುಂಡಿಗೆಯ ನೀರನಭಿಮಂತ್ರಿಸಿ ತಳಯಲೊಡಂ; ಕುಮಾರಂ ದಷ್ಟನಿಷ್ಟನಂ ಕಂಡಂತೆ ಭೋಂಕನೆರ್ದು ಕುಳ್ಳಿರ್ದನಂ ಕಂಡರಸಂ ಸಂತೋಷಂಬಟ್ಟು ಶಿವಭೂತಿಗೆ ಪಿರಿದುಂ ವಿಭೂತಿಯುಂ ಮಾಡಿ ಆತಂಗೆ ಕಿರಾತನಿಂದಾದವಸ್ಥೆಯುಂ ಕೇಳ್ದಾ ಕಿರಾತನಂ ಯಮಪುರಕ್ಕೆ ಕಳುಪಿದಂ.

(೧೦ ನೆಯ ಕಥೆಯ ಶೇಷ.)

ಅದುಕಾರಣದಿಂದೀಪಾಪಕರ್ಮನಂ ನಂಬಲ್ವೇಡ, ಕೆಡೆನೂಂಕೆಂಬುದುಂ; ಮರ್ಕಟನಿಂತೆಂದುದು:— ಈತನನಾವತೆಱದಿಂ ನೂಂಕುವನಲ್ಲೆಂ ಪೋಗೆನೆ; ಪುಲಿ ಪೋದುದು. ಇತ್ತಂ ತರುಚರಂ ವನಚರಂ ಪಸಿದನೆಂದು ಫಲಾವಳಿಯುಂ ತರಲ್ಪೋಪ್ಪುದುಮಾಪಾಪಕರ್ಮನದಱ ಮಱಿಗಳಂ ಕಂಡಿವೆನ್ನ ಕುಟುಂಬಕ್ಕೊಂದೆರಡು ದಿವಸದಾಹಾರಮಕ್ಕುಮೆಂದವಂ ತೆಗೆದು ಕೊಂಡುಪೋದಂ.

ಅದಱಿಂ,

ಏ ಪಡೆಮಾತೀಜಗದೊಳ್ ।
[1]ಕೋಪನನಂ ಪಾಪರೂಪನಂ[1] ನಂಬಿದವಂ ॥
ಗಾಪ[2]ತ್ರಱಿವವಿವೇಕ[2]ಮನ ।
ಸ್ತಾಪಪರಂಪರೆಗಳೆಂಬಿವಕ್ಕುಮವೋಘಂ ॥185

ಎಂದು ದವನಕಂ ಪೇೞ್ದ ಕಥೆಯಂ ಪಿಂಗಳಕಂ ಕೇಳ್ದಂತೆಂದಂ:—

ವಿಷಮುಮತಿ ನಿನ್ನ ಪೇೞ್ದುದೆ ।
ವಿಶೇಷಮುತಮಪ್ಪುದಾದೊಡಂ ವೃಷಭೇಂದ್ರಂ ॥
ಪಸು ನಿಷ್ಪಾಪಂ ಧಾರ್ಮಿಕ ।
ನಶೇಷನೀತಿಜ್ಞನುಂ [3]ಕೃತಜ್ಞನುಮಪ್ಪಂ[3] ॥186

ಅದಱಿಂ ಸಂಜೀವಕನೊಳಾದ ವಿಶ್ವಾಸಂ ದೋಷಮಲ್ಲನೆ; ಮತ್ತಂ ದವನಕನಿಂತೆಂದಂ:— ಸಂಜೀವಕನ ತತ್ಕೃರ್ಮಯನಿನ್ನೇವೇೞ್ವೆಂ. ಕ್ಷತ್ರಿಯಧರ್ಮವರ್ತಿಯಪ್ಪ ನಿನಗೆ ಯತಿಧರ್ಮಮಂ ಪತ್ತಿಸಿದಂ.

ಟಿ—೧೮೬. ತತ್ಕೃರ್ಮ— ಮಲ್ಲಿನಾಥಪುರಾಣಂ. ೭ ಆ. ೭ ಪದ್ಯವನ್ನು ನೋಡಿ.

ಪಾ—1. ಕೋಪಿಯುಮಂ ಪಾಪರೂಪಿಯುಂ. ಕ ॥ 2. ತ್ತಡರನೆಯಧಿಕ. ಕ ॥
3. ಕೃತಘ್ನನುಮಲ್ಲಂ. ಖ ॥

ನೀನುಮದಱಿಂತೆ ಕೆಲವು ದಿನಕ್ಕೆ ಪುಲ್ಲಂ ತಿಂದು ಪಶುತ್ವಮಂ ಪೊರ್ದ ದಿರೆ, ಎಂತುಂ

ವಾಕ್ಯಂ || „ಸಂಸರ್ಗ[1]ಜಾ[1] ದೋಷಗುಣಾಃ ಭವಂತಿ ||" ೨೪

ಎಂಬ ಸುಭಾಷಿತಾರ್ಥಮೇಕೆ ತಪ್ಪುಗುಮೆನೆ — ಪಿಂಗಳಕನದೆಂತೆನೆ–ದವನಕಂ ಪೇೞ್ಗುಂ: —

### ೧೨. ಎರಡು ಗಿಣಿಗಳ ಕಥೆ.

ಶ್ರೀಧರನಿಭನೆನೆ ನೆಗೞ್ದ* ಜ |
ನೋದಯನೆಂಬರಸನೊರ್ವ ಬೇಂಟೆಯನಾಡಲ್ ||
ಪೋದುದನಱಿದಾತನ ದಾ |
ಯಾದಂ ಕೊಲಲೆಂದು ಮೇಲೆ ಬರ್ಪುದುಮಾಗಳ್ ||187

ಅಂತಾತನ ಬರವಂ ದೂರದೊಳೆ ಕಂಡು, ಪಗೆವನಪ್ಪುದಂ ನಿಶ್ಚಯಮಾಗಲಱಿತು— ಪಗೆಗೆ ಪಕ್ಕಾಗಿ ನಿಷ್ಕಾರಣಂ ಸಾವುದಾವಕಾರಣಂ. "ಬರ್ದನೆ ಬಂಟಂ." ಎಂಬ ನಾಣ್ಣುಡಿಯುಂಟು. "ಶರೀರಮಾದ್ಯಂ ಖಲು ಧರ್ಮಸಾಧನಂ" ಎಂಬ ಪುರಾಣವಾಕ್ಯಮುಂಟಪ್ಪುದಱಿಂ, ತಾನೇಱಿದ ಜಾತ್ಯಶ್ವಮಂ ಕೀೞಿ ಬಿಟ್ಟಕ್ಕಲೊಡಮದು ಗಾಳಿಗೆ ಗಱಿ ಮೂಡಿದಂತೆಯುಂ, ಮನಮನೆಡಗಲಸಿದಂತೆಯುಮಾಗಿ ಪಿರಿದಂತರಮಂ ಪೋಗಿ, ಬಂದು [2]ಶಬರಶಿಬರಮನೆಯ್ದುವುದುಮದಂ[2] ಕಂಡಲ್ಲಿ ನಿಲಲ್ಬಗೆದು ಬರ್ಪ ರಾಜಪುತ್ರನಂ ಪುಳಿಂದಮಂದಿರದೊಳೊಂದು ಪಂಜರಗತನಾಗಿರ್ದ ಶುಕಪತತ್ರಿ ಕಂಡು ನಿಜಾಧಿಪನಪ್ಪ ಕಿರಾ[3]ತಾಧೀಶಂ[3]ಗಿಂತೆಂದುದು: —

ಎಲೆ ಶಬರರಾಜ [4]ನೋಡಿದೆ[4] |
ಪಲವುಂ ಪೊಂದುಡಿಗೆದೊಟ್ಟು ಬಂದೊರ್ವಂ ವ್ಯಾ ||

ಪಾ—1. ತೊಃ. ಖ ||  2. ಶಬರಾಲಯಮುಂ. ಕ ||  3. ತರಾಜಂ. ಕ ||
4. ನೋಡವೊ. ಖ || ; ನೋಡಾ. ಕ || ಗ ||

ಕುಲನಾಗಿರ್ಪಂ [1]ನೀಂ ವ್ಯಾ[1] ।
ಕುಲನಲ್ಲದೆ ಬಂದು ಪಿಡಿದು ಕೊಳ್ಳೀ [2]ಧನಮಂ[2] ॥188

ಎಂದು ಗಱಿಪುವರಗಿಳಿಯ ಸರಮನಾಲಿಸಿ ಕೇಳ್ದಲ್ಲಿಯುಂ ನಿಲಲಣ್ಮದೆ ಮತ್ತಂ ಕಿಱಿದಂತರಮಂ ಬರ್ಪುದುಮಾಮಹಾಗಹನಮಧ್ಯದೊ[3]ಳಂಬರವರೆಗಂ[3] ಬೆಳೆದ ಮರದುಱುಗಲ ನಡುವೆ ನೀಳ್ದೊಪ್ಪಿ ದಿವಕ್ಕೆ ಪೋಪ ಬಟ್ಟೆಗೆ ಸೋಪಾನಂಗಟ್ಟಿದಂತೆ ತೆಱತೆಱದಿಂ ನೆಗೆದೊಗೆವ ಪೊಗೆಯುಂ ಕಂಡು ಮತ್ತಮದುಂ ಬೇಡರ ಪಳ್ಳಿಯೆಂದೆ ಬಗೆದು ಭಯಂಗೊಂಡು ತನ್ನಿಷ್ಟದೈವಮಂ ಸ್ಮರಿಸಿ—ತನ್ನಪ್ಪುದಕ್ಕೆ, ಇನ್ನೆತ್ತಂ ಪೋಪೆಂ; ಕುದುರೆಯುಂ ಜವಂಗೆಟ್ಟುದು; ನಾಂ ಪಥಶ್ರಾಂತನಾದೆನಗೆ ದೈವಮೇ ಶರಣೆಂದು ಕಂಠಗತಪ್ರಾಣನಾಗಿ [4]ಮನಂಗುಂದಿ ಬರ್ಪ[4] ಜನೋದಯನೃಪಂಗೆ ಪ್ರಾಣವಾಯು ಬರ್ಪಂತೆ ಹೋಮಧೂಮಧೂಪಿತದಿವ್ಯಗಂಧಾಮೃತಂಬೆರಸು [೧೦

ವಿದಳಿತಪುಷ್ಪಸೌರಭಮನಾವಗಮಿರ್ಕುೞಿಗೊಂಡು ಕೊಂಡು ಷ ।
ಟ್ಪದಪದಪದ್ಮಿನೀನಿವಹಶೈತ್ಯದೊಳೊಯ್ಯನೆ ಕೂಡಿ ಕೂಡಿ ಮಾ ॥
ಣದೆ ವಿವಿಧದ್ರುಮೋತ್ಕರದಿಜುಂಬಿನೊಳಂಬೆನೆ ನಿಂದು ನಿಂದು ತೀ ।
ಡಿದುದಘಹಾರಣಂ ಪಥಪರಿಶ್ರಮ[5]ವಾರಣನಾ[5]ಸಮೀರಣಂ ॥189

ವ॥ ಅಂತು ಬಂದ ಮಂದಮಾರುತನಿಂದಾಪ್ಯಾಯಿತಶರೀರನಾಗಿ, ತದ್ಧೂಪವಾಸನೆಯಿಂದಿದು ಋಷ್ಯಾಶ್ರಮಮೆಂದು ನಿಶ್ಚೈಸಿ, ತದಾಶ್ರಮಾಭಿಮುಖನಾಗಿ ಬರುತ್ತುಮಾಶ್ರಮಿಗಳ ಹೋಮಕಾರ್ಯಕ್ಕೆ ಕಱೆವ ಕಾಮಧೇನುಗಳಂತೆ ಕಱೆವ ಹೋಮಧೇನುಗಳಂ ಕಿಡಲೀಯದೆ ಕಾದು ಪಲಾಶಾಶ್ವತ್ಥೌದುಂಬರಾರ್ಕನ್ಯಗ್ರೋಧಶಮ್ಯಪಾಮಾರ್ಗಖದಿರಾದಿಶುಷ್ಕಸ

೮—೧೫. ಇಱುಂಬು—ಇಕ್ಕಟ್ಟು.

ಪಾ—1. ನೀನಾ, ಕ ॥ 2. ತನನಂ, ಕ ॥ 3. ಬರೆವರೆ, ಗ ॥
4. ಜೀವಂಗುಂದಿನಿಂದ, ಕ ॥ 5. ಹಾರಣನಾ, ಖ ॥

ಮಿತ್ತುಗಳುಮಂ ಕುಶಾಶ್ವಲಾಯನವಿಶ್ವಾಮಿತ್ರಾದಿ[1] ದೂರ್ವಾಂಕುರಪವಿತ್ರವಸ್ತುಗಳುಮಂ[1] ಕೊಂಡು ಧೇನುಗಳಂ ಮುಂ ಕೊಂಡು ಬರ್ಪ ಶಿಷ್ಯಸಮೂಹಂಗಳುಮಂ, ಕುಂದಮುಚುಕುಂದಮಂದಾರೇಂದೀವರನಂದ್ಯಾವರ್ತತ್ರಿಸಂಧ್ಯಾಬಂಧೂಕಕದಂಬಕನಕಕರವೀರಕರ್ಣಿಕಾರಕುಮುದವಕುಳಕುರವಕಕಮಲತಿಲಕಚಂಪಕಪಾಟಲಿಪಾರಿಜಾತಜಾತಿಪುನ್ನಾಗಮಲ್ಲಿಕಾದ್ಯನೇಕಸುರಭಿಕುಸುಮಂಗಳಂ ಸಜ್ಜುಕಮಪ್ಪುವಂ [2]ಪುಟ್ಟಿ[2]ಯೊಳ್ ತೀವಿಕೊಂಡು ದಧಿಮಧುಘೃತಕ್ಷೀರಗೋಮಯಗೋಮೂತ್ರಂಗಳುಮಂ ಪುಣ್ಯತೀರ್ಥೋದಕಂಗಳುಮಂ ಕಲಶಂಗಳೊಳ್ ತೀವಿಕೊಂಡು ತಪೋಧನರ ದೇವತಾರಾಧನೆಗೆ ಕಾಲಾ[3]ತಿಕ್ರಮ[3]ಮಾಗಲೀಯದೆ ಧಾಳಾಧಾಳಿ[4]ಯಲ್ಲಿ[4] ಬರ್ಪ ಪರಿಚಾರಕರ ನೆರವಿಯುಮಂ ಕಂಡವರ ಪಿಂದುಪಿಂದನೆ ಬಂದು ಮುನಿವನಮನೆಯ್ದುವುದುಮಾವನದೊಳಾವನಕ್ಕಿಕ್ಕಿದ ಬಾಱಿಸ್ವೇಲಿಯಿಂತೆ ರಸರಸಾಯನಂಗಳಂ ತೀವಿ ನೇಱಿದ ಪೊಂಗಳಸಂಗಳಂತಪ್ಪ ನವಫಲಂಗಳಂ [5]ನೆಱೆ[5]ದೊಪ್ಪುವ ಮಾತುಲುಂಗದ ಪೊದಱುಗಳುಮನಾಪೊದಱ ಮೊದಲೊಳೊದವಿ ಬೆಳೆದು ಬೀಗಿ ತಮ್ಮಿಂ ತಾವೆ ಬಿರಿದು ಬಿರಿವಟ್ಟು ಸುರಿವ ದಾಳಿಂಬದ ಪಣ್ಗಳ ತನಿರಸದ ಪರಿವೊನಲೆ ಪರಿನೀರಾಗೆಯುಂಕುರವೊತ್ತಿ ಬೆಳೆಯುತ್ತಿರ್ದ ಕಬ್ಬಿನ ಮಡಲ್ಗಳುಮಂ, ಅಲ್ಲಿಂದೊಳಗೆ ಕಲ್ಪವೃಕ್ಷದೊಳ್ವಿಕಲ್ಪಮಿಲ್ಲೆನಿಸಿ ಬೇರಿಂ [6]ತೊಟ್ಟು ತುದಿಗೊಂಬುವರಮೋರಂತೆ ನೇಱಿದುವಾಗಿರ್ದೆಲೆಯಿಂ ತುಱುಗಿ ಫಲವಾದ[6] ಪನಸಿನ ಮರಂಗಳುಮಂ, ಭೂತಳಕ್ಕತಿಪ್ರೀತಿಕರಮಾಗಿ ಪೂತು ಪಣ್ತೈಱಿಗಿದರ[7] ನೇಱಿಲ ಇಮ್ಮಾವಿನ[7] ತೆಂಗಿ

ಟಿ—೬. ಸಜ್ಜುಕಂ—"ಕುಟ್ಮಲಂ" ಶಬ್ದಸಾರಂ. ೧೮೫

ಪಾ—1. ದರ್ಭೆಗಳಂ. ಖ ‖ 2. ಸೆಜ್ಜೆ. ಕ ‖ ಗ ‖ ಖ ‖ 3. ತ್ಯಾಯನ. ಖ ‖
4. ಯಿಂ. ಕ ‖ 5. ಮೆಱೆ. ಗ ‖
6. ತುಡಿವರಂ ಪಲವಾದ. ಕ ‖ ಗ ‖ 7. ನೇಱಿಲ ಕಮ್ಮರಂಗಳುಮುಮಿಮ್ಮಾವಿನ. ಕ ‖

ನ ನಾರಂಗದ ಮರಂಗಳ್ ಮೊದಲಾಗಿ ಫಲಂಗಳಂ ನೆಱೆದೊಪ್ಪುವನೇಕವೃಕ್ಷಂಗಳುಮಂ, ಆಮರಂಗಳ ಶಾಖಾಗ್ರಂಗಳ ತಳಿರ ತುಱುಗಲೊಳಿರ್ದು ಪಾಪರೂಪನಿದಂ ಪುಗಲ್ವೇಡೆಂಬಂತೆ ಪುಗಿಲ್ಪುಗಿಲೆನುತಿರ್ಪ ಪುಷ್ಟಪರಪುಷ್ಟಂಗಳುಮಂ, ಮೃದುಮಧುರಗಂಭೀರರವದಿಂ ಸಾಮವೇದವನನುವಾದಂಗೆಯ್ವಂತಿರ್ಪ ಮಧುಕರಪ್ರಕರಮುಮಂ, ವೇದಾಂತಸಿದ್ಧಾಂತಪ್ರಮಾಣಶಾಸ್ತ್ರಂಗಳನೋದಿ ತರ್ಕಿಸುವ ಪಂಡಿತರ್ಕಳೊಡನೆ [1]ತೊಡರ್ದು[1] ನುಡಿದು ಸದುತ್ತರಂಗುಡುತಿರ್ಪ ಶುಕಶಾರಿಕಾನಿಕಾಯಂಗಳುಮಂ, ಪಂಚಾಗ್ನಿತಾಪತಪ್ತಮಾನಸರಪ್ಪ ತಪೋಧನಜನಕ್ಕೆ ತಪನತಾಪಮನಾಗಲೀಯದೆ ತಳಿರ್ದುಱುಗಲಂ ಪೊತ್ತು ನಭದೊಳ್ ನಲಿದಾಡುವ ಸೋಗೆನವಿಲ್ಗಳ ಪಿಂಡುಗಳುಮಂ, ಅಗ್ನಿಹೋತ್ರೋಪಚರಣಪರಿಣತಾಂತಃಕರಣರಪ್ಪ ಆಹಿತಾಗ್ನಿಗಳ ಮೆಯ್ಯೊಳೊಗೆದ ಶ್ರಮಸ್ವೇದಬಿಂದುಗಳುಮಂ ತಂತಮ್ಮೆಱಂಕೆಯ ಗಾಳಿಯೊಳಾಱಿಸುತ್ತಿರ್ಪ ರಾಜಹಂಸೆಗಳುಮಂ, ದೇವತಾರಾಧನಂಗೆಯ್ವ ತಪೋಧನರ್ಗಿರದೆ ಗದ್ದುಗೆಗಳಂ ಕಟ್ಟಿ ಧೂಪದೀಪಂಗಳುಮಂ ಕೊಟ್ಟು ಪರಿಯಷ್ಟಿಗೆಯ್ವ ಪಟುತರಮರ್ಕಟಸಮೂಹಂಗಳುಮಂ, ಕೃಚ್ಛ್ರಾತಿಕೃಚ್ಛ್ರಚಾಂದ್ರಾಯಣಸಾಂತಪನಾದಿಮಹಾತಪಂಗಳಿಂ ತಪ್ತರಾಗಿ ಕ್ಷೀಣಧಾತುಗಳಾಗಿಯುಂ ಮಾಣದೆ ನಡೆಪಾಡುತಿರ್ದಡಪಿ [2]ಕೆಡೆವ[2] ಜರತ್ತಾಪಸರ ಕೈಯುಂ ಪಿಡಿದೊಯ್ಯನೆತ್ತುವ ಗೋಲಾಂಗೂಲಜಾಲಮುಮಂ, ಹೋಮಾಗ್ನಿಯುಂ ನಂದಿಸಲುಂ ಕುಂದಿಸಲುಮೀಯದೆ ಶುಷ್ಕ[3]ಸಾಧನಂಗಳಂ ಸಂಧಿಸುವ[3] ಕರಿಕರೇಣುಗಳುಮಂ, ಸ್ನಾ[4]ತಕ[4]ವ್ರಾತಕ್ಕೆ ಶೌಚಕಾರ್ಯನಿಮಿತ್ತಂ [5]ದರಿಯ ಮಣ್ಣಂ ಕೋಡೊಳೆತ್ತಿ[5] ತಂದವರ

ಪಾ—1. ತೊಱಲ್ದು. ಕ ||, ತೊಡಲ್. ಗ || 2. ನಡೆವ. ಖ ||
3. ಸಮಿತ್ತುಗಳಂ ಸವರ್ತಿಸಿ ತಂದೀವ. ಕ || 4. ನ. ಕ ||
5. ದರಿಗೊಂಡು ಕೋಡೊಳ್ ಶುದ್ಧಮೃತ್ತಿಕೆಯಂ. ಖ ||

ಮುಂದಿಕ್ಕುವ ಭದ್ರಗಜವ್ರಜಮುಮಂ, ತೀರ್ಥಸ್ನಾನಾರ್ಥಂ [1]ಪರ[1]ಸ್ಥಾನಂಗೆಯ್ವ ಪಾನಪ್ರಸ್ಥಜನಂಗಳ ಧೌತವಸ್ತ್ರಪವಿತ್ರಾಕ್ಷಸೂತ್ರಂಗಳಂ ತಮ್ಮ ಕವಲ್ಗೊಂಬುಗಳೊಳ್ ನೇಱಿಸಿ ಕೊಂಡಿಂಬಿನೊಳವರೊಡನೆ ನಡೆವ ಸಾರಂಗಸಮೂಹಮುಮಂ, [2]ಭಿಕ್ಷುಗಳ ಭೈಕ್ಷಂಗಳೊಳ್ ಮಕ್ಷಿಕಾಸಂಗತಿ[2]ಯಾಗಲೀಯದೆ ತಮ್ಮ ಬಾಲಂಗ[3]ಳೊಳ್[3] ಬೀಸುತ್ತುಂ ಪೋಪ ಚಮರೀಮೃಗಂಗಳುಮಂ, ಕಾಂತಾರಭೈಕ್ಷಾಹಾರಿಗಳಪ್ಪ ಭಿಕ್ಷುಗಳ್ಗೆ ವೃಕ್ಷರೂಪದೊಳಿರ್ದು ಭಿಕ್ಷಮನಿಕ್ಕುವ ಯಕ್ಷದೇವತೆಯರುಮಂ, ಯೋಗಾಭ್ಯಾಸಂಗೆಯ್ವ ಯೋಗೀಂದ್ರಬೃಂದಕ್ಕೆ ಯೋಗಾಸನವಾಗಿ ಸುತ್ತುಗೊಂಡು ಬಿತ್ತರಂಗೆಯ್ವಂತಿರ್ದ ಭೋಗೀಂದ್ರವೃಂದಮುಮಂ, ಬಾಲಕರಂತೆ ಕಂದಮೂಲಫಲಂಗಳಂ ಪೆಱರ್ ತಂದಿಕ್ಕೆ ತಿಂದಾನಂದಮನಸ್ಕರಾಗಿ ನಿಂದ ತಪೋಧನರುಮಂ, ಚಕ್ಷುಶ್ಶ್ರುತಿಗಳಂತೆ ವಾಯುಭಕ್ಷಕರಾಗಿರ್ದ ಮುಮುಕ್ಷುನಿಕರಮುಮಂ, ನೀರ್ವಾನಸರಂತೆ ನೀರೊಳ್ ನೆಲಸಿರ್ದುದಕವಾಸಿಗಳುಮಂ, ಸಂಸಾರಸಾಗರಮನೀಯಂದದಿಂ ದಾಂಟುವುದೆಂದು ತೋಱುವಂದದಿಂದೊಂದೆ ಕಾಲೊಳ್ ನಿಂದಿರ್ದೇಕಪಾದವ್ರತಸ್ಥರುಮಂ, ಸಗ್ಗದ ಬಟ್ಟೆಯಂ [4]ಸುಟ್ಟಿ[4]ತೋಱುವಂತೆ ಕೈಯನೆತ್ತಿ ನಿಂದೂರ್ಧ್ವಬಾಹುವ್ರತಿಗಳುಮಂ, ಪಸರಿಸಿದ ಕುಸುಮದೆಸಳ ಕಸವರಂ ದೆಸೆದೆಸೆಗೆ [5]ಮಸುಳೆ[5] ಮಲಯಾನಿಳಂ ಬೀಸಿ ಕಳೆಯೆ ತ್ರಿಕಾಲದೊಳಂ ಜಲ್ವಾಯಿತನಂತೆ ಗಂಗಾಜಲಮಂ ತಂದು ತಳಿವ ಬೆಳ್ಮಗಿಲ್ಗಳುಮಂ, ಧರ್ಮ[6]ಶಾಸ್ತ್ರ[6]ವ್ಯಾಖ್ಯಾನಂಗೆಯ್ವ ಮುನಿಮುಖ್ಯರ ಪಕ್ಕದೊಳಾಗಳುಮಗಲದ ಕರಿರುರುಹರಿಣಶಶಕಸಾರಂಗಮೆ ಮೊದಲಾದ ಮೃಗಂಗಳೊಡನೆ ಬದ್ಧವೈರಮಂ ಪತ್ತುವಿಟ್ಟು ಬಂದೊಂದನ

ಪಾ—1. ಪ್ರ. ಕ ‖ 2. ಭೈಕ್ಷುಕಭೈಕ್ಷಂಗಳೊಳ್ ಮಕ್ಷಿಕಾಕ್ಷಿಪ್ತವಾ. ಗ ‖ ಖ ‖ 3. ಳಂ. ಖ ‖ 4. ನಿಟ್ಟಿಸಿ. ಕ. ‖ ಸುಟ್ಟಿಸಿ. ಗ ‖ 5. ಸೂಸೆ. ಕ ‖ 6. ಗ ‖ ಪ್ರತಿಯಲ್ಲಿಲ್ಲ.

ವುಂಕಿ ನೂಂಕಿ ಪತ್ತಿ ಕಿವಿಯಿತ್ತೊಱಲ್ದು ಕೇಳ್ವ ಸಿಂಹಶರಭಶಾರ್ದೂಲವ್ಯಾಳಾದಿಕ್ರೂರಮೃಗನಿವಹಮುಮಂ ಕಂಡಾತಪೋಧನರ ತಪೋವನದ ತಪಃಪ್ರಭಾವಕ್ಕಮಲ್ಲಿಯ ಪಶುಮೃಗಪಕ್ಷಿಜಾತಿಗಳ್ ಮೊದಲಾದ ಚರಾಚರಂಗಳ್ಗೆ ಪುಟ್ಟಿದುಪಶಮಾದಿಗುಣಕ್ಕಂ ಚೋದ್ಯಂಬಟ್ಟು ನೋಡುತಿರ್ದ ರಾಜಕುಮಾರನಂ ಅಲ್ಲಿರ್ದುದೊಂದು ರಾಜಕೀರಂ ಕಂಡು—ಎಲೆ ಮಹಾಪುರುಷ! ನೀನುಂ ಕುದುರೆಯುಂ ಕರಂ ಬಱಲ್ದಿರ್, ಇಂದಿನ ದಿವಸಮನೀಋಷ್ಯಾಶ್ರಮದೊಳ್ ವಿಶ್ರಮಿಸಿ ಪೋಗಿಮೆಂಬುದುಂ; ಆ ಪಕ್ಷಿಯ ಮಾತು ತನ್ನ ಮನಕ್ಕೆ ಬಂದು ಬಂದು ಪೂಗೊಳದ ತಡಿಯ ಮಾಮರದಡಿಯೊಳ್ ಹಲ್ಲಣಮಂ [1]ಬಿಟ್ಟು[1] ಕುದುರೆಯಂ ನೀರಂ ಕುಡಿಸಿ ತಾನುಂ ಸ್ನಾನಾದಿನಿತ್ಯನಿಯಮಂಗಳಂ ತೀರ್ಚಿಯಾಪೂಗೊಳದಿಂ ಪೊಱಮಟ್ಟು ತದಾಶ್ರಮದ ಗುರುಗಳ ಸಮೀಪಕ್ಕೆ ಬಂದವರ್ಗೆ ವೃದ್ಧಾನುಕ್ರಮದಿಂ ಪೊಡೆವಟ್ಟು—ನಿಮ್ಮಡಿ [2]ದೇವತಾ[2]ಸ್ವರೂಪಂ ತತ್ತ್ವಂ ತಪಂ ಧರ್ಮವೆಂಬಿವೆಂತಪ್ಪುವವನೆನಗಱಿಯೆ ಬೆಸಸಿಮೆನೆ; ಮುನೀಶ್ವರನಿಂತೆಂದಂ:—

ಸಾವುಂ ಪುಟ್ಟುಮದಿಲ್ಲದ। [೧೫
ನಾವನವಂ ದೇವನಾತನೆಂದುದೆ ತತ್ತ್ವಂ॥
ಜೀವದಯೆ ಧರ್ಮಮಿಂದ್ರಿಯ।
ಸೇವನೆಯಂ [3]ಬಿಟ್ಟೊಡದುವೆ ತಪಮುಪಶಮದಿಂ[3] ॥ 200

ಎಂದು ಯೋಗೀಶ್ವರನಾತನಭಿಪ್ರಾಯಮುಮಂ ಕಿಱಿದಱೊಳ್ ನೆಱೆಯೆ ಪೇೞ್ವುದುಮರಸಂ ಸಂತಸಂಬಟ್ಟು ಕುಳ್ಳಿರ್ಪನ್ನೆಗಮಾರಾಜಕೀರಂ

ಪಾ—1. ಇೞುಹಿ, ಕ ॥ 2. ಪರದೇವತಾ, ಗ ॥ ಪರಮದೇವತಾ, ಕ ॥
3. ಬಿಟ್ಟುನಡೆಯಲಂತದು ತಪಮುಂ, ಕ ॥ ; ಬಿಟ್ಟೊಡದುವೆ ತಪದುಪಶಮಮುಂ, ಗ ॥

ರಾಜಜಂಬೂರಂಭಾದಿಸ್ವಾದುಫಲಂಗಳಂ ತಂದೀಯೆ, ಆವನಾಸ್ವಾದಿಸಿ ವಿಗತಶ್ರಮನಾಗಿ ಮಿತ್ರನಪ್ಪ ಶುಕಪತತ್ರಿಗಿಂತೆಂದಂ:—

ತನು ರುಚಿ ರೂಪು ಸನ್ನುತವಯಸ್ಸ್ವರಚೇಷ್ಟೆಗಳಿಂದಮೊಂದಿ ನಿ|
ನ್ನನೆ ನೆಱೆ ಪೋಲ್ತುದೊಂದು ಗಿಳಿ ಬೇಡರ ಪಳ್ಳಿಯೊಳಿರ್ದು[1]ಕಂಡುಮೆ[1] ||
ನ್ನನೆ ಪಿಡಿ ಕಟ್ಟು ಕೊಲ್ಲಿವನನೆಂದುದು ದುರ್ಣಯದಿಂ ಸಮಂತು ನೀ|
ನೆನಗುಪಕಾರಮಂ ವಿನಯದಿಂ ನೆಱೆ ಮಾಳ್ಪುದಿದೇಂ ಸುಮಿತ್ರ ಪೇೞ್|

ಎಂಬುದುಂ; [೭

ಶ್ಲೋ || "ಮಾತಾಪ್ಯೇಕಾ ಪಿತಾಪ್ಯೇಕೋ ಮಮ ತಸ್ಯ ಚ ಪಕ್ಷಿಣಃ |
ಅಹಂ ಮುನಿ[2]ಭಿರಾನೀತೋ ನೀತಸ್ಸತು[2] ಗವಾಶನೈಃ ||" ೫೫

[ಟೀಕು—ಎನಗವಾಪಕ್ಷಿಗಂ ತಾಯುಮೊರ್ವಳ್ ತಂದೆಯುಮೊರ್ವಂ, ಎನ್ನನೀಮುನಿಗಳ್ ಕೊಂಡುಬಂದರ್, ಆಪಕ್ಕಿಯಂ ಕ್ರೂರರುಂ ಮ್ಲೇಚ್ಛರುಮಪ್ಪ ಬೇಡರ್ ಕೊಂಡುಪೋದರ್.]

ಮತ್ತಮಲ್ಲದೆಯುಂ, [೧೭

ಶ್ಲೋ || "ಅಹಂ ಮುನೀನಾಂ ವಚನಂ ಶೃಣೋಮಿ ಶೃಣೋತ್ಯಸೌ ಕ್ರೂರಗವಾಶನಾನಾಂ || ಪ್ರತ್ಯಕ್ಷಮೇತದ್ಭವತಾ ಪಿ ದೃಷ್ಟಂ ಸಂಸರ್ಗ[3]ಜಾ[3] ದೋಷಗುಣಾ ಭವಂತಿ ||" ೫೬

[ಟೀಕು—ನಾಂ ಮುನಿಗಳ ವಚನಮಂ ಕೇಳ್ವೆಂ. ಆಪಕ್ಷಿ ಕ್ರೂರರಪ್ಪ ಮ್ಲೇಚ್ಛರ ಮಾತಂ ಕೇಳ್ವುದು. ಇದು ಪ್ರತ್ಯಕ್ಷವಾಗಿ ನಿನ್ನಿಂದಮೆ ಕಾಣಲ್ಪಟ್ಟುದು; ಸಂಸರ್ಗದಿಂ ದೋಷಗುಣಂಗಳಹವು.] [೧೮

ಎಂದು ರಾಜಕೀರಂ ಪೇೞ್ದುದಱಿಂದೆಂತಪ್ಪ ಬುದ್ಧಿವಂತನುಂ ಸಂಸರ್ಗವಶದಿಂ ನಿಸರ್ಗಗುಣಮಂ ಪತ್ತುವಿಡುವುದು ಕಡುದಿಟಂ; ಆನೇನಂ ಪೇೞ್ದೊಡಂ ನೀಂ ಮೋನಂಗೊಂಡಿರ್ದಪೆ; ಇದು ನಿನ್ನ ಮುನ್ನಿನ ಭವದ[3]ದುಷ್ಕರ್ಮ[3]ಮೆಂದು ನೊಂದು ನುಡಿದ ದಮನಕಂಗೆ ಪಿಂಗಳ

ಪಾ—1. ಕಂಡೊಡೆ. ಗ || 2. ಮರಾನೀತೋಸೋಪಿನೀತೋ. ಗ || 3. ತೋ. ಕ || 4. ದ ಕರ್ಮ. ಗ ||

ಕನಿಂತೆಂದಂ:—ಸಂಜೀವಕನನೆಂತುಂ ಪರಿಹರಿಸುವನಲ್ಲನೆಂದು ಪಲವು ತೆಱದೊಳಂ ನುಡಿದು ನಿನ್ನಂ ಮೂಣಿಸಲಾಱಿದಾನುಸಿರದಿರ್ದೊಡಂ ನೀಂ [1]ಮೂಣದಾ[1]ಪ್ರಾಣಿಯ ಬೆನ್ನೊ[2]ಳ್[2]ಕಾರಣಂ ವಿರುದ್ಧಂಗಟ್ಟ ತಗುಳ್ದಪೆ: ನಿನ್ನಂ ಕಯ್ಯೊಡ್ಡಿ ಬೇಡಿಕೊಂಡಪೆನಿನ್ನಾದೊಡಂ ಉಸಿರದಿರೆನಲೊಡಂ; ದವನಕಂ ಬೆಕ್ಕಸಂಬಟ್ಟು ಮೃಗೇಂದ್ರನಿಂದ್ರನೀಲದಂತೆ ತೃಣಗ್ರಾಹಿಯಪ್ಪ ವೃಷಭೇಂದ್ರನ ಬುದ್ಧಿಯೊಳೇಕಗ್ರಾಹಿಯಾಗಿರ್ದಪೆ ನಿನ್ನೀಮರುಳನೆಂತು ತಿಳಿಪುವೆನೆಂದು ಮತ್ತಮಿಂತೆಂದಂ:— [೭

ಸಂಜೀವಕನಂ ಸಾಧುಸ |
ಮಂಜಸನಂ ಮಾಡಿ ದುಷ್ಟನೆಂದೀಗಳೆ ಎ ||
ನ್ನಂ ಜಡಿದು ನುಡಿವೆ [3]ಕೆಮ್ಮನೆ[3] | [೧೦
ಕುಂಜರಮದಹರಣ ನಿನಗೆ ಮತ್ತಂ ಪೇೞ್ವೆಂ ||201

ಅದೆಂತೆಂದೊಡಿಷ್ಟರ್ ಬಾರಿಸಿದೊಡಂ ಮಾಣದೆ ದುಷ್ಟರನೊಳ ಕೊಂಡು[4]ಕೆಟ್ಟರ[4] ಕಥೆಗಳಂ ಪೇೞ್ವೆಂ ಕೇಳೆಮೆಂದಿಂತೆಂದಂ:—

[5]ಶ್ಲೋ || "ನ ತ್ವವಿಜ್ಞಾತಶೀಲಾಯ ಗೃಹೇ ದದ್ಯಾತ್ ಪ್ರತಿಶ್ರಯಂ|
ಡಂಡುಕಸ್ಯ ಹಿ ದೋಷೇಣ ಹತಾ ಮಂದವಿಸರ್ಪಿಣೀ ||"೭೩

[ಟೀಕು—ಅಜ್ಞಾತಕುಲಶೀಲನಪ್ಪಾತನಂ ತನ್ನಾವಾಸವಂ ಪುಗಿಸಲಾಗದು; ಡುಂಡುಕನೆಂಬ ತಿಗುಣೆ ಮಾಡಿದ ದೋಷದಿಂ ಮಂದವಿಸರ್ಪಿಣಿಯೆಂಬ ವಸ್ತ್ರವ್ಯಗಂ ಕೆಟ್ಟುದು.]

ಅದೆಂತೆನೆ—ಪೇೞ್ಗುಂ:—

೧೩. ತಿಗುಣೆಯುಂ ಕೂಱೆಯುಂ.

ರಾಜಂ ನಿಳಿಂಪಭೂಪಮ | [೨೦
ನೋಜಂ ಕೌಶಾಂಬಿಯೆಂಬ ನಗರದೊಳಿರ್ದಂ ||

ಪಾ—1. ಮೂಣದಾ. ಗ || ನೀಂಮೂಣೆನಾ. ಖ || 2. ಳಿಂ. ಗ ||
3. ನಾವಿಲ. ಗ || ಖ || 4. ಭ್ರಷ್ಟರಾದವರ. ಕ ||
5. ಕೌಶಾಂಬಿಯೆಂಬಪುರದೊಳ್ ರಾಜೇಂದ್ರನೆಂಬರಸನಿರ್ದನಲ್ಲಿ ಕ || ಗ ||

ರಾಜಾಧಿರಾಜನನುಪಮ ।
ತೇಜಂ ರಾಜೇಂದ್ರಚಂದ್ರನೆಂಬ ನರೇಂದ್ರಂ ‖202

ವ‖ ಆರಾಜೇಂದ್ರನ ರಾಜಭವನದೊಳಗೆ,[5]

ನವಕಾಲಾಗುರುಧೂಪಧೂಮಮಲಿನಂ ನಾನಾವಿಧಾನೂನಚಿ ।
ತ್ರವಿತಾನೋತ್ತಮರತ್ನಭಿತ್ತಿರುಚಿರಂ ಸತ್ಕಾಂಚನೋದಂಚಜಾ ‖ [೫
ಳವಿಳಾಶೋಭಿತಮಾಗಳುಂ ಸೊಗಯಿಕುಂ ಶೋಭಾವಹಂ ಚಿತ್ರಸಂ ।
ಭವಲಕ್ಷ್ಮೀನಿಳಯಂ ಸಮಸ್ತಜನಚೇತೋಹಾರಿ ಶಯ್ಯಾಗೃಹಂ ‖203

ವ‖ ಅಂತೊಪ್ಪುವ ಶಯ್ಯಾಗೃಹದೊಳ್ ನೂತನರತ್ನರಚಿತಚಂಚತ್ಕಾಂಚನಮಯಮಂಚಾಗ್ರಸ್ಥಿತಮಂದಾಕಿನೀಪುಳಿನಾಯಮಾನಪ್ರಚ್ಛದಾಚ್ಛಾದಿತಮಪ್ಪ ಶಯ್ಯಾತಳದೊಳ್ ಮಂದವಿಸರ್ಪಿಣಿಯೆಂಬುದೊಂದು [1]ಪೇನಿರ್ಪುದು. ಅಲ್ಲಿಗೆ[1] ಡುಂಡುಕನೆಂಬ ತಿಗುಣೆ ಬಂದು—ಆನುಂ ನಿನ್ನ ಸಮೀಪದೊಳಿರ್ಪೆನೆನೆ; ಪೇನಿಂತೆಂದುದು:—ನೀನಪ್ಪೊಡೆ ವಿಷಮಶೀಲಂ, ನಿನ್ನನೊಳಕೊಂಡಂದು ಕೃಷ್ಣೋರಗನನೊಳಕೊಂಡ ಡುಂಡುಭಂಗಳ ಕಥೆಯೆನಗಕ್ಕುಮೆನೆ—ಡುಂಡುಕನದೆಂತೆನೆ—ಮಂದವಿಸರ್ಪಿಣಿ ಪೇಳ್ಗುಂ:— [೧೫

## ೧೪. ಕೃಷ್ಣೋರಗನನೊಳಕೊಂಡ ಒಳ್ಳೆಗಳ ಕಥೆ.

ಪ್ರಜಾಪಾಲನೆಂಬರಸು ಲೀಲೋದ್ಯಾನವನದೊಳ್ ಜಲಕೇಳಿನಿಮಿತ್ತಂ ಕ್ರೀಡಾಸರೋವರಮಂ ಮಾಡಿಸಿ ನೀರಂ ತೀವಿ ಮತ್ತಲ್ಲಿ ಜಲಕೇಳಿಯಾಡುವ ಗಾಡಿಕಾರ್ತಿಯರಂ ಕಾಡಲೆಂದೊಳ್ಳೆಗಳಂ ತಂದು ಬಿಡಿಸಿಯವರ್ಕೆ ಪಾಲನೆಱೆದು ನಡೆಪುತಿರ್ಪನ್ನೆಗಮಲ್ಲಿಗೊಂದು ಕೃಷ್ಣಶರಣೋರಗಂ ಬಂದು ಕೊಬ್ಬಿಯಾಡುವ ಡುಂಡುಭಂಗಳಂ ಕಂಡು—

ಪಾ—1. ಯೂಕಮಿರ್ಪುದು. ಅಕೂಜೆಯಿರ್ದ ತಾವಿಗೆ. ಕ ‖

ಆನುಂ ನಿಮ್ಮೊಡನಿರ್ದಪೆನೆಂದೊಡೊಳ್ಳೆಗಳ್—ಕರವೊಳ್ಳಿತ್ತು ಬನ್ನಿಮೆಂಬುದುಂ; ಅವಂ ಮಾರ್ಕಂಡುವೊಂದು ಪುರಾಣಡುಂಡುಭನಿಂತೆಂದುದು:—ಈವಿಷಧರಂ ಮಹಾವಿಷಧರಂ, ನಾವೆಲ್ಲಂ ವಿಷಧರರಾಗಿಯುಂ ನಿರ್ವಿಷರುಮಪ್ಪುದರಿಂದಿದರ್ಕಂ ನಮಗಂ ಸಹಚರತ್ವಮುಂ ಮಿತ್ರತ್ವಮುಮಾಗದದೆಂತೆನೆ: — [೫

ವಾಕ್ಯಂ || "ಕುಮಿತ್ರಸೇವಾಂ ನ ಕದಾಪಿ ಕುರ್ಯಾತ್ ||" ೭೮

ಎಂಬ ಕಥೆಯುಂ ಕೇಳ್ದರಿವುದಿಲ್ಲಕ್ಕುಮೆ ಎನೆ — ಡುಂಡುಭಂಗಳದೆಂತೆನೆ — ಪುರಾಣಡುಂಡುಭಂ ಪೇೞ್ಗುಂ: —

## ೧೫. ರಾಜಹಂಸನುಂ ಆಂದೆಯುಂ.

ಒಂದು ಮಹಾಟವಿಯೊಳ್ ಅತ್ಯಂತಶೋಭಾಕರಮಪ್ಪುದೊಂದು ಸರೋಜಾಕರಮುಂಟು. ಅಲ್ಲಿ,

ಶರದುದ್ಯಚ್ಚಾರುಚಂದ್ರೋಪಮವಿಶದಲಸತ್ಪಕ್ಷಯುಗ್ಮಂ ಸರೋಜಾ।
ಕರಲಕ್ಷ್ಮೀತಾರಹಾರಂ ತರುಣಬಿಸಲತಾಲೋಲ[1]ನಾತಾಮ್ರಚಂಚ[1] ॥
ಚ್ಚರಣದ್ವಂದ್ವಂ ಸ್ವಲೀಲಾಗತಿವಿರಚಿತವಾರಾಂಗನಾಶಿಕ್ಷನತ್ಯಾ। [೧೪
ದರದಿಂದಿರ್ಪಂ ಸುಮಿತ್ರಂ [2]ಪೆಸ[2]ರೊಳಸದೃಶಂ ರಾಜಹಂಸಾವತಂಸಂ॥

ವ॥ ಆರಾಜಹಂಸಂಗಂ ಕನಕಾಕ್ಷನೆಂಬುದೊಂದಾಂದೆಗಂ ಪರಮಮಿತ್ರತ್ವಮಾಗಿ ಕೆಲವು ಕಾಲಂ ಸಲುತ್ತಿರೆ; ಕನಕಾಕ್ಷನ ನಿವಾಸಮಪ್ಪ ಮಹಾವಟವೃಕ್ಷದ ಸಮೀಪದೊಳನೂನಮದಾಂಧಗಂಧಸಿಂಧುರಘಟಾನಿನಾದಬಧಿರಿತದಿಗಂತರಾಳಮುಂ ರಥಚಕ್ರಚೀತ್ಕಾರ[3]ಭೀಕರ[3]ಮುಂ ಹಯಹೇಷಾಭೀಷಣಮುಂ ಉದ್ಭಟಸುಭಟಚಕ್ರಹೂಂಕಾರಭಯಂಕರಮುಮಪ್ಪುದೊಂದು ಮಹಾಕಟಕಂ ಬಂದು ಬಿಡುವುದುಂ; ಅದಂ ಕಂಡಾಸ್ಥೆಗಾನಂದಂ ಪುಟ್ಟೆ ತನಗೆ ಪರಮಮಿತ್ರನಪ್ಪ ಸುಮಿತ್ರನಲ್ಲಿಗೆ ಬಂದು

ಪಾ—1. ಕಾಂತಾಭ್ರಚೂಡಂ, ಗ॥ 2. ಪೆಱ, ಗ॥ 3. ಭೀಷಣ, ಗ॥

ಇಂತೆಂದುದು:—ನಿನ್ನ ಮನೆಗೆಂದುಂ ಬಂದಾಂ ತುಷ್ಟನಾಗಿ ಪೋಪೆಂ ನೀನೆನ್ನ ಮನೆಗೆಂದುಂ ಬಂದಱಿಯೆ, ಇಂದು ಬಂದೆನ್ನ ಸಿರಿಯುಮಂ ಸಂಪತ್ತುಮಂ ನೋೞ್ಪುದೆನೆ; ರಾಜಹಂಸನಿಂತೆಂದಂ:—ನಿನ್ನ ಮನೆಯೆಂಬುದೆನ್ನ ಮನೆ, ಎನ್ನ ಮನೆಯೆಂಬುದು ನಿನ್ನ ಮನೆ, ನೀಂ ಬೇಱಾಂ ಬೇಱೆಂಬ ಭಿನ್ನಬುದ್ಧಿ ನಿನಗಂ ನನಗಂ ಬೇಡದೆಂತೆನೆ:— [೫

ಶ್ಲೋ || "ಅಹಮಿಹೈವ ವಸನ್ನಪಿ ತಾವಕಸ್ತ್ವಮಪಿ ತತ್ರ ವಸನ್ನಪಿ ಮಾಮಕಃ|
ಹೃದಯಸಂಗಮ ಏವ ಸುಸಂಗಮೋ ನ ತನುಸಂಗಮ ಏವ ಸುಸಂಗಮಃ||"

[ಟೀಕು—ನಾನಿಲ್ಲಿರ್ದರ್ೞಂ ನಿನ್ನವನು, ನೀನಲ್ಲಿರ್ದರ್ೞಂ ಎನ್ನವನು, ಮನಸ್ಸಂಗಮವೆ ಸಂಗಮವು, ಶರೀರಸಂಯೋಗವೆಂಬುದು ಪ್ರಯೋಜನವಲ್ಲ.]

ಎಂದಿಂತು [1]ಮಿತ್ರಂಗೆ[1] ಪೇೞ್ದ ಲಕ್ಷಣಂಗಳೊಳವು; ನಿನಗಮೆನಗ ಮೇತಱ[3]ೊಳಂ ವಿಕಲ್ಪಮಿಲ್ಲ, ನಿಶ್ಚಿಂತಮಿರೆಂಬುದುಮಾಂದೆ ಇಂತೆಂದುದು:—ನೀನೆಂದುದಪ್ಪುದಾದೊಡಂ ಲೌಕಿಕೋಕ್ತಿಯಿಂತಪ್ಪುದಲ್ತೆ—

ಶ್ಲೋ || "ದದಾತಿ ಪ್ರತಿಗೃಹ್ಣಾತಿ [2]ಗೋಪ್ಯ[2]ಮಾಖ್ಯಾತಿ ಪೃಚ್ಛತಿ ।
ಭುಂಕ್ತೇ ಭೋಜಯತೇ ಚೈವ ಷಡ್ವಿಧಂ [3]ಪ್ರೀತಿ[3]ಲಕ್ಷಣಂ ||"೮೦

[ಟೀಕು—ತಾಂ ಕುಡುವುದು, ಮಗುೞ್ದವರ ಕೈಯಲ್ಲೀಸುಕೊಂಬುದು, ಗುಪ್ತಮಪ್ಪ ಕಾರ್ಯವಂ ಪೇೞ್ವುದು, ಮರೆೞ ತಾನವರಂ ಬೆಸಗೊಂಬುದು, ತಾನುಂಬುದು, ಮಗುೞ್ದವರ್ಗಿಕ್ಕುವುದು: ಎಂದಿಂತು [4]ಪ್ರೀತಿಯಾಱು ತೆಱನಕ್ಕುಂ[4].] [೧೬

ಅದಱಿಂ ನೀನಿಂದೆನ್ನ ಮನೆಗೆ ಬಾರದಂದು ನಿನ್ನ ಕೆಳೆ ಟಕ್ಕರ ಕೆಳೆಯಂತಕ್ಕುಮಲ್ಲದೆ ತಕ್ಕರ ಕೆಳೆಯಂತೊಪ್ಪಲಱಿಯದು, ಅಮೋಘಂ ಬರಲ್ವೇೞ್ಕುಮೆಂದು ನಯಮಂ ನುಡಿದಾಗ್ರಹಂಗೆಯ್ದು ಕಾಲಂ ಪಿಡಿಯೆ;—ನಾಂ ಪೋಗದಿರ್ದೊಡೆ ಕನಕಾಕ್ಷಂ ಮನಃಕ್ಷತಂಬಡುಗುಮೆಂದು ಪೋಗಲ್ಬಗೆದು, [೨೦

ಪಾ—1. ಸತ್ಪುರುಷರ ಸಂಗತಿಗೆ, ಖ || ಗ || 2. ಗುಹ್ಯ, ಕ || ಗ ||
3. ಬಂಧು, ಕ || ಮಿತ್ರ, ಗ || 4. ಪ್ರೀತಿಗೆ ಪೇೞ್ದ ಲಕ್ಷಣಂಗಳೊಳವು, ಗ ||

ವಾಕ್ಯಂ || "ಸ್ನೇಹೋಪಿ ಕಾರಣಮನರ್ಥಪರಂಪರಾಯಾಃ ||" ೪೧

[ಟೀಕಾ—ಅನರ್ಥಪರಂಪರೆಗೆ ಸ್ನೇಹಮೇ ಕಾರಣಂ]

ಎಂಬರ್ಥಮಂ ಯಥಾರ್ಥಂ ಮಾಡಲ್ವೇಪಂತೆ ಸುಮಿತ್ರಂ ಕುಮಿತ್ರನಪ್ಪಂದೆಯ ಪಿಂದುಪಿಂದನೆ ಬಂದು ರಾತ್ರಿಯೊಳಾರಾತ್ರಿಚರಸ್ಥಾನಮನೆಯ್ದೆವಂದಿರ್ಪುದುಂ; [೫

ಎಸೆವೀಸಿಂಧುರವಿಾರಥಪ್ರಕರವಿಾಜಾತ್ಯಶ್ವವಿಾರೌದ್ರವೀ ।
ರಸಮೂಹಂ ನೆಗೞ್ದೀ*ಮನೋಹರವಧೂಸಂದೋಹವಿಾರಾಜಕ ॥
ಪ್ರಸರಂ ನಿಕ್ಕುವಮೆನ್ನದೆಂದು ವಿಹಗೇಂದ್ರಂಗಾಂದೆ ತೋಱಿತ್ತು ಸಂ ।
ತಸದಿಂ ತೋಱಿದರಾರೊ ಬಂಧುಜನಕಾತ್ಮೀಯಾಧಿಕೈಶ್ವರ್ಯಮಂ ॥

ವ॥ ಅಂತಾಪಿಂಗಲಿಯೆಂಬ ಅಂದೆಗೀರನಾಹಂಸೆಗೆ ಕಾಪುರುಷನಂತೆ ತನಗಿಲ್ಲದ ಮೈಮೆಯನುಂಟುಮಾಡಿ ನುಡಿಯುತ್ತಿರ್ಪನ್ನೆಗಂ, ನಿಶಾವಸಾನಸಮಯದೊಳ್ ಪಯಣದ ಸೂಳುಗಾಳೆಗಳಂ ಪಿಡಿದು ಬೀಡೆತ್ತಲುದ್ಯೋಗಂಗೆಯ್ವುದಂ ಕಂಡು ಧವಲಪಕ್ಷಂ ಕನಕಾಕ್ಷಂಗಿಂತೆಂದಂ:— ನಿನ್ನ ಪಡೆಯುಪ್ಪೊಡೇಕಿಲ್ಲಿಂದೆತ್ತಿ ಪೋದಪುದು ಎಂಬುದುಂ;—ಎನ್ನ ನಿಯಾಮಮಿಲ್ಲದೆತ್ತಲುಱಿಯದಿದನೀಗಳೆ ಮಾಣಿಸುವೆನೆಂದು ಬಲ್ಲಾಳಪ್ಪ ಬಿಲ್ಲಬಿನ್ನಣಿಯಿದಿರ ರೂಪನೆತ್ತಲೀಯದೊಂದೆ [1]ಕೋಲಿಂ[1]ದಿಸುವಂತೊಂದೆ ಕೊರಲೊಳೆತ್ತಲೀಯದೆ ಸೇವಿಸುವುದುಮಾಸರಮನರಸಂ ಕೇಳ್ದಂದಿನ ಪಯಣಮುಪ್ಪಯಣಮೆಂದಂದಿನ ಪಯಣಮುಂ ಮಾಣ್ದು ಮಱುದಿವಸಂ ಯಾಮಿನೀವಿರಾಮಮಪ್ಪುದುಂ ಪ್ರಯಾಣಭೇರಿಯಂ ಪೊಯ್ಸಿದಾಗಳದಂ ವಿಹಗೇಂದ್ರಂ ಕೇಳ್ದಾಂದೆಗೆಂದುದು:— ಭಾವಾ! ನಿನ್ನ ಬೀಡಿಂದೇಕೆತ್ತಿಪೋದಪ್ಪುದೆಂಬುದುಮೆನ್ನಾಜ್ಞೆಯಿಲ್ಲದೆಲ್ಲಿಗ [2]ಮೇಕೆ[2] ಪೋಕುಂ, ಚಂದ್ರೋದಯದೊಳ್ ಸಮುದ್ರಘೋಷಮುಮಾ

ಪಾ—1. ಕೊರಲಿಂ. ಗ॥ 2. ನುತ್ತಿ. ಗ॥

ದಿತ್ಯೋದಯದೊಳೆನ್ನ ಬೀಡಿನ ಘೋಷಮುಮೆಂದುವಿಹಾಯಂದಮೆ ಎಂದು, ಮೞೆ[1]ಗಾಲಮುಂಟೆಂದು[1] ತಪ್ಪಿದ ಜೋಯಿಸಂ ಬಾವಿಯ ನೀರನಡಿಕಿ ನೀರ್ವೊಯ್ದನೆಂಬ ಕಥೆಯಂತೆ ಪುಸಿಯರಸುತನದ ಬೆಸನದೊಳ್ ತೊಡರ್ದು ಸಿರದಿರ್ದನಪ್ಪೊಡೆ ಎನ್ನ ಕೆಳೆಯನೊಳಗನಱಿದಪನೆಂದು ನಾಲ್ಕೈದು ಕೊರ[2]ಲಂ[2] ಸಿಲ್ಕುವೆಳದು ಮತ್ತಂ [3]ಮೇಲ್ಮಟ್ಟಿದಾ[3]ಸರಮಂ ಕೇಳ್ದು ಆಪಡೆ[4] ಪಯಣಮನೆಂದುಂ ಮಾಣ್ಬುದುಂ; ಅದೆ[4]ಲ್ಲಮನರಸಂ ಕೇಳ್ದು ಮಱುದೆವಸೆಮರ್ಧರಾತ್ರಿಯೊಳ್ ಪೋಗಲುದ್ಯೋಗಂಗೆಯ್ವುದುಂ; ರಾಜಹಂಸಂ ಕಂಡೇಂ ಗಡಾ ಕನಕಾಕ್ಷಾ! ನಿನ್ನ ಪಡೆ ಪೇೞ್ದ ಮುನ್ನಿನಂದಮಲ್ಲ ಇಂದು ನಡುವಿರುಳೆ ನಡೆಯಲೊಡರಿಸಿದಪುದೆಂಬುದುಮಾಂದೆಯಿಂತೆಂದುದು:— ಈಪಡೆಯನಾಂ ಮುನ್ನಂ ಪರಮಂಡಲಕ್ಕೆ ಪೇೞ್ದ ಕಾರಣದಿಂದೆತ್ತಲ್ಬಗೆದಪ್ಪುದಿದನಾನಿಂದು ಪೋಗಲೀಯೆನೆಂದು ಪಲವುಂ ಸೂೞುಲಿದು ಪಲ್ಗರ್ಚಿ ಕಲ್ಲ[5]ಸರದಿಂ[5] ಸಿಲ್ಕುವೆಳದು [6]ಮಾಣ್ಬುದುಮದೆಲ್ಲಮನರಸಂ[6] ಕೇಳ್ದು ಶಕುನಿಗರಂ ಕರೆಯಿಸಿ, ಈಶಕುನಮದೇನಂ ಪೇೞ್ದಪ್ಪುದೆಂದು ಬೆಸಗೊಳ್ವುದುಂ; ಅಲ್ಲಿ [7]ಶಕುನಿಗ[7]ರೊಳೊರ್ವನಿಂತೆಂದಂ:—ಈಪಕ್ಷಿ ನುಡಿದ ಮೂಱುಂ ಸರದಭಿಪ್ರಾಯದೊಳ್ ನಮ್ಮ ಶತ್ರುವಕ್ಕೆ ಈಪಕ್ಕಿಯ ಮಿತ್ರನಕ್ಕೆ ಸಾಗುಮೆಂದು ಪೇೞ್ವುದುಂ; ಎನ್ನ ಮನಮುಂ ನಿನ್ನ ಕಂಡ ಯುಕ್ತಿಯುಮೊಂದಾಗಿರ್ದುದು ಇನ್ನಿದರ್ಕೆ ತಕ್ಕುದನಾನೆ ಬಲ್ಲೆನೆಂದು ಧನುರ್ವೇದಿಯುಂ ಶಬ್ದವೇದಿಯುಮಪ್ಪ ಬಿಲ್ಲ ಬಿನ್ನಣಿಯನೊರ್ವನಂ ಕರೆದು—ನಿಚ್ಚಂ ವಕ್ರಿಸುತ್ತಿರ್ಪ [8]ನಿಚ್ಚಲ[8] ವಕ್ಕಿಯನೆಚ್ಚು ಬಾಯೆಂದು ಪೇೞ್ವುದುಮಾತನಂತೆಗೆಯ್ವು

ಪಾ—1. ಗಾದೆಕಂಗೆಯ್ದು. ಗ || ಖ ||
2. ಲೆಳಳ್ ಗ || ಖ ||
3. ಮೇಲೆಮಟ್ಟೊಡಾ. ಗ || ಖ ||
4. ಪಯಣಮುಂಮಾಣ್ದುದೆ. ಗ ||
5. ಕಠದಿಂ. ಖ ||
6. ಮೇಲುಮಟ್ಟಿದಾಸರಮಂ. ಗ ||
7. ಶಕುನಿಗ ಗ ||
8. ನುಚ್ಚಲು. ಖ ||, ನಿಚ್ಚಲು. ಗ ||

ನೆಂದು ಆಂದೆಯಿರ್ದ ಮರದ ಸಮೀಪಕ್ಕೆ ಬಂದು ಬಱಿಕ್ಕದಱ ಸರಮ ನೆಲ್ಲಿಯುಂ ಕೇಳಲಿಂಬಿಲ್ಲದೆ ಕೊಂಬಿನೊಳ್ ವಸಿಯಿಸಿ ಮಿಸುಗುತಿರ್ದ ರಾಜಹಂಸನಂ ಆಂದೆಯೆಂದೇ ಬಗೆದು,

ಭರದಿಂ ರಾಮಂ ಕಾಕಾ ।
ಸುರನಂ ಮುನಿದಿಸುವ ತೆಱದಿನೆಚ್ಚಂ ವಿಹಗೇ ॥ [೫
ಶ್ವರನೆನಿಪ [1]ಹಂಸನಂ ವರ[1] ॥
ಶರಾಸನಾಗಮವಿಶಾರದಂ ತತ್‌ಕ್ಷಣದಿಂ ॥206

ಅಂತೆಚ್ಚ ಕೋಲಿಂ ಮುನ್ನಮೆ ಸುರುಳ್ದುರುಳ್ದು ಹಂಸಂ ವಿಧ್ವಂಸ ನಮನೆಯ್ದಿತ್ತು.

(೧೪ ನೆಯ ಕಥೆಯ ಶೇಷ.)

ಅದಱಿಂ, [೧೦

ಶ್ಲೋ || "ಅಕಾಲಚರ್ಯಾಂ ವಿಷಮೇಷು ಗೋಷ್ಠೀಂ ಕುಮಿತ್ರಸೇವಾಂ ನ ಕ
ದಾಪಿ ಕುರ್ಯಾತ್ || ಪಶ್ಯಾಂಡಜಂ ಪದ್ಮವನೇ ಪ್ರಸೂತಂ ಧನುರ್ವಿಮು
ಕ್ತೇನ ಶರೇಣ ವಿದ್ಧಂ ||"೮೨

[ಟೀಕು—ಅಕಾಲದಲ್ಲಿ ಚರಿಸಲಾಗದು, ವಿಷಮರೊಡನೆ ಗೋಷ್ಠಿಯಂ ಮಾಡಲಾಗದು ಕುಮಿತ್ರನ ಸಂಗಡ ಆಡಲಾಗದು: ಆದು ಹೇಂಗೆಂದೊಡೆ—ಪದ್ಮವನದಲ್ಲಿ ಪುಟ್ಟಿದ ರಾಜ ಹಂಸೆಯಾಂದೆಯು ಕೆಳೆಗೊಂಡ ಕಾರಣದಿಂದೊಂದೆ ಬಾಣದಿಂ ಮರಣಮನೆಯ್ದಿತ್ತು.]

ಎಂದಿಂತು ಬುದ್ಧಿವಂತನಪ್ಪೊಳ್ಳೆ ಪೇೞ್ದೊಡದಂ ಮಾಣದೆ ಮಿತ್ರ ನೊಳ್ಳೆಗಳ್ ದರ್ಪದಿಂ ಸರ್ಪನಂ ನಡುವಿಟ್ಟುಕೊಂಡಿರ್ಪುದುಮಾಪಾ ವು ಪಾಲಂ ಕುಡಿದು ಕೊಬ್ಬಿ ನೆಱೆದಾಡುತ್ತುಮಿರ್ದುದು. ಅನ್ನೆಗಮಿತ್ತಂ

ಅಳಿನೀಸಂಕುಳವೇಷ್ಟಿತಪ್ರವಿಳಸನ್ಮಲ್ಲೀವನಂ ಚಾರುಪಾ । [೨೦
ಟಳಮಸ್ತಂಗತಕುಂದವೃಂದಮೆಸೆದತ್ತೆತ್ತಂ ದವೋಗ್ರಾಗ್ನಿದ ॥
ಗ್ಧಳತಾವ್ರಾತಮುಪಾಸ್ತಮೇಘಮುದಿತಾಬ್ದೌಘಂ ನಿದಾಘಂ ಮಹೀ ।
ತಳದೊಳ್ ತಪ್ತಮಹೀರಜಂ ದಿವಸಕೃತ್ತಾಪಾರ್ತದೇಹಿವ್ರಜಂ ॥207

ಪಾ—1. ರಾಜಹಂಸನ. ಗ ||

ವ|| ಅಂತೊಪ್ಪುವ ನಿದಾಘಸಮಯದೊಳ್ ಪ್ರಜಾಪಾಲಮಹೀಪಾಲಂ ಜಲಕ್ರೀಡಾಸಕ್ತಚಿತ್ತನಾಗಿ ಮದನಮತ್ತಮಾತಂಗಗಮನೆಯರುಂ ಮಾರವೀರಧನುಃಖಂಡಾಯಮಾನಭ್ರೂಲತಾವಿಭ್ರಮಭ್ರಾಜಿತೆಯರುಂ ಮಣಿಮಯಮಂಜೀರಮಂಜುಶಿಂಜಿತವಾಚಾಳಚಾರುಚರಣೆಯರುಂ [1]ಮದ[1]ಮದಿರಾಮದೋನ್ಮತ್ತೆಯರುಂ ಮಕರಕೇತನರಾಜ್ಯಾಧಿದೇವತೆಯರುಮಪ್ಪ ನಿಜಾಂತಃಪುರಪುರಂಧ್ರಿಯರ್ವೆರಸು ಪೋಗಿ ಜಲಕ್ರೀಡೆಯಾಡುತಿರ್ಪುದುಂ; ಅಂದಲ್ಲಿರ್ದ ಸರ್ಪನರಸಿಯುಂ ಪಿಡಿದು ಬಿಡದಿರ್ಪುದುಮದನರಸಂ ಕಂಡೆಂತಾನುಂ ಬಿಡಿಸಿ ಕಳೆದಾಸರ್ಪನುಮನೊಳ್ಳೆಗಳುಮಂ ಶತಖಂಡಂಮಾಡಿ [2]ಕೊಲಿಸಿದಂ.[2] ಅದಱಿಂ, [೯

ಶ್ಲೋ || "ಸುಖಂ ವಸಂತಃ ಪಯಸಾ ಚ ಪುಷ್ಟಾಃ ನೃಪಸ್ಯ ಭಾರ್ಯಾಸಹದೀಪ್ಯಮಾನಾಃ ।
ತೇ ಡುಂಡುಭಾ ಸ್ಸರ್ಪಕೃತಾಪರಾಧಾ[3]ನ್ನಷ್ಟಾ ಧ್ರುವಂ[3] ದುಷ್ಟಪರಿಗ್ರಹೇಣ ||" ೮೩

[ಟೀಕು—ಪಾಲಂ ಕುಡಿದು ಸುಖದೊಳ್ ನೃಪಸತಿಯರ ಕೂಡಿರ್ದೊಳ್ಳೆಗಳ್ ಸರ್ಪಕೃತಾಪರಾಧನಿಮಿತ್ತಂ ಕೊಲಿಸಿಕೊಳಲ್ಪಟ್ಟುವು.] [೧೩

(೧೩ನೆಯ ಕಥೆಯ ಶೇಷ)

ಅದಱಿಂ ನಿನ್ನನೊಳಕೊಂ[4]ಡಂದೆ[4] ನಗಮಾವಿಧಿಯಕ್ಕುಮೆಂದುಮಂ ದವಿಸರ್ಪಿಣಿ ಪೇೞ್ವುದುಂ; ಡುಂಡುಕನಿಂತೆಂದುದು:— ನಿನಗಿನಿತ [5]ವಸ್ಥೆಯುಮನಿಷ್ಟಮುಮಾಗಲ್ವೇಡ[5], ಆನಿಲ್ಲಿರ್ಪೆನಲ್ಲೆಂ, [6]ಅತಿಥಿಯುಮನಭ್ಯಾಗತನುಮನವಜ್ಞೆಗೆಯ್ವುದೇತಱ ಧರ್ಮಂ?[6] ಅದೆಂತೆನೆ:—

ಶ್ಲೋ || "ಗುರುರಗ್ನಿರ್ದ್ವಿಜಾತೀನಾಂ ವರ್ಣಾನಾಂ ಬ್ರಾಹ್ಮಣೋ ಗುರುಃ।
ಪತಿರೇವ ಗುರು ಸ್ಸ್ತ್ರೀಣಾಂ ಸರ್ವಸ್ಯಾಭ್ಯಾಗತೋ ಗುರುಃ ||" ೮೪

[ಟೀಕು— ಬ್ರಾಹ್ಮಣಂಗೆ ಅಗ್ನಿಯೇ ಗುರು, ಕ್ಷತ್ರಿಯವೈಶ್ಯಶೂದ್ರರ್ಗೆ ಬ್ರಾಹ್ಮಣನೇ ಗುರು, ಸತಿಗೆ ಪತಿಯೇ ಗುರು, ಎಲ್ಲರ್ಗಮಭ್ಯಾಗತನೇ ಗುರು.]

---

ಪಾ—1. ವಚನ ಗ || 2. ಕೊಂದಂ. ಗ || 3. ನ್ನಷ್ಟಂ ಯಯುಃ. ಗ ||
4. ಡೊಡೆ. ಗ || 5. ನಿಷ್ಟಮಾಗಲ್. ಗ || 6. ......ಧರ್ಮಮಲ್ಲಂ.ಗ || ; ಅತಿಥಿಯುಮಭ್ಯಾಗತನಾಗಿಬಂದನಿಂದಿನ ದಿವಸಮೆನ್ನಸಿರಲೀವುದ ಧರ್ಮಂ. ಕ ||

ಮತ್ತಮದಲ್ಲದೆಯುಂ,

ಶ್ಲೋ || "ಅತಿಥಿರ್ಯಸ್ಯ ಭಗ್ನಾಶೋ ಗೃಹಾತ್ಪ್ರತಿನಿವರ್ತತೇ|
ಸ ದತ್ವಾ ದುಷ್ಕೃತಂ ತಸ್ಯ ಪುಣ್ಯಮಾದಾಯ ಗಚ್ಛತಿ || "೮೫

[ಟೀಕು—ಆವನಾನೊರ್ವನ ಮನೆಗೆ ಬಂದತಿಥಿ ಭಗ್ನಮನಸ್ಕನಾದೊಡೆ ತಾಂ ಮಾಡಿದ ಪಾಪವಂ ಗೃಹಸ್ಥಂಗೆ ಕೊಟ್ಟು ಆಗೃಹಸ್ಥನುಪಾರ್ಜಿಸಿದ ಪುಣ್ಯಮನಾಯ್ವಂ.] [೫

[1]ಎಂಬುದು ಮನೆವಾಳ್ತಿ ದಮ್ಮಮುಮೆಲ್ಲಮಂ ನೀನೆ ಬಲ್ಲೆ[1] ಯೆಂದೊಡೆ; ಮಂದವಿಸರ್ಪಿಣಿ ಮತಿಭ್ರಾಂತಿಯಿಂ ದುಷ್ಟನಂ ಶಿಷ್ಟನೆಂದೆಡೆಗೊಟ್ಟರಲ್; ಇತ್ತಲರಸಂ ಸಿರಿಮಂಚದೊಳ್ ಪವಡಿಸಲೊಡಂ;

ಪರಿತಂದು ತಿಂದು ಮಂಚಾಂ !
ತರದೊಳ್ ತಚ್ಛಿದ್ರಭಾಗಮಂ ಪೊಕ್ಕುದತಿ || [೧೦
ತ್ವರಿತಗತಿ ಮತ್ಕುಣಂ ಮುಳಿ |
ಪರಿಪೀತನರೇಂದ್ರರುಧಿರಮಾಕಣಮಾಗಳ್ ||೨೦೮

ಅಂತು ಡುಂಡುಕತುಂಡಖಂಡಿತಶರೀರನರಸಂ ಘೋಂಕನೆಚ್ಚಿಱುವುದುಂ; ಸೆಜ್ಜೆಯ ಕಾಪಿನವರ್ ಪರಿತಂದು ಶೋಧಿಸಿ ನೋಡಿ ಪಚ್ಚಡಿಕೆಯುಂ ಪತ್ತಿರ್ದ [2]ಕೂಱೆಯಂ[2] ಕಂಡರಸಂಗೆ ನಿದ್ರಾಭಂಗಮಂ ಮಾಡಿದ ದ್ರೋ[3]ಹನಿ[3]ದಕ್ಕುಮೆಂದು ಮಂದವಿಸರ್ಪಿಣಿಯುಂ ಕೊಂದರ್.

ಆದಱಿಂ, [೧೨

ಶ್ಲೋ || "ಯೋಽವಿನೀತಸ್ಯ ಸಂಸ್ಥಾನಂ ದದಾತಿ ಸ ವಿನಶ್ಯತಿ|
ಡುಂಡುಕಸ್ಯಾಪರಾಧೇನ ಹತಾ ಮಂದವಿಸರ್ಪಿಣೀ || "೮೬

[ಟೀಕು—ಆವನಾನೊರ್ವಂ ದುರ್ಜನನನೊಳಕೊಂಡಿಹಂ, ಅವಂ ಕಿಡುವಂ. ಅದು ಎಹಗೆಂದೊಡೆ— ಡುಂಡುಕನೆಂಬ ತಿಗುಣೆಯ ಅಪರಾಧದಿಂ ಮಂದವಿಸರ್ಪಿಣಿಯೆಂಬ ಪೇನು ಕೊಲಿಸಿಕೊಳಲ್ಪಟ್ಟುದು.]

ಪಾ—1. ಎಂಬುದು ಮನುಸ್ಮೃತಿಧರ್ಮಂ, ಇನ್ನಾವುದುಮಂ ನೀನೆ ಬಲ್ಲೆ. ಕ ||
2. ಪೇನಂ. ಕ || ಖ || 3. ಹಿಯಿ. ಕ ||

ಎಂದಿಂತನೇಕಪ್ರಕಾರವಪ್ಪುಪಕಥೆಗಳಂ ಕುಱಿತು ದೃಷ್ಟಾಂತಂಗಳಂ ನೀತಿಶಾಸ್ತ್ರಾಭಿಪ್ರಾಯಂಗಳಂ ಪೇಳ್ದು ದವನಕಂ ಮತ್ತಮಿಂತೆಂದಂ:—ನಿನ್ನ ಮರುಳ್ತನಕ್ಕೆ ಮುನ್ನಮೆ ಬೇಸತ್ತು ಬಿಟ್ಟು ಪರಿಗ್ರಹಮೆಲ್ಲಂ ಪರೆದು ಪೋದುದು. ಆನುಂ ಕಾರ್ಯಸಹಾಯನಲ್ಲದೆ ಖಡ್ಗಸಹಾಯ[1]ನಲ್ಲೆಂ. ಅಂತಾಗಿಯುಮೆನ್ನಱಿವುದೆಲ್ಲಮಂ ನೆಱೆಯೆ[1] ಬಿನ್ನಪಂಗೆ[2]ಯ್ದೆಂ. ಇ[2]ನ್ನಪ್ಪೊಡೆನ್ನ ಮೇಲೆ ದೋಷಮಿಲ್ಲ, ಮೇಲಪ್ಪುದಂ ನೀನೆ ಬಲ್ಲೆಯೆಂಬುದುಮುದಱ ಕುಮಂತ್ರದಿಂ ಪಿಂಗಳಕನೆಂಬ ಗ್ರಹಂ ಸದಾಗ್ರಹಮುನೆಂತಾನುಂ ಪತ್ತುವಿಟ್ಟಂತೆಂದುದು:— ನೀನೆನಗಿನಿತಾಗ್ರಹಂಗೆಯ್ದು ಬುದ್ಧಿವೇಳ್ದುದೆಲ್ಲಮೆನ್ನ ಹಾನಿವೃದ್ಧಿಗಳ್ ನಿನ್ನವಪ್ಪ ಕಾರಣದಿಂ [3]ಪೇಳ್ದೆ. ಆನುಮಿನಿತುಂ ಮಾಕೊಂಡುದೆಲ್ಲಂ ಸಂಜೀವಕನಪ್ಪೊಡೆ ಪಶು; ನಾನಪ್ಪೊಡೆ ಮೃಗಾಧಿರಾಜನದನೆಂತುಂ ಕೊಲ್ವೆನೆಂದಿರ್ದೆಂ. ನೀನೆಂದುದು ತಪ್ಪದು. ಅರಸುಗೆಯ್ವಾತಂ ಮಂತ್ರಿಯ ಪೇಳ್ದಕ್ಕೆಗೆಯ್ವುಲೆವೇೞ್ಕುಂ. ಅದೆಂತೆನೆ:— [೧೩

ಶ್ಲೋ॥ ಸ ಕಿಂಸಖಾ ಸಾಧು ನ ಶಾಸ್ತಿ ಯೋಽಧಿಪಂ ಹಿತಾನ್ನ ಯಸ್ಸಂಶೃಣುತೇ ಸ ಕಿಂಪ್ರಭುಃ
ಸದಾನುಕೂಲೇಷು ಹಿ ಕುರ್ವತೇ ರತಿಂ ನೃಪೇಷ್ವಮಾತ್ಯೇಷು ಚ ಸರ್ವಸಂಪದಃ॥"

[ಟೀಕು—ಸ್ನೇಹಿತಂಗೆ ಬುದ್ಧಿಗಲಿಸದ ಮಿತ್ರನುಂ, ಒಡೆಯಂಗೆ ಹಿತವಂ ಮಾಡದ ಭೃತ್ಯನುಂ, ಮಂತ್ರಿಯ ಮಾತಂ ಕೇಳದರಸುಂ ಇಂತಿವರ್ ಪ್ರಯೋಜನವಿಲ್ಲ. ಅನುಕೂಲನಪ ಪ್ರಧಾನನಲ್ಲಿಯುಂ ಅರಸನಲ್ಲಿಯುಂ ಸಕಲಸಂಪತ್ತು ದೊರೆಕೊಂಬುದು.]

ಎಂದಿಂತಪ್ಪ ರಾಜನೀತಿಗಳೊಳವು; ಆಂ ನಿನ್ನ ಪೇಳ್ದ ಬುದ್ಧಿಯೊಳ್ ಸಂಜೀವಕಂಗೆ ತಕ್ಕುದಂ ಮಾೞ್ಪೆನಾತನೆನಗೆ ತಪ್ಪಲ್ಬಗೆವುದನೆಂತಱಿಯಲಕ್ಕುಮೆಂಬುದುಂ; ದವನಕನಿಂತೆಂದಂ:—ದೇವಾ! ನೀವೇಕಾಕಿ

ಟಿ–೧೪. ಈ ಶ್ಲೋಕವನ್ನು ಇದೇ ಗ್ರಂಥದ ೧೫೩ನೆಯ ಪದ್ಯದೊಡನೆ ಹೋಲಿಸಿ.

ಪಾ—1. ನದಲ್ಲದೆಯುಮೆನ್ನಱಿದೆರೆಯೆ. ಕ ॥ 2 ಯ್ದುದಿ. ಖ ॥ 3. ಪೇಳ್ದೆ. ಕ ॥ ಖ ॥

ಯಾಗಿರ್ದವಸರದೊಳ್ ಸಂಜೀವಕಂ ನಿಮ್ಮಲ್ಲಿ ಮುನ್ನಂ ಬರ್ಪಂದ ಮಲ್ಲದೆ ಘೋರೆನೆ ಬಂದತಿದೂರಮುಮತ್ಯಾಸನ್ನಮುಮಲ್ಲದೆ ನಿಂದು [1]ಪಿಂದುಮುಂದುಮನೆಡಬಲನುಮಂ[1] ಬೆರ್ಚಿದಂತೆ ನೋೞ್ಕು, [2]ಮಪ್ಪೊಡಾ[2]ಗಳ್ ನಿಮಗೆ ತಪ್ಪಲ್ಬಗೆದು ಬಂದನೆಂದಱಿಯಿಮೆಂದು ಪೇೞ್ವುದುಂ; ಪಿಂಗಳಕಂ ಕರಂ ಮುಳಿದಿಂತೆಂದಂ:— [೯

ಕೊರ್ಬಿದ ಶಾಕ್ವರನಂ ಭುಜ ।
ಗರ್ಬದೆ ಪಿಡಿದಡಸಿ ಸೀೞ್ದು ನಿಜಗರ್ಬದಗು ॥
ಬ್ಬುರ್ಬಿರೆ ಕೊರ್ಬಿರೆ ಕೊಂದಾಂ ।
ಪರ್ಬಂ ಮಾಡೆನೆ ಸೃಗಾಲ ನಾಳೆಯೆ ನಿನಗಂ ॥209 †

[3]ಎಂಬುದುಂ;[3] [೧೦

ದವನಕಂ, ಮಹಾಪ್ರಸಾದಮೆಂದು, ನಾನಿನ್ನುಸಿರದಿದೊರ್ಡೆ ದೂತನಿರ್ದಿಷ್ಟಮಕ್ಕುಂ, ಸಂಜೀವಕನಂ ಬೇಗಂ ಪ್ರಕೋಪಂಗೊಳಿಸುವೆನೆಂದಲ್ಲಿಂ ತಳರ್ದು ಬರುತ್ತುಂ ಕಠಿನಹೃದಯನಪ್ಪ ಕಂಠೀರವನೆಂದುದನೆನಿಸಿದೆಂ, ಈಮೃದುಹೃದಯನಪ್ಪ ಸಂಜೀವಕನಂ ಭೇದಿಸುವುದಾವಗಹನಮೆಂದು, ಕೃತಕವಿಷಾದಂ ದೀನವದನನಾಗಿ ಬಂದು ಮುಂದೆ ನಿಂದ ದವನಕನಂ ಕಂಡು ಸಂಜೀವಕಂ ಮಿತ್ರಪ್ರತಿಪತ್ತಿಯೆಲ್ಲಮಂ ನೆಱೆಯೆ ಮಾಡಿ ಬೞಿಕ್ಕಂ—ನಿನ್ನ ಮೊಗಂ ಖಿನ್ನವಾದ ಕಾರಣವೇನೆಂಬುದುಂ; ಧೂರ್ತಜಂಬುಕನಿಂತೆಂದುದು:— [೧೧

ಪಾ—1. ಪಿಂತುಮುಂತುಮನೆರಡುಕೆಲನುಮಂ. ಕ ॥ ಗ ॥ 2. ಮಪ್ಪುದಾ. ಕ ॥ ಖ ॥
3. ಎನೆ. ಖ ॥

†ಸಂಜೀವಕನೆಂಬವನೆಮ।ಗಂಜದೆ ದ್ರೋಹಿತ್ವಮಾೞ್ಪಿ ಬಗೆಯಂ ಬಗೆದಂ॥ ಕಂಜಾಕ್ಷಂ ಹರಿಕಮಳಜ।ರಂಜದಿರೆನೆ ಕೊಂದು ಮಾೞ್ಪೆ ನಿಮಗುತ್ಸವಮಂ॥ ನಿನ್ನಯ ಮಾತಂ ಮಾೞ್ಪೆ। ನುನ್ನತಮತಿ ಹೋಗುಮೆಂದು ದವನಕನಂ ತಾಂ॥ ಮನ್ನಿಸಿ ಕಳುಹಲ್ ಸಚಿವಂ। ಬಿನ್ನಪಮಂ ಮಾಡಿ ಪತಿಯೊಳಭಯುವ ಕೊಂಡಂ॥
ಎಂಬು ಕ ॥ ಪ್ರತಿಯಲ್ಲಿ ಮಾತ್ರ ಇದೆ.

ಶ್ಲೋ || "ಸಂಪತ್ತಯಃ ಪರಾಯತ್ತಾಃ ಸದಾಚಿತ್ತಮನಿರ್ವೃತಂ |
[1]ತಜ್ಜೀ[1]ವಿತಮವಿಶ್ವಾಸ್ಯಂ ತೇಷಾಂ ಯೇ ರಾಜಸಂಶ್ರಯಾಃ||"೭೮

[ಟೀಕು–ಆರ್ ಕೆಲಂಬರರರಸನನೋಲೈಸುವರ್ ಅವರೈಶ್ವರ್ಯಂ ಪರಾಧೀನವಾಗಿಹುದು. ಚಿತ್ತವೆಂದುಂ ಸುಖಂಬಡೆಯದು. ಜೀವಿಸುಹವುಂ ನಂಬುಗೆಯಿಲ್ಲದುದು.]

ಮತ್ತಂ, [೫

ಶ್ಲೋ || "ಆಚಾರ್ಯಾ ನಪರತಯಶ್ಚ ತುಲ್ಯಶೀಲಾ ನ ಹ್ಯೇಷಾಂ ಪರಿಚಿತಮಸ್ತಿ ಸೌಹೃದಂ ವಾ| ಶುಶ್ರೂಷಾಂ ಚಿರ[2]ಮಪಿ ಸಂಭೃತಾಂ[2] ಪ್ರಯತ್ನಾತ್ ಸಂಕ್ರುದ್ಧಾ ರಜ ಇವ ನಾಶಯಂತಿ ಮೇಘಾಃ ||"೭೯

[ಟೀಕು–ಆಚಾರ್ಯರ್ ಅರಸುಗಳ್ ಸಮಾನಶೀಲರ್. ಅವರಲ್ಲಿ ಪರಿಚಯಾಭ್ಯಾಸವೆಂಬುದಿಲ್ಲ, ಮಿತ್ರಭಾವವುಮಿಲ್ಲ; ಕೋಪಿಸಿದರಾದೊಡೆ ಪ್ರಯತ್ನದಿಂ ಹಲವು ಕಾಲಂ ಮಾಡಿದ ಶುಶ್ರೂಷೆಯುಂ ಕಿಡಿಸುವರ್. ಅದೆಹೆಗೆಂದೊಡೆ—ಮೇಘಂಗಗಳ್ ರಜವ ಕಿಡಿಸುವಹಗೆ.]

ಮತ್ತಂ, [೧೦

ಶ್ಲೋ || "ಶಾಸ್ತ್ರಂ ಸುನಿಶ್ಚಿತ[3]ಧಿಯಾ ಪರಿ[3]ಚಿಂತನೀಯಂ | ಆರಾಧಿತೋಽಪಿ ನೃಪತಿಃ ಪರಿ[4]ಶಂಕ[4]ನೀಯಃ || ಅಂಕೇ ಸ್ಥಿತಾಪಿ ಯುವತಿಃ ಪರಿರಕ್ಷಣೀಯಾ | ಶಾಸ್ತ್ರೇ ನೃಪೇ ಚ ಯುವತೌ ಚ ಕುತೋ ವಶಿತ್ವಂ || "೮೦

[ಟೀಕು—ಅತಿಬುದ್ಧಿಯುಳ್ಳವರಾದೊಡಂ ಶಾಸ್ತ್ರಚಿಂತನೆಯಂ ಮಾಡವೇೞ್ಕುಂ. ಏಸು ಕಾಲವೋಲೈಸಿದೊಡಂ ತನ್ನೊಡೆಯಂಗಂಜಬೇಕು. ತೊಡೆಯ ಮೇಲಿರ್ದೊಡಂ ಸ್ತ್ರೀಯನಾರೈದುಕೊಂಡಿರಬೇಕು. ಶಾಸ್ತ್ರದಲ್ಲಿಯುಂ ನೃಪನಲ್ಲಿಯುಂ ಸ್ತ್ರೀಯರಲ್ಲಿಯುಂ ತನಗೆ ವಶವಾಯಿತೆಂದು ಮೆಯ್ಮಱೆದಿರಲಾಗದು.]

ಪುಗುವುದು ಕಿಚ್ಚಂ ನುಂಗುವು | [೨೦
ದು ಗರಳಮಂ ಪಾಯ್ವುದಧಿಕಕುಧರಾಗ್ರದಿನು ||
ರ್ವಿಗೆ [5]ಸೇವಿಸದಿರ್ಪುದ[5]ಸೇ |
ವ್ಯಗುಣಾನ್ವಿತನಪ್ಪ[6]ನರಪನಂ[6] ಮಾನಧನಂ ||210

ಪಾ—1. ಸಂಜೀ. ಕ || ಗ || 2. ಮತಿಸಂಭೃತಾತ್. ಕ || , ... ಭೃತಂ. ಗ ||
3. ಮಪಿಪ್ರಲಿ. ಕ || 4. ಚಿಂತ. ಕ ||
5. ಸವಿಸದಿರ್ಪುದಾ. ಗ || 6. ಸರಸನಂ. ಗ || ಖ ||

ಸ್ಥಿತಿಸಾರರಲ್ಲದವನೀ ।
ಪತಿಗಳನೋಲೈಸಿ ಪಡೆವ ಧನಲಾಭದಿನು ॥
ನ್ನತಗಿರಿಗುಹಾಂತರಾಳ ।
ಸ್ಥಿತಿಲಾ[1]ಭಂ ಪೂಜ್ಯಮೆಂಬ[1]ರಱಿವವರೆಲ್ಲರ್ ॥211

ಇಂತೆಂದು ದವನಕಂ ಭಾ ।
ಷಾಂತರದೋದುಗಳನೋದೆ ಗೋಪತಿಗೆ ಭಯ ॥
ಭ್ರಾಂತಿ ಪಿರಿದಾಗಿ ಚಿಂತಾ ।
ಕ್ರಾಂತಮನಂ ದವನಕಂಗೆ ಮತ್ತಿಂತೆಂದಂ ॥212

ವ॥ ನೀನಿಂತು ಪಲವ್ರೋದನೋದಿ ಎನ್ನಂ ಪೊಲಗಿಡಿ[2]ಸ[2]ದೆ, ಉಳ್ಳುದನುಳ್ಳಂತೆ ಪೇೞ್ನೆ; ದವನಕನಿಂತೆಂದಂ:—

ಅರಸುಗಳವಿಚಾರ[3]ಪರರ್[3] ।
ಪುರುಷದ್ವೇಷಿಗಳನಾಪ್ತರಹಿತರಪಾಯಂ ॥
ಪಿರಿದದಱಿಂ ನೃಪರೋಲಗ ।
ವರಿದಂಜುವೆನೆಂದೊಡಂದು ಪಲತೆಱದಿಂದಂ ॥213

ನೀನೆಂದೊಡಂ ನಿನ್ನನಾಂ ನಂಬಿಸಿ ನುಡಿದಾಗ್ರಹದಿಂ ತಂದೆಮ್ಮರಸಂಗಾಳ್ಮಾಡಿದೊಡೆ, ನೀನುಂ ಭೃತ್ಯಭಾವದಿಂ ನಡೆಯುತ್ತಿರೆ, ಪಿಂಗಳಕನಿಂದು ತನ್ನಾಸ್ಥಾನದೊಳಿರ್ದು ನಿರ್ನಿಮಿತ್ತಂ ನಿನಗೆ ಮುನಿದು ಸಂಜೀವಕನಂ ಕೊಂದಲ್ಲದೆ ಮಾಣೆನೆಂದು ತೊಟ್ಟನೆ ಮರ್ಯಾದೆಗೆಟ್ಟು ನುಡಿದಂ; ಅದನಾಂ ಕೇಳ್ದು ಸಿರದಿರ್ದನಪ್ಪೊಡೆ ವಿಶ್ವಾಸ[4]ಘಾತುಕತ್ವ[4]ಮುಂ [5]ಮಿತ್ರದ್ರೋಹಮು[5]ಮಪ್ಪುದೆಂದಱಿಪಲ್ಬಂದೆನೆಂಬುದು

ಪಾ—1. 'ಭಂ ಪೂಜ್ಯರೆಂಬ. ಕ ॥ ಗ ॥ 2. ಸಿ. ಖ ॥ 3. ರ್. ಪರ. ಖ ॥
4. ಘಾತಕ. ಖ ॥ 5. ಮಿತ್ರೋದಾಸೀನ. ಕ ॥ ; ಮಿತ್ರದ್ರೋಹತ್ವ. ಗ ॥

ಮಾಮಾತಂ ಕೇಳ್ದು ಸಂಜೀವಕಂ ನಿರ್ಜೀವಕನಾಗಿ ಕಿಱಿದು ಬೇಗಮಿರ್ದು ಬೞಿಕಮಿಂತೆಂದಂ:—

ಕನಸಿನೊಳಂ ¹ನೆನಸಿ¹ನೊಳಂ ।
ಮನೋವಚಃಕಾಯಕರ್ಮವೆಂಬಿನಿತಱೊಳಂ ॥
ತನಗೆ ಕರಂ ಹಿತನುಂ ಭ ।
ಕ್ತನುಮಪ್ಪ²ನನೇಕೆ ಕೋಪಿಪಂ ²ಮೃಗರಾಜಂ ॥214

ಅದಲ್ಲದೆಯುಮಾತಂಗಾನೇತೆಱದೊಳಂ ಪೊಲ್ಲನಲ್ಲೆಂ. ಅಕಾರಣಂ ಮುನಿದಂ. ಎತ್ತಾನುಂ,

ಶ್ಲೋ॥ “ಕಾರಣೇನೈವ ಜಾಯಂತೇ ಮಿತ್ರಾಣಿ ರಿಪವಸ್ತಥಾ ।
ರಿಪವೋ ಯೇನ ಜಾಯಂತೇ ಕಾರಣಂ ತತ್ಪರಿತ್ಯಜೇತ್ ॥”೯೧

[ಟೀಕು–ಒಂದು ಕಾರಣದಿಂ ಕೆಳೆಯಾರುಂ ಹಗೆಗಳಹರು. ಅವ್ರದಾನೊಂದುಕಾರಣದಿಂ ಹಗೆಗಳಾದರೆಂಬುದನಱಿದು ಆಕಾರಣವುಂ ಬಿಟ್ಟುಕಳೆವುದು ]

ಎಂಬೀನೀತಿಯುಂಟು. ಮೃಗೇಂದ್ರಂಗಮೆನಗಂ ವೈರಕಾರಣಮಾವುದದಂ ನೀನಱಿವೆಯಪ್ಪೊಡೆ ಪೇೞ್. ಆಅಂದಮಿಂದುವೊದಲ್ ಪತ್ತುವಿಟ್ಟು ನಡೆವೆನೆಂಬುದುಂ—ಜಂಬುಕಮದೇಂ ಕಾರಣಮೆಂದಱಿಯೆನೆನೆ—ಮತ್ತಂ ಸಂಜೀವಕನಿಂತೆಂದಂ:—

ಶ್ಲೋ॥ “ನಿಮಿತ್ತಮುದ್ದಿಶ್ಯ ಹಿ ಯಃ ಪ್ರಕುಪ್ಯತೇ ಧ್ರುವಂ ಸ ತಸ್ಯಾಪಗಮೇ ಪ್ರಸೀದತಿ।
ಅಕಾರಣದ್ವೇಷಿ ಮನೋ ಹಿ ಯಸ್ಯ ತದ್ವೈರಂ ಕಥಂ ಪರಿತೋಷಯಿಷ್ಯತಿ॥”

[ಟೀಕು–ಆವನೊರ್ವಂ ನಿಮಿತ್ತಮನುದ್ದೇಶಿಸಿ ಕೋಪಿಸುವಂ, ಆನಿಮಿತ್ತಂ ತೀರಲೇಗೆಯುಂ ಪ್ರಸನ್ನನಹಂ; ನಿಷ್ಕಾರಣಮಾವನೊರ್ವನ ಚಿತ್ತಂ ದ್ವೇಷಮುಳ್ಳುದಾಗಿಹುದು ಅತನ ವೈರಮೊಂದುಂ ತೀರಲಱಿಯದು ]

ಪಾ—1. ಮನಸಿ. ಕ ॥ ಗ ॥
2. ನೇಕೆ ಕೊಂದಪಂ. ಕ ॥; ಗೇಕೆ ಕೋಪಿಪಿಮಾ. ಗ ॥ ನನಗೇಕೊಂದಪ. ಖ ॥

ಎಂಬ ನೀತಿಯುಂಟಪ್ಪುದಱಿಂದಕಾರಣಕೋಪನುಂ ಪಾಪರೂಪ [1]ನಪ್ಪ[1]ಕೇಸರಿಗಾಸುರಕರ್ಮಂಗೆಯ್ಯಲ್ವೇಡೆಂದು ಧರ್ಮೋಪದೇಶಂಗೆಯ್ದು ಪರಲೋಕಕ್ಕುತ್ತರಸಾಧಕನಾಗಿ ನಡೆವೆಂ. ಎನಗಾತಂ ಮುನಿವುದೆಲ್ಲಮವಿನೀತಸೇವೆಯ ಫಲಮದೆಂತೆನೆ:— [೪

ಶ್ಲೋ || “ಅರಣ್ಯರುದಿತಂ ಕೃತಂ ಶವಶರೀರ[2]ಮುದ್ವರ್ತಿತಂ ಸ್ಥಲೇಬ್ಜಮವರೋಪಿತಂ[2]
ಬಧಿರಕರ್ಣಜಾಪಃ ಕೃತಃ || ಶ್ವಪುಚ್ಛಮವನಾಮಿತಂ [3]ಸತತ[3]ಮೂಷರೇ
ವರ್ಷಿತಂ [4]ತದಂಧಮುಖದರ್ಪಣಂ[4] ಯದಬುಧೋ ಜನಸ್ಸೇವಿತಃ ||”

[ಟೀಕು—ಅಡವಿಯೊಳಳುಹವು, ಹೆಣಕ್ಕೆ ಲೇಪನಂಗೆಯ್ವುದುಂ, ನೆಲದಲ್ಲಿ ತಾವರೆಯಂ ಬಿತ್ತುಹವುಂ, ಕಿವುಡಂಗೇಕಾಂತವಂ ಹೇಳುಹವುಂ, ನಾಯ ಬಾಲವಂ ಕಾಸಿ ತಿದ್ದುಹವುಂ, ಸೌಳುವಣ್ಣಿನಲ್ಲಿ ಮಳೆಗರೆಹವುಂ, ಕುರುಡಂಗೆ ಕನ್ನಡಿಯಂ ತೋಱುಹವುಂ, ಮೂರ್ಖನಂ ಬುದ್ಧಿವಂತನೋಲೈಸುಹವುಂ, ಇವಱೋಪಾದಿ.]

ಎಂಬ ನೀತಿಕಾಜನ ಮಾತದೇಕೆ ತಪ್ಪುಗುಮಲ್ಲದೆಯುಂ, ಆತನುಮಾಂ [5]ಪೇೞೆ[5] ಧರ್ಮೋಪದೇಶಮುಮಂ ಬಿಟ್ಟು ತನ್ನ ಮುನ್ನಿನ ದುಷ್ಟಮಂತ್ರಿಗಳ ಮಾತಂ ಕೈಕೊಂಡನದಱಿಂ, [೧೪

ಶ್ಲೋ ||“ಗುಣಾ ಗುಣಜ್ಞೇಷು [6]ಗುಣಾ[6]ಭವಂತಿ ತೇ ನಿರ್ಗುಣಂ ಪ್ರಾಪ್ಯ ಭವಂತಿ ದೋಷಾಃ |
ಸುಸ್ವಾದುತೋಯಾಃ ಪ್ರವಹಂತಿ ನದ್ಯಃ ಸಮುದ್ರಮಾಸಾದ್ಯ ಭವಂತ್ಯಪೇಯಾಃ ||”

[ಟೀಕು—ಗುಣಂಗಳ್ ಗುಣಂಗಳನಱಿವವರಲ್ಲಿ ಗುಣಂಗಳೆ ಅಹುವು; ದುರ್ಜನನೆಯ್ದಿದೊಡೆ ದೋಷಂಗಳೆ ಅಹುವು; ಅದು ಹೇಗೆಂದರೆ—ಸ್ವಾದೂದಕವಪ್ಪ ನದಿಗಳ್ ಸಮುದ್ರವಂ ಕೂಡಿದ ಹಾಂಗೆ]

ಅದಲ್ಲದೆಯುಂ,

ಶ್ಲೋ || ಕೃತಶತಮಸತ್ಸು ನಷ್ಟಂ ಸುಭಾಷಿತಶತಕಂ ಚ ನಷ್ಟ[7]ಮಜ್ಞೇಷು[7] |
ವಚನಶತಮ[8]ವಚನಜ್ಞೇ ಬುದ್ಧಿಶತಂಚೇತ್ಯಚೇತನೇ[8]ನಷ್ಟಂ ||”

---

ಪಾ—1. ನಪ್ಪೊಡೆ. ಗ || 2. ಮುದ್ವರ್ತನಂ ಸ್ಥಲೇಜಲಜರೋಹಣಂ. ಗ ||
3. ಸುಚಿರ. ಕ || 4. ಧೃತಾಂಧಮುಖದರ್ಪಣೋ. ಕ ||
5. ಕೊಟ್ಟ. ಗ || 6. ಗುಣೇ. ಕ || ಗ || 7. ಮಬುಧೇಷು. ಕ ||
8. ವಚನಕರೇ. ......ಕ || ; ಜ್ಞೇಷು ನಷ್ಟಂ ಬುದ್ಧಿಶತ ಮವಚನೇ. ಗ ||

[ಟೀಕು—ದುರ್ಜನಂಗೆ ನೂಱು ಲೇಸಂ ಮಾಡಿದೊಡಂ ಕಿಡುವುದು; ಅಱಿಯದವನ ಮುಂದೆ ನೂಱು ಸುಭಾಷಿತವನೋದಿದೊಡಂ ಕೆಡುವುದು; ಕೇಳಿದವಂಗೆ ನೂಱು ಮಾತಂ ಪೇೞ್ದೊಡಂ ಕೆಡುವುದು; ಮಱಹುಳ್ಳವಂಗೆ ನೂಱುಬುದ್ಧಿಯಂ ಪೇೞ್ದೊಡಂ ಕೆಡುವುದು.]

ಮತ್ತಂ,

ಶ್ಲೋ॥ „ದುರ್ಜನಗಮ್ಯಾ ನಾರ್ಯಃ ಪ್ರಾಯೇಣಾಪಾತ್ರಭೃ[1]ದ್ಭವತಿ[1] ರಾಜಾ।
ಕೃಪಣಾನುಸಾರಿ ವಿತ್ತಂ ದೇವೋ ಗಿರ್ಯರ್ಣಧಿ [2]ವರ್ಷಿತಶ್ಚಕ್ರ[2]॥'' ೯೬

[ಟೀಕು—ಸ್ತ್ರೀಯರ್ ನೀಚರಿಂದೆ ಭೋಗಿಸಲ್ಪಡುವರ್; ಅರಸುಗಳ್ ಯೋಗ್ಯರಲ್ಲದವರನೆ ಲೇಸಾಗಿ ಸಲಹುವರ್; ಅತಿಲೋಭಿಗಳ್ಗೆ ವಸ್ತು ಸೇರುವುದು; ಇಂದ್ರಂ ಗಿರಿಸಮುದ್ರಂಗಳಲ್ಲಿಯೆ ಮಳೆಯಂ ಕಱೆವಂ.]

ಮತ್ತಂ,

ಶ್ಲೋ॥ „ಸ್ನಿಗ್ಧೈರೇವಾಪ್ಯುಪಕೃತಮಪಿ ದ್ವೇಷ್ಯತಾಮೇತಿ ಕಿಂಚಿ।
[3]ತ್ಸ್ನಿಗ್ಧಾದ[3]ನ್ಯೈರಪಕೃತಮಪಿ ಪ್ರೀತಿಮೇವಾತನೋತಿ॥
[4]ದು[4]ರ್ಗ್ರಾಹ್ಯತ್ವಂ ನೃಪತಿವಚಸಾಮೇಕಭಾವಾಶ್ರಯಾಣಾಂ।
ಸೇವಾಧರ್ಮಃ ಪರಮಗಹನೋ ಯೋಗಿನಾಮಪ್ಯಗಮ್ಯಃ॥''೯೭

[ಟೀಕು—ಸ್ನೇಹವುಳ್ಳವರುಪಕಾರಮಂ ಮಾಡಿದೊಡಂ ಕೋಪವಹುದು; ದುರ್ಜನರಪಕಾರಮಂ ಮಾಡಿದೊಡದು ಸಂತೋಷವಾಗಿಹುದು; ಒಂದೇ ಸ್ವಭಾವವಪ್ಪ ನೃಪವಚನಂಗಳಾರ್ಗಂ ಸ್ವೀಕರಿಸಲ್ಬಾರದುವು; ಸೇವಾಧರ್ಮವೆಂಬುದು ಅತ್ಯಂತಂ ನಿರ್ವಹಿಸಲ್ಬಾರದು; ತಪಸ್ವಿಗಳ್ಗದೊಡಂ ಸಾಧ್ಯಮಲ್ಲ.]

[5]ಶ್ಲೋ॥ „ಮೌನಾನ್ಮೂಕಃ ಪ್ರವಚನಪಟುರ್ವಾಚಕೋ ಜಲ್ಪಕೋ ವಾ।
ಪಾರ್ಶ್ವೇ ಧೃಷ್ಟಃ ಕಿಮುಪರಥವಾ ದೂರತೋಽಪ್ಯಪ್ರಗಲ್ಭಃ।
ಕ್ಷಾಂತ್ಯಾ ಭೀರುರ್ಯದಿ ನ ಸಹತೇ ಪ್ರಾಯಶೋ ನಾಭಿಜಾತಃ। ೯೮
ಸೇವಾಧರ್ಮಃ ಪರಮಗಹನೋ ಯೋಗಿನಾಮಪ್ಯಗಮ್ಯಃ॥''

ಶ್ಲೋ॥ „ಪರಸೇವಾ ಮಹಾಪ್ರಾಣಾಮಸಿಧಾರಾವಲೇಹನಂ॥
ಪಂಚಾನನನಖಸ್ಪರ್ಶೋ ವ್ಯಾಳೀವದನಚುಂಬನಂ॥'' ೯೯

ಪಾ—1. ಧ್ಭವೇತ್. ಗ॥ 2. ವರ್ಷೇಚ. ಖ॥ 3. ತ್ಸಾಧ್ಯೈರ. ಕ॥ ಗ॥
4. ನಿ. ಕ॥ ಗ॥ 5. ಕ॥ ಗ॥ ಪ್ರತಿಯಲ್ಲಿಲ್ಲ.

ಇಂತಪ್ಪ ಸೇವಾಧರ್ಮಮನಾಂ ಮುನ್ನಱಿಯಾತನಾಗಿಯುಮೇನಾನುಮೊಂದು ತೆಱದಿಂ ಪೊಲ್ಲೆಹಂಗೆಯ್ದು ನಕ್ಕುಮದಲ್ಲದಾಗಳ್ ಪಿಂಗಳಕನೇಕೆ ಮುನಿವಂ. ಇದನಾತನಂ ಬೆಸಗೊಂಡೀಯೊರ್ಮೆಗೆ ಕ್ಷಮಿಸುವಂತು ಮಾೞ್ಪೆಂ. ಅರಸುಗಳವಿಚಾರದಿಂದಾರಾನುಮಂ ಕೊಲಲುಂ ಕಿಡಿಸಲುಮೊಂದಿರ್ದರಲ್ಲದೆ ಮಂತ್ರಿಗಳಿಚ್ಛೆಯುಂ ಪ್ರತಿಪಾಲಿಸರದೆಂತೆನೆ:—

ಶ್ಲೋ|| “[1]ವೈದ್ಯೋ ವಿ[1]ದ್ವಜ್ಜನೋಮಾ[2]ತ್ಯೋ ಯಸ್ಯ ರಾಜ್ಞಃ ಪ್ರಿಯಂ ವದೇತ್ ||[2]
ಆರೋಗ್ಯಧರ್ಮಕೋಶೇಭ್ಯಃ ಕ್ಷಿಪ್ರಂ ಸ ಪರಿಹೀಯತೇ ||” ೧೦೦

[ಟೀಕು—ವೈದ್ಯನುಂ ವಿದ್ವಾಂಸನುಂ ಮಂತ್ರಿಯುಂ ಅರಸಿನಿಚ್ಛೆಯನೆ ನುಡಿದಪರ್; ಆನೃಪನಾರೋಗ್ಯಧರ್ಮಕೋಶಂಗಳ ದೆಸೆಯಿಂ ಬೇಗಂ ಹೀಯಮಾನನಹನು ]

ಎಂಬುದು ನೀತಿಶಾಸ್ತ್ರಮುಂಟು. ನೀನಪ್ಪೊಡೆ ಪಿಂಗಳಕಂಗೆ ಮಂತ್ರಿಯಪ್ಪೆ. ಈಗಳಾತನೆನ್ನನಱಿದು ತನ್ನ ಜಸಮುಮಂ ಧರ್ಮಮುಮನಱಿದುಕೊಳಲ್ಬಗೆದಂ. ಆನುಂ ಮುನ್ನಮೆ ನಿನ್ನಂ ನಂಬಿ ಬಂದಿರ್ದೆನದಱಿಂ,

ಶ್ಲೋ|| “ಕಾರ್ಯೇಷು ಯದಾಸ[3]ನ್ನಂ[3] ವಿನಿಪಾತೇ ಯತ್ಪ್ರದಾನಂ ಚ |
ಶಕ್ಯಂ ಸುಖಾನುಬಂ[4]ಧಂ[4] ವಿಪುಳಫಲಂ ಯಾ[5]ಚ್ಛಾ ಧರ್ಮಿಷ್ಠಂ[5] ||” ೧೦೧

[ಟೀಕು— ಕಾರ್ಯ್ಯಸನ್ನನಾಗಿರ್ದಲ್ಲಿ ಆನತನಾಗಿರ್ದಲ್ಲಿ ಸುಖಾನುಬಂಧದಲ್ಲಿ ಆವುದಾನೊಂದು ಧರ್ಮಾರ್ಥಮಾಗಿ ಕೊಟ್ಟುದು ವಿಪುಳಫಲಮಾಗಿಹುದು. ]

೯೮. ಟಿ—ಉಸಿಕನಿರ್ದೊಡೆ ಮೂಗುವಟ್ಟನೆಂದು, ಮಾತಱಿದೊಡೆ ಗೞಹನೆಂದುಂ, ಪಕ್ಕದೊಳಿರೆ ಧೃಷ್ಟನೆಂದುಂ, ದೂರದೊಳಿರೆ ಜಾಣನಲ್ಲನೆಂದುಂ, ಸೈರಿಸಿದೊಡೆ ಪಂದೆಯೆಂದುಂ, ಸೈರಣೆಯಿಲ್ಲದೊಡೆ ಕೀೞನೆಂದುಂ, ಪಱಿಗೆಡೆಯಕ್ಕುಂ; ಸೇವಾಧರ್ಮಮೆನ್ನರ್ಗಂ ಕಷ್ಟಂ; ಕಿತ್ತಡಿಗಳ್ಗಪ್ಪೊಡಂ ಮಾಡಲ್ಬಾರದು.

೯೯. ಟಿ—ಪರಸೇವೆಯೆಂಬುದು ಬಾಳ ಬಾಯ್ದಾರೆಯುಂ ನಕ್ಕಿದಂತೆಯುಂ, ಸಿಂಗಮನಾಲಿಂಗಿಸಿದಂತೆಯುಂ, ಪಾಲಿನ ನಂಜುಮಾಯನಂಜದೆ ಚುಂಬಿಸಿದಂತೆಯುಮಿರ್ಕುಂ

ಪಾ—1. ಭಿಷಗ್ಗು, ಕ || ಖ ||   2. ತ್ಯಾ ಯಸ್ಯ ರಾಜ್ಞಃ ಪ್ರಿಯಂವದಾಃ. ಖ ||
3. ನ್ನಃ. ಕ್ಷ ||   4. ಧೇ. ಕ ||   5. ಷ್ಠ... ಪಃ. ಕ ||

ಎಂಬ ನೀತಿಯುಂಟಪ್ಪುದಱಿಂದಿಲ್ಲಿ ಯಾಸನ್ನವಿನಿಪಾತವಾಗಲಿರ್ದ ಕಾರ್ಯದ ಸಮಾವಸ್ಥೆಯಂ ನೀನಱಿಯದಿರ್ದೆಯದಱಿಂದೀಯವಸರದೊಳ್ ಪೊಕ್ಕು ನುಡಿದು ನಿರ್ಣಯಮಪ್ಪಂತು ಮಾಡಲ್ವೇೞ್ಕುಮೆನೆ; ದವನಕನಿಂತೆಂದಂ:— ನೀಂ ಪೇೞ್ದಂತೆ ಮೃಗಾಧಿರಾಜನ ಮನೆಯೊಳಾನೆ ಮಂತ್ರಿಯಪ್ಪೆನಾಗಿಯುಂ, [೫

ಶ್ಲೋ|| "ಮೃದುನಾ ಸಲಿಲೇನ ಭೇದ್ಯಮಾನಾನ್ಯಪಕೃಷ್ಯನ್ತಿ ಗಿರೇರಪಿ ಸ್ಥಲಾನಿ |
ಉಪಜಾಪಕರ್ಣಜಾಪಕೌಘೈಃ ಕಿಮು ಚೇತಾಂಸಿ ಮೃದೂನಿ ಮಾನವಾನಾಂ ||"

[ಟೀಕು—ಮೃದುವಹ ಮನುಷ್ಯರ ಚಿತ್ತಂಗಳ್ ಕೊಂಡೆಯರಿಂ ಕೆಡುವುದು: ಅದೆಹಗೆಂದೊಡೆ—ಮೃದುವಹ ಉದಕದಿಂ ಭೇದಿಸಲ್ಪಟ್ಟ ಗಿರಿತಟಂಗಳೊಳಗಾಗಿ ಬೀೞ್ವಹಗೆ.]

ಎಂಬ ನೀತಿಗಳೊಳವು. ಆತಂ ಕರ್ಣೇಜಪರ ಮಾತಂ ಕೇಳ್ದು ಕೈಕೊಂಡನೆಂಬುದಂ ಸಂಜೀವಕಂ ಭಾವಿಸಿ ಬೞಿಕ್ಕಿಂತೆಂದಂ:—

ಶ್ಲೋ|| "ನರಪತಿಹಿತಕರ್ತಾ ದ್ವೇಷ್ಯತಾಂ ಯಾತಿ ಲೋಕೇ |
ಜನಪದಹಿತಕರ್ತಾ ತ್ಯಜ್ಯತೇ [1]ಭೂಮಿಪಾಲೈಃ[1]
ಇತಿ ಮಹತಿ ವಿರೋಧೇ [2]ದೃಶ್ಯ[2]ಮಾನೇ ಸಮಾನೇ |
ನೃಪತಿಜನಪದಾನಾಂ ದುರ್ಲಭಃ ಕಾರ್ಯಕರ್ತಾ ||" [೧೫

[ಟೀಕು—ಅರಸಿಂಗೆ ಹಿತವ ಮಾಡುವಾತಂ ಪ್ರಜೆಗೆ ಹಗೆಯಹನು; ಪ್ರಜೆಗೆ ಹಿತವ ಮಾಡುವಾತನನರಸುಗಳ್ ಕೈಪಿಡಿಯರು; ಇಂತುಮಹಂಥ ವಿರೋಧಂ ಸಮಾನವಾಗಿ ಕಾಣಲ್ಪಡುತ್ತಿರಲು ನೃಪಂಗಂ ಪ್ರಜೆಗಂ ಹಿತವಹಂತು ಮಾಡುವ ಮಂತ್ರಿ ದುರ್ಲಭನು.]

ಎಂಬ ನಯಶಾಸ್ತ್ರಮೇಕೆ ತಪ್ಪುಗುಂ. ಮುನ್ನಂ ಪೞಿಯರುಮನಾಪ್ತರುಮಂ ಪೊಱಗಿಕ್ಕಿ ಪತಿಗೆ [3]ಹಿತೋಪದೇಶಂಗೆಯ್ಯ[3]ರದೆಂತೆನೆ:—

ವಾಕ್ಯಂ|| "ಉಷ್ಟ್ರಂ ಕಾಕಾದಯೋ ಯಥಾ"

ಎಂಬ ಕಥೆಯುಂತಕ್ಕುಮೆನೆ — ದವನಕನದೆಂತೆನೆ— ಸಂಜೀವಕಂ ಪೇೞ್ಗುಂ:—

ಪಾ—1. ಪಾರ್ಥಿವೇನ. ಕ || 2. ಎದ್ಯ. ಕ || 3. ಅಹಿತವಗೆಯ್ಯು. ಕ ||

## ೧೭. ಒಟ್ಟೆಯುಂ, ಕಾಗೆಯುಂ.

ದಾರುಣಧಾರಿಣೀಧರಗುಹಾವಳಿಯಿಂ ಮದವಾರಣಂಗಳಿಂ ।
ಕ್ರೂರಮೃಗಂಗಳಿಂ ಶಬರಸಂಕುಲದಿಂದತಿರೌದ್ರಮಪ್ಪ ಕಾಂ ॥
ತಾರದೊಳಿರ್ಪುದೊಂದು ಹರಿ ಶೌರ್ಯಗುಣಪ್ರಕರಂ[1] ನಖಾಗ್ರನಿ ।
ರ್ದಾರಿತವನ್ಯಸಾಮಜಸಮಾಜಕಟಂ ಪೆಸರಿಂ ಮದೋತ್ಕಟಂ ॥ 215

ವ॥ ಆ ಮೃಗಾಧಿರಾಜಂ ತನಗೆ ಕಾಗೆಯುಂ ಸೃಗಾಲನುಂ ಶಾರ್ದೂಲನುಂ ಅನುಚರರಾಗಿ ಕಾಂತಾರಾಂತರಾಳದೊಳ್ ತೊಳಲುತ್ತಮಿರೆ ನಡೆವ ಬೀಡಿನೊಳೊಂದೊಟ್ಟೆ ಪೊಲಂಬುಗೆಟ್ಟು ಬಂದಾಡುತ್ತಿರ್ದುದನತಿದೂರದೊಳ್ ಕಂಡದೊಂದಪೂರ್ವಮಪ್ಪ ಮೃಗಮದೆತ್ತಣಿಂ ಬಂದುದಿನ್ನೆತ್ತಲ್ ಪೋದಪ್ಪುದಾವಜಾತಿ ಪೆಸರೇನೆಂಬುದಂ ಬೆಸಗೊಂಡು ಬಾಯೆಂದು, ವಾಯಸಮುಂ ಕಳುಪಲ್; ಅದು ವಾಯುವೇಗದಿಂ ಪರಿದೊಟ್ಟೆಯನೆಯ್ದೆವಂದದಱ ವೃತ್ತಾಂತಮನೆಲ್ಲಮನಱಿದಾಗಳೆ ಮಗುೞ್ದು ಬಂದಿಂತೆಂದುದು:—

ಮದಗಜಭಿದುವಿದಲನಕೋ ।
ವಿದ ಜಾತಿಯೊಳೊಟ್ಟೆ ನಾಮದಿಂ ಕಥಕನೆನಿ ॥ [೧೫
ಪ್ಪುದು ನಿನ್ನ ದೆಸೆಯಿನಭಯ ।
ಪ್ರದಾನಮಂ ಪಡೆದು ಭೃತ್ಯನಾಗಲ್ಬಂದಂ ॥ 216

ಎಂಬುದುಮಾಮೃಗಾಧಿರಾಜನಂಜದಿರೆಂದೆಂದು ತಂದು ಕಾಣಿಸೆನಲೊಡಂ; ವಾಯಸಮಾಗಳೆ ಪೋಗಿಯೊಟ್ಟೆಯನಂಜದಿರೆಂದು ನಂಬೆನುಡಿದೊಡಂಬಡಿಸಿಯೊಡಂಗೊಂಡು ಬಂದು ಮುಂದಿಟ್ಟು ಕಾಣಿಸುವುದುಮದಱ ವಿಕಟರೂಪಮುಂ ಕಂಡು ಮದೋತ್ಕಟನುತ್ಕಟಹರ್ಷನಾಗಿ

1. ಬಿಂ. ಕ ॥ ಗ ॥

ಸಮಗೊಂದು ವಿನೋದಪಾತ್ರ[1]ಮಿದೊಂದಾದು[1]ದೆಂದು ಸಂತೋಷಂ ಬಟ್ಟೊಂದು ದಿವಸಮವಿರಳಮದಾಂಬುಧಾರಾಮಲಿನಗಂಡಮಂಡಲ ನಪ್ಪುದೊಂದು ಶುಂಡಾಲನ ಮೇಲೆ ಪಾಯ್ದು ತದೀಯದಂತಾಶನಿಘಾತ ವ್ರಣವೇದನಾವಿಹ್ವಲೀಭೂತ[2]ಚೇತನ[2]ನಾಗಿ ಮಹಾಗುಹಾಂತರಮಂ ಪೊಕ್ಕು ವೇದನಾಪರವಶತೆಯಿಂ ಪಲವುದಿನಮಾಹಾರಕ್ಕೆ ಪೊಱಮಡ ಲಾಱದೆ ಬಾಡಿದ ಮೊಗಮುಂ ಬಡವಾದೊಡಲುಂ ಬೆರಸು ಗುಹೆಯ ಬಾ ಗಿಲೊಳ್ ಬಂದಿರ್ದ ತನ್ನನುಚರರಂ ಕಂಡು ಮದೋತ್ಕಟನಿಂತೆಂದಂ:—

ಆನುಂ ಪೊಱಮಡಲಾ[3]ಱೆ[3]ಂ ।
ನೂನಂ ಮನಮಿಕ್ಕಿ ಪಸಿದು ಸಾಯದೆ ನೀಮೆ ॥
ತ್ತಾನುಂ ಪಡೆವೊಡೆ ಪಿಶಿತಮ । [೧೦
ನೇನಾನುಮನಱಸಿ ತಿನ್ನಿಮೆನಗಂ ತನ್ನಿಂ ॥ 217

ಎಂದು ಪೇಳ್ವುದುಮವು ತಮ್ಮೊಳೋರೊರ್ವರ ಮೊಗಮಂ ನೋಡಿ ಬಱಿಕ್ಕೆ ನರಿಯಿಂತೆಂದುದು:—ಆನುಂ ಕಾಗೆಯುಂ ಪೆಱರಾರಾನುಂ ಕೊಂದು ತಿಂದೀಡಾಡಿದ ಪಿಶಿತಮನಾಯ್ದುಱಿಸಿ ತಿಂದು ಜೀವಿಸುವೆವೆ ಮ್ಮೊಡ[3]ನಾಡಿರ್ದ[3] ಕಾರಣದಿಂದೀಪುಲಿಯುಮೊಂದಿಲಿಯುಮಪ್ಪೊಡಂ ಕೊ ಲಲಣ್ಮದಿಂತಪ್ಪ ಮೃಗಲಿಗಳೆನೆ; ಮದೋತ್ಕಟನಿಂತೆಂದಂ:—

ಶ್ಲೋ || "ಯಾದೃಶೀ ಜಾಯತೇ ಬುದ್ಧಿರ್ವ್ಯವಸಾಯೋಽಪಿ ತಾದೃಶಃ
ಸಹಾಯಾಸ್ತಾದೃಶೋ ಜ್ಞೇಯೋ ಯಾದೃಶೀ ಭವಿತವ್ಯತಾ ||"

[ಟೀಕು—ಬುದ್ಧಿ ಆವ ಪ್ರಕಾರವಾಗಿಹುದು, ಹಾಂಗೆಯೆ ವ್ಯವಸಾಯವಿಹುದು; ಭಾಗ್ಯವಾವ ಪ್ರಕಾರವಾದಹುದು, ಸಹಾಯವೂ ಹಾಂಗೆಯಹುದು.]

ಎಂಬ ನೀತಿಯ ವಾಕ್ಯಮೇಕೆ ತಪ್ಪುಗುಂ. ಎನ್ನ ಭಾಗ್ಯಕ್ಕಂ ಭವಿತವ್ಯಕ್ಕಂ ಅನುಸಾರಿಗಳೆ ಸಹಾಯರಾದರಿವರ ಮೇಲೆ ದೋಷಮಿಲ್ಲಂ

ಪಾ—1. ಮಿಂತಾದು. ಗ ॥ 2. ಚಿತ್ತ. ಬ ॥ 3. ಱದ. ಗ ॥ 4. ನಾಡಿಯುಮಿರ್ದ. ಬ ॥

ದು ಮತ್ತ್ರವರ್ಗಿಂತೆಂದಂ:—ಎನಗೆ ತರಲಾಱದಿರ್ದೊಡಂ ನಿಮಗಪ್ಪನಿತಾಹಾರಮನಿಂದಿನೊಂದು ದಿವಸಕ್ಕಮಱಿಸಿ ಕೊಳ್ಳಂ, ಪೋಗಿಮೆನೆ; ಕಿಂಕರತ್ರಯಂ ಕಿಱಿದಂತರಂ ಪೋಗಿ—ನಾವಿನ್ನೇಗೆಯ್ವಮೆಂದು ತಮ್ಮೊಳಾಳೋಚಿಸುವಲ್ಲಿ ನರಿಯೆಂದುದು:—ಇಲ್ಲಿಗೊಂದುಪಾಯುವನಾನೇ ಬಲ್ಲೆಂ, ಈಯೊಟ್ಟೆಯಂ ಕೊಂದರಸಂಗಂ ನಮಗಂ ಬಂದೆರಡು ದಿವಸಕ್ಕಾಹಾರಮಂ ಮಾಡಿ ಕೊಂಡು ಬೞಿಕ್ಕೆ ಮೇಲಪ್ಪುದಂ ಬಗೆದು ಕೊಳ್ವಮೆಂದೊಡನದಂ ಕೊಲ್ವ ದೆಸೆಯಂ ಪೇೞ್ದೊಡಾಮಾತಂ ಕೇಳ್—ಒಟ್ಟೆಗಮಭಯಮಂ ಕೊಟ್ಟನೆಂದು ಮದೋತ್ಕಟಂ ನಮಗೆ ಮುಳಿಗುಮೆಂದು ಪುಲಿ ನುಡಿವುದುಂ; ವಾಯುಸಂ ನಿರಾಯಾಸದೊಳೊಡಂಬಡಿಸಲಾನೇ ಸಾಲ್ವೆನೆಂದು ಮದೋತ್ಕಟನಲ್ಲಿಗೆ ಬಂದಿಂತೆಂದುದು:—ದೇವಾ! ಪೆಱತೆಡೆಯೊಳೆಲ್ಲಿಯುಮಾಹಾರಂಬಡೆಯಲಾ[2]ರ್ತೆ[2]ವಿಲ್ಲ: ಎನ್ನ ಬುದ್ಧಿಯಂ ಕೈಕೊಳ್ವರಪ್ಪೊಡೆ ನಮಗೊಂದರ್ಕಂ ಮುಟ್ಟಲ್ಲದೀಯೊಟ್ಟೆಯಂ ಕೊಂದೊಂದೆರಡು ದಿವಸದಾಹಾರಮಂ ನಿಮಗಪ್ಪನಿತಂ ಮಾಡಿಕೊಳ್ವುದೆನೆ; ಮದೋತ್ಕಟನಿಂತೆಂದಂ:—

ಒದವಿದ ದಯೆಯಿಂದಭಯ। [೧೫
ಪ್ರದಾನಪೂರ್ವಕಮಿರೆಂದು ಪೇೞ್ದಂ ಸಲೆ ನಂ॥
ಬಿದನಂ ಕೊಂದೊಡೆ ಪಾಪ[3]ಮು।
ದೊ[3]ದವಿರ್ಕುಂ ಕೀರ್ತಿ ಮಾಸುಗುಂ ಧರೆ ಪೞಿಗುಂ॥218

ಅದಲ್ಲದೆಯುಂ,

ಶ್ಲೋ॥ "ನ ಗೋಪ್ರದಾನಂ ನ ಚ ಭೂಮಿದಾನಂ ನ ಚಾನ್ನದಾನಂ ನ ಹಿರಣ್ಯದಾನಂ।
ಸರ್ವಪ್ರದಾನೇಷ್ವಭಯಪ್ರದಾನಂ ತಥಾ ಪ್ರದಾನಂ ಪ್ರವದಂತಿ [1]ಧೀರಾಃ[1] ॥"

ಪಾ—1. ಸಜಃ. 2. ಕ॥ ಪಡಂ......ಳೇಳ್ದು. ಖ॥ 3, ತುಕ. ಗ.॥ 4 ದೋಳೊ. ಗ॥

[ಟೀಕು—ಗೋದಾನಂ, ಭೂದಾನಂ, ಅನ್ನದಾನಂ, ಹಿರಣ್ಯದಾನಂ, ಇವೆಲ್ಲವುಂ ಬಾರ್ತೆಯಲ್ಲ; ಸರ್ವದಾನಂಗಳೊಳಭಯ(ಪ್ರಾಣ)ದಾನವೇ ಮುಖ್ಯವೆಂದು ಬಲ್ಲರ್ ಪೇಳ್ದಿರ್]

ಎಂಬ ಧರ್ಮಶಾಸ್ತ್ರಮುಂಟದಱಿಂ ನಂಬಿದನಂ [2]ಕೊಂದು ತಿಂಬುದು[2] ಧರ್ಮಮಲ್ಲನೆ; ವಾಯುಸನಿಂತೆಂದುದು:—ದೇವಾ! ಧರ್ಮಮಂ ನೀವೆತ್ತ[3]ಲಱಿವಿ[3]ರ್. [೫

೧೭. ನಾಳೀಜಂಘನೆಂಬ ಗೋಲಾಂಗೂಲದ ಕಥೆ.

ಸಕಲವೇದಾಂತಪಾರಂಗತನಪ್ಪ ಗೌತಮಮಹಾಮುನಿ ಮಹಾಟವಿಯಂ ಪೊಕ್ಕು ಉಗ್ರೋಗ್ರತಪೋನಿಯಮಾನುಷ್ಠಾನನಿಷ್ಠಿತಚಿತ್ತನಾಗಿ ಪಲವುಕಾಲಂ ನಿರಾಹಾರನಾಗಿರ್ದ ಕಾರಣಂ ಪ್ರಾಣವಿಯೋಗವಾಗಲಿರ್ದನನಾತಂ ಮುನ್ನ ನಡಪಿದುದೊಂದು ಗೋಲಾಂಗೂಲಂ ನಾಳೀಜಂಘನೆಂಬುದು ಕಂಡು—ನಿಮ್ಮಡಿ, ನೀವೆನ್ನ ಶರೀರವನಾಹಾರಂಮಾಡಿನ್ನುಂ ಕೆಲವುಕಾಲಂ ತಪಂಗೆಯ್ಯಿಮೆಂದೊಡಾಮುನಿ ತಾಂ ನಡಪಿದ ಪ್ರಾಣಿಯಂ ತಿಂಬುದು ಧರ್ಮಮಲ್ಲೆಂದೊಡಾಕಪಿ ತಾಂ ತಾಪಸರ ಸಮೀಪದೊಳೆ ಬಳೆದ ಕಾರಣದಿಂ ತತ್ತ್ವವೇದಿಯಪ್ಪುದಱಿಂ ಮತ್ತಮಿಂತೆಂದುದು:—ನಿಮ್ಮಡಿ, ನಿಮಗೆ ಭ್ರಾಂತಿಜ್ಞಾನಮಿನ್ನುಂ ಪೋದುದಿಲ್ಲ, ಶರೀರಕ್ಕಲ್ಲದೆ ಶರೀರಿಗೆಲ್ಲಿಯುಂ ಕೇಡಿಲ್ಲ, [೧೬

ವಾಕ್ಯಂ|| "ಪರೋಪಕಾರಾರ್ಥಮಿದಂ ಶರೀರಂ|| " ೧೦೪

ಎಂಬುದನಱಿವೆನಾಗಿಯುಂ ಈ ಶರೀರಮಂ ನಿಮಗಿತ್ತಪೆಂ, ನೀವಿದಂ ಕೈಕೊಂಡೆನ್ನಂ ಕೃತಾರ್ಥನಂ ಮಾಡಿಮೆಂದು ಪ್ರಾರ್ಥಿಸೆ; ಪ್ರಾಣರಕ್ಷಣಾರ್ಥಂ ತಾಂ ನಡಪಿದ ಕಪಿಯಂ ತಿಂದಂ. [೨೦

(೧೬ ನೆಯ ಕಥೆಯ ಶೇಷ.)

ಅಂತುಮಲ್ಲದೆಯುಂ,

ವಾಕ್ಯಂ|| ಶರೀರಮಾದ್ಯಂ ಖಲು ಧರ್ಮಸಾಧನಂ|| " ೧೦೫

ಪಾ 1. ಕೊಂದ್ಯೊಡೆತಿಂದೊಡೆ. ಗ || 2. ಬಲ್ಲಿ. ಖ ||

ಎಂಬುದು. ಅಲ್ಲದೆಯುಂ,

ಶ್ಲೋ॥ "ಪುನರ್ವಿತ್ತಂ ಪುನರ್ಮಿತ್ರಂ ಪುನರ್ಭಾರ್ಯಾ ಪುನರ್ಮಹೀ।
ಪುನಶ್ಶುಬ್ಧಾದಯೋ ರವಾಪ್ಯಾ ನ ಶರೀರಂ ಪುನಃಪುನಃ॥" ೧೦೬

[ಟೀಕು — ಧನವಂ ಮಿತ್ರನಂ ಹೆಂಡತಿಯಂ ಭೂಮಿಯಂ ಇವೆಲ್ಲವಂ ಮರಳೆ ಪಡೆಯಲ್ಬಹುದು; ಶರೀರವೆಂಬುದಂ ಮರಳೆ ಪಡೆಯಲ್ಬಾರದು.]

ಎಂಬ ಶಾಸ್ತ್ರೋಕ್ತಮುಂಟಪ್ಪುದಱಿಂ, ನಿಮಗಂ ಪುಣ್ಣ ಬೇನೆ ತಿಣ್ಣಮದಱಿಂ ಮೇಲೆ ಕ್ಷುಧಾಪೀಡೆಯಾದುದಪ್ಪೊಡೆ ಶರೀರಮಂ ಸಂಹರಿಸಲ್ಬಾರದು. ಕಥಕನಪ್ಪೊಡೆಲ್ಲಿಯಾನುಂ ಬಂದ ಕವಲದಂ ತಿಂದೊಡೊಂದುಂ ದೋಷಮಿಲ್ಲೆಂದೊಡಂತಾದೊಡಂ ನಿಮಗೆ ಮನೋವ್ಯಥೆಯಾಗದಂತು ನಾಲ್ವರುಂ ಬಂದೆಮ್ಮೆಮ್ಮಂ ನಿವೇದಿಸಿದೊಡಲ್ಲಿ [1]ನಿಮ್ಮ ಮನಕ್ಕೆ[1] ಬಂದರಂ ಕಳೆದು ಕೊಳ್ಳಿಮೆಂದು ಕಾಗೆ ಬಾಯ್ಗೆ ಬಂದುದಂ ಗಱಿ ಪಿದೊಡೆ; ಮದೋತ್ಕಟನೊಡಂಬಟ್ಟಾವುದುಮಂ ನೀನೆ ಬಲ್ಲೆಯೆನೆ; ವಾಯುಸಂ ಸೃಗಾಲಶಾರ್ದೂಲಂಗಳಲ್ಲಿಗೆ ಬಂದೊಟ್ಟೆಯಂ [2]ವೊಟ್ಟನೆ ಮಾಡ್ಪಿ ಕಜ್ಜಮಂ ಪೇೞ್ದೊಡಂಬಡಿಸಿ[2] ಬಂದೆನೆಂದು ತತ್ಪ್ರಪಂಚಮೆಲ್ಲಮಂ ಪೇೞ್ದು ಬೞಿಕ್ಕೆ ಕಥಕನಂ [3]ಕರೆದು[3]— ನಮ್ಮರಸು ಪಲವುದಿನಕ್ಕಮಾಹಾರಂಬಡೆಯದೆ ಮಱುಗುತ್ತಿರ್ದಪನಾಮುಂ ಪೆಱತೆಡೆಯೊಳಾಹಾರಂಬಡೆಯಲಾರ್ತವಿಲ್ಲೆಮ್ಮಂ ನಿವೇದಿಸಿದೊಡೇಗೆಯ್ದುಂ ತಪ್ಪುವನಲ್ಲಂ, ಸುಮ್ಮನಿರದೆ ಪಾಳಯಂ [4]ಪಾ[4]ಳಿಸುವಂ ಬನ್ನಿಮೆಂದಾಧೂರ್ತತ್ರಯಂ ಕಥಕಂಬೆರಸು ಸಿಂಹನಲ್ಲಿಗೆ ಬಂದು ಪೊಡೆವಟ್ಟು, ಬೞಿಕ್ಕೆ ಕಾಗೆ ಇಂತೆಂದುದು:—

ದೇವ ನಿಮಗಪ್ಪ ಪಿಶಿತಮು।
ನಾವೆಡೆಯೊಳಮಱಸಿ ಪಡೆದೆವಿಲ್ಲಾದೊಡಮೇಂ॥

ಪಾ—1. ನೀಯಸ. ಗ॥ 2. ಕೊಲ್ಪ. ಕಜ್ಜಮಂಮಾಡಿ. ಗ॥ 3. ಕಂಡು. ಕ॥ 4. ಬಾ. ಕ॥ ಗ॥

ನೀವುಳ್ಳೊಡೆ ಮತ್ತಂ ಪೆಱ ।
ತಾವುದುಮಂ ಪಡೆಯಲಕ್ಕುಮದಱಿಂದೀಗಳ್ ॥ 219

ಎಂ[1]ದಿಂದಿನ ಬಾ[1]ಣಸಕ್ಕನ್ನಂ ನಿವೇದಿಸಿದೆಂ, ದೇವರ್ ಕೈಕೊಳ್ಳಿಮೆನೆ; ಮದೋತ್ಕಟನಿಂತೆಂದಂ:—ಕಾಗೆಯಂ ತಿಂದಪೆನೆಂಬನಿತಱೊಳೆ ವಿಕ್ರಮಾದಿತ್ಯದೇವನನಿನ್ನು ವಿಾಲೋಕಂ ಪೞಿದಪುದು; ಅಂತುಮಲ್ಲದೆ "ಕಾಗೆಯಡಗು ಬೋನಂಬುಗದು" ಎಂಬುದು ಲೋಕಪ್ರಸಿದ್ಧಮದಱಿಂ [2]ನಿಷಿದ್ಧ[2]ಮೆನೆ; ಜಂಬುಕನಿಂತೆಂದುದು:— ಅಂತಪ್ಪೊಡೆ ದೇವರೆನ್ನನಾರೋಗಿಸಿ ನೀರೋಗಿಗಳಾಗಿಮೆಂದೊಡೆ;ಉತ್ತುಂಗಮತ್ತಮಾತಂಗಮಂ ಕೊಂದು ತಿಂಬ ಸಿಂಹನೊಂದು ನರಿಯಂ ತಿಂದುದೆಂದು ಲೋಕಮುಪಹಾಸ್ಯಂಗೆಯ್ಗುಮೆನೆ; ಪುಲಿ ಕಲಿಯಾಗಿ ಮುಂದೆ ನಿಂದು—ದೇವರೆನ್ನಂ ಭಕ್ಷಿಸಿ ನಿಮ್ಮ ಶರೀರಮಂ ರಕ್ಷಿಸಿಮೆಂದೊಡಾಂ ವ್ರಣಶರೀರಿ, ಎನ್ನ ಪುಣ್ಣೊಳಗೆ ನಿನ್ನ ರೋಮಂ ಪುಗೆ ಪೊಲ್ಲದಪ್ಪುದು, ನಿನ್ನ ಮಾಂಸಮನೆಂತು ತಿನಲ್ಬರ್ಕುಮೆನೆ; ಇದೆಲ್ಲಮನೊಟ್ಟೆ ಕೇಳ್ದು—ದುಷ್ಟರಂ ತಿನ್ನದ ಸಿಂಹಂ ತನ್ನನೆ ನಂಬಿ ಬಂದಿರ್ದೆನ್ನನೆಂತುಂ ತಿಂಬುದಿಲ್ಲಮಾದೊಡಮಾನುಂ ನುಡಿದು ಮಾತಂ ಪಾಲಿಸುವೆನೆಂದು ಸಿಂಹದ ಸಮಿಾಪಕ್ಕೆ ಬಂದೆನ್ನೊಡಲ್ ದೇವರೆಡರ್ಗಲ್ಲದೊಡೇವಾಱತ್ತು, ಎನ್ನ ಶರೀರಮಂ ಕೈಕೊಳ್ಳಿಮೆನೆ; ಮದೋತ್ಕಟನುಸಿರದಿರ್ಪುದುಂ; ಸೃಗಾಲಶಾರ್ದೂಲಕಾಕಂಗಳ್ ಕಥಕನ ಪೃಥುಶರೀರಮಂ [3]ಸೀೞ್ದು[3] ಸೀೞ್ದುಂಬುಳಾಡಿ ಕೊಂದುವು.

ಶ್ಲೋ ॥ "ಬಹವಃ ಪಂಡಿ[4]ತಾಃ[4] ಕ್ಷುದ್ರಾಃ ಸರ್ವೇ, ಮಾಯೋಪಜೀವಿನಃ ।
ಕುರ್ಯುರ್ದೋಷಮದೋಷಂ ವಾ [5]ಉಷ್ಟ್ರೇ[5] ಕಾಕಾದಯೋ ಯಥಾ॥"

[ಟೀಕು—ಹಲಬರು ಪಂಡಿತರು ಕ್ಷುದ್ರರು ವಂಚಕತೆಯಿಂ ಜೀವಿಪ್ಪರೆಲ್ಲರು ಲೇಸನಾದೊಡಂ ಹೊಲ್ಲಹವಂ ಮಾಳ್ಪರು. ಅದು ಹೇಂಗೆಂದೊಡೊಂಟೆಯಂ ಕಾಕಾದಿಗಳ್ ಕೊಲಿಸಿದ ಹಾಂಗೆ. ]

ಪಾ—1. ದೀಪದಿನದಾ. ಗ ॥ 2. ನಿಷೇಧ. ಗ ॥ 3. ಪೋೞ್ದು. ಗ ॥
4. ತಾ. ಗ ॥ 5. ಉಷ್ಟ್ರಂ. ಕ ॥

ಎಂಬುದು ಕಾರಣಂ ದುಷ್ಟರ ನಡುವಿರ್ದ ಶಿಷ್ಟಂಗೇಗೆಯ್ದುಂ ಸುಖ ಮಾಗಲಱಿಯದು, ಪಿಂಗಳಕನೆನಗಿನಿತನರ್ಥಮಂ ಬಗೆವುದೆಲ್ಲಂ ಕ್ಷುದ್ರ ಪರಿವಾರಪ್ರೇರಣೆಯಿಂದಲ್ಲದೆ ಪೆಱತೊಂದು ಕಾರಣಮಿಲ್ಲೆನೆ; ದವನಕ ನಿಂತೆಂದಂ:—ನೀಂ ಪೇೞ್ದ ದೃಷ್ಟಾಂತಂಗಳ್ ಪುಸಿಯಲ್ಲಮದೆಂತೆನೆ:—

ಶ್ಲೋ|| "ಬಹವೋ ಬಲವಂತಶ್ಚ ಉಪಾಯಜ್ಞಾಶ್ಚ ದುರ್ಜನಾಃ |"

ಎಂಬ ಕಥೆಯೊಂದುಂಟೆನೆ— ಸಂಜೀವಕನದೆಂತೆನೆ — ದವನಕಂ ಪೇೞ್ಗುಂ:—

೧೮. ನಾಲ್ವರ್ ಧೂರ್ತರ್ ಒರ್ವ ಬ್ರಾಹ್ಮಣನಂ ವಂಚಿಸಿದ ಕಥೆ.

ಒಬ್ಬ ಶ್ರೋತ್ರಿಯನಪ್ಪ ಪಾರ್ವಂ [1]ಯಜ್ಞ[1]ನಿಮಿತ್ತಂ ಒಂದಾಡಂ ಬೇಱೂರಿಂ ಮಾಱುಗೊಂಡು ಪೆಗಲೊಳಿಕ್ಕಿ ಪೋಪನಂ ನಾಲ್ವರ್ ಧೂರ್ತರ್ ಕಂಡು—ನಾವೀಬೆಳ್ಳನನಾಳವಾಡಿಕೊಂಡೀಯಾಡಂ ನಾಯಂ ಮಾಡಿ ತಿಂಬಂ ಬನ್ನಿಮೆಂದು, ಮುಂದೆ ಪರಿದೋರೊರ್ವರೆ ಮಾರ್ಬಟ್ಟೆ ಯೊಳ್ ಬರ್ಪಂತಾಗಿ ಬರುತ್ತುಂ, ಮುನ್ನಮೊರ್ವಂ ಬಂದೆಲೆ ಪಾರ್ವ! ನೀನಪ್ಪೊಡೆ ದುರ್ವಾಸನ ಸಮಾನನಪ್ಪ ಬ್ರಾಹ್ಮಣಂ, ನೀನೀಶ್ವಾನನನೇ ನಿಮಿತ್ತಂ ಪೊತ್ತು ಪೋದಪೆಯೆಂದು ನುಡಿದು ಪೋದಂ; ಆಭಟ್ಟನೀ ದುಷ್ಟಂಗೆ ಮಱುಮಾತುಗೊಟ್ಟೊಡೇನಪ್ಪುದೆಂದುಸಿರದೆ ನಡೆವುದುಂ; ಮತ್ತೊರ್ವನಿದಿರೆ ಬಂದೆಲೆ ಭಟ್ಟರೇ! ಬ್ರಾಹ್ಮಣಂ [2]ನಾಯಂ ಮುಟ್ಟ ಲಾಗದೆಂಬರದು ಕೆಟ್ಟು ಪೊತ್ತುಕೊಂಡು ಪೋದಪೆ, ನೀವೆತ್ತಾನುಂ ಮ ರುಳ್ಗೊಂಡಿರೋ ಮರುಳಿಕ್ಕಿ ಅಟ್ಟುದನುಂಡಿರೋ ಪೇೞಿಮಲ್ಲದಾಗಳ್ ನೀನೆತ್ತಲೀಚಂಡಾಲಕರ್ಮದೊಳ್ ತೊಡರ್ದ ಇಂತು ಭ್ರಷ್ಟಾಚಾರ ನಾದೆ, ನಿನ್ನಂ ಮುಟ್ಟಲಾಗದೆಂದವಂ ಕಳದು ಪೋಪುದುಂ; ಭಟ್ಟಂಗೆ

ಪಾ—1. ಶ್ರಾದ್ಧ. ಗ || 2. ಭಟ್ಟಾಚಂಗನಂ. ಗ ||

ಭ್ರಾಂತಿ ಪುಟ್ಟೆ ನಿಂದು ಪೆಗಲೊಳಿರ್ದ ಛಾಗಲಮಂ ಭೂಭಾಗದೊ ಳಿಱಿಪಿ,

ಶ್ರವಣಶಿರಃಪುಚ್ಛಾ[1]ಸ್ಯಾ।
ದ್ಯವಯವಮಂ[1] ಮುಟ್ಟೆ ನೋಡಿ ನಾಯಲ್ಲಿದು ಭೂ॥
ಭುವನಪ್ರಸಿದ್ಧಮಜಮೆಂ। [೫
ದವಧಾರಿಸಿ ಪೊತ್ತು ಕೊಂಡು [2]ಪೋದಂ[2] ಪಾರ್ವಂ॥ 220

ಅಂತು ನಡೆವ ಪಾರ್ವಂಗೆ ಮತ್ತೊರ್ವನಿದಿರಂ ಬಂದೆಲೆ ಪಾರ್ವ! ನಿಮಗೆ ಕುಶಾಕ್ಷಮಾಲಾಯಜ್ಞೋಪವೀತೋತ್ತರೀಯಾದಿಚಿಹ್ನಂಗಳೆ ತ್ತಲೀನಾಯಂ ಪೊತ್ತು ಪೋಪುದೆತ್ತಲೆತ್ತಾನುಂ ನಿಮಗೆ [3]ಮೃಗಯಾವ್ಯ ಸನವ್ಯಾಪಾರ[3]ಮಾದುದಕ್ಕುಮಲ್ಲದಾಗಳಿದು ನಿಮ್ಮ ದುಷ್ಕರ್ಮದ ಫಲ ಮೆಂದು ನುಡಿದು ಪೋಪುದುಮಾಪಾರ್ವಂ ಚೋದ್ಯಂಬಟ್ಟು,

ಚಿತ್ತಭ್ರಾಂತಿಭ್ರಾಂತಂ। [೧೨
ಪೊತ್ತುದುಮಂ ತಡವಿ ನೋಡುತುಂ ಛಾಗಲಮಂ॥
ಮತ್ತಾ ಪಾರ್ವಂ ವಿಸ್ಮಿತ।
ಚಿತ್ತಂ ಚಿಂತಿಸುತೆ ಮುಂತೆ ಬರೆ ಮತ್ತೊರ್ವಂ॥ 221

ಅಂತು ಬಂದೆಲೆ ದ್ವಿಜ! ನೀನಿನಿತು ಕಾಲಂ ಬ್ರಾಹ್ಮಣನುಂ ಸದಾ ಚಾರನುಮಾಗಿರ್ದೀಗಳೀಶ್ವಾನನಂ ಪೊತ್ತು ಹೀನಜಾತಿಸಮಾನನಾದೆ ಇದಂ ಮಹಾಜನಂಗಳ್ ಕಂಡರಪ್ಪೊಡೆ ಸಭಾಜನಕ್ಕಂ ಸಹಪಙ್ಕ್ತಿಗಂ ಪೊ ಱಗೆಂದು ಸಮಯಬಾಹ್ಯನಂ ಮಾಳ್ಪರದಱಿಂದೀನಾಯನೀಡಾಡಿ ಪ್ರಾ ಯಶ್ಚಿತ್ತಮಂ ಕೈಕೊಳ್ಳೆಮೆಂದು ಪೇಳ್ದು ಪೋಪುದುಮಾಪಾರ್ವನಿದಂ ಕಂಡವರೆಲ್ಲಂ ನಾಯಂ ಪೊತ್ತು ಕೊಂಡು ಪೋದಪನೆನುತ್ತುಮಿರ್ದರಾ ನೆತ್ತಾನುಂ ಮರುಳ್ಗೊಂಡೆನಕ್ಕುಮದಲ್ಲದಾಗಳಿದು ಕಾಮರೂಪಿಯಕ್ಕು

ಪಾ—1. ದ್ಯವಯವಂಗಳಂ. ಕ ॥ ಗ ॥ 2. ನಡೆದಂ. ಖ ॥ ಗ ॥
3. ಮೃಗವ್ಯವ್ಯಾಪಾರವ್ಯಸನಂ. ಖ ॥

ಮಿದನೆಂತಱಿಯಲಕ್ಕುಮೆಂದು ಭಯಂಗೊಂಡಾಡಂ ಶ್ವಾನನೆಂದೀಡಾಡಿ ಮಾಳಂಗೊಂಡೋಡಿದಂ. ಇತ್ತಲಾಧೂರ್ತರೆಲ್ಲರ್ ಬಂದು ತಮ್ಮ ವಂಚನೋಪಾಯಕ್ಕೆ ತಾವೆ ಮೆಚ್ಚಿ ನಕ್ಕು ಆಡಂ ತಿಂದರ್.

ಎಂಬ ಕಥೆಯಂತಾದುದದಱಿಂ,

ಶ್ಲೋ|| "ಬಹವೋ ಬಲವನ್ತಶ್ಚ ಉಪಾಯಜ್ಞಾಶ್ಚ ದುರ್ಜನಾಃ| [೫
ಶಕ್ಯಾ ವಂಚಯಿತುಂ ಬುಧ್ಯಾ ಬ್ರಾಹ್ಮಣಂ ಛಾಗಕಂ ಯಥಾ ||" ೯೯

[ಟೀಕು–ಹಲಂಬರು ಶಕ್ತಿವಂತರುಂ, ಉಪಾಯಮಂ ಬಲ್ಲ ದುರ್ಜನರುಂ, ಬುದ್ಧಿಯಿಂದೊರ್ಬನಂ ವಂಚಿಸಲು ಸಮರ್ಥರು. ಅದೆಂತೆಂದೊಡೆ–ಬ್ರಾಹ್ಮಣನ ಕೈಯಲಿ ದ್ದಾಡಂ ನಾಯೆಂದು ಹಾಕಿಸಿದಹಗೆ.]

ಎಂಬುದುಮಲ್ಲದೆಯುಂ ಪ್ರಭಾಕರನೆಂಬ ಗುರುವಂ [1]ಅಂಬಷ್ಟ[1] ಛಂದೋರಗನೆಂದು ಪೇೞ್ವನಿತಱಿಂದೊಳರಸನಂತಾಭಟ್ಟನುಮಂ ಪಲಂಬರ್ ದುಷ್ಟರೊಂದಾಗಿ ಮರುಳ್ಮಾಡಿದರ್; [2]ಮತ್ತಂ ವರರುಚಿಭಟ್ಟನಂ[2] ಪಲರ್ ದುಷ್ಟರೊಂದಾಗಿ ಪೊಲೆಯನೆಂದು ಗೆಲೆಬಾಯರ್ವರೆಂ[3]ದೊಡು ಱುದ[3]ರಳವಾವುದು; ಪಿಂಗಳಕನೀಗಳ್ ನಿನಗೆ ನಿರ್ನಿಮಿತ್ತಂ ಮುಳಿದನದಲ್ಲದೆಯುಂ, [೧೫

ಶ್ಲೋ|| "ಕರ್ತ[4]ವ್ಯಂ ಚ ನ ಕರ್ತವ್ಯಂ[4] ಯದುಕ್ತಂ ಬಹುಭಿರ್ಜನೈಃ ||"

ಎಂಬೀನಯಮಂ ಕೈಕೊಂಡತಿಕೋಪಿಯಾಗಿರ್ದಪನೀಯವಸರಕ್ಕೆ ಕಜ್ಜಮದೆಂತೆನೆ:–

ಶ್ಲೋ|| "ಯಾವದ್ಭಯಸ್ಯ ಭೇತವ್ಯಂ ತಾವದ್ಭಯಮನಾಗತಂ|
ಆಗತಂ ತು ಭಯಂ ದೃಷ್ಟ್ವಾ ತತ್ಕಾಲೇ ಚ ಭಯಂ ತ್ಯಜೇತ್ ||" ೧೦೦

[ಟೀಕು—ಎನ್ನವರಂ ಭಯಂ ಬಹುವದು ಅನ್ನವರಮಂಜುವುದು; ಭಯಂ ಮುಟ್ಟಿಬಂದ ಬಱಿಕ್ಕಂಜಲಾಗದು.] [೨೦

ಪಾ—1. ಪ್ರತಿಯಲ್ಲಿಲ್ಲ. ಖ || 2. ಧರ್ಮಾರ್ಥಂ......ಭಟ್ಟನ. ಖ ||
3. ದು ತುಳಿದ ರಾಯರ ಗ || 4. ವ್ಯಾಪಿನ ಕರ್ತವ್ಯಾ. ಖ || ಗ ||

[1]ಎಂಬುದನಱಿದು ತಱಿಸಂದಿಱುವುದೆ ನಯಮಲ್ಲದೆ ಪೆಱತಾವ ನಯಕ್ಕುಪಾಯಮಿಲ್ಲೆನೆ,[1] ಸಂಜೀವಕನಿಂತೆಂದಂ: —

ಶ್ಲೋ|| “ಕೋಽಹಂ ಕೌ ದೇಶಕಾಲೌ ಸಮವಿಷಮಗುಣಾಃ ಕೇ ದ್ವಿಷಃ ಕೇ ಸಹಾಯಾಃ|
ಕಾ ಶಕ್ತಿಃ ಕೋಽಭ್ಯುಪಾಯಃ ಕಥಮಪಿ ಚ [2]ಕಿಯತ್ತ್ರೀದೃಶೀ [2]ದೈವಸಂಪತ್ ||
[3]ಸಂಪತ್ತ್ಯಾ[3] ಕೋಽನುಬನ್ಧಃ ಪ್ರತಿಹತವಚನಸ್ಯೋತ್ತರಂ ಕಿನ್ನು ಮೇಸ್ಯಾತ್ | [೫೫
ಇತ್ಯೇವಂ ಕಾರ್ಯಸಿದ್ಧ್ಯೈ ವ್ಯವ[4]ಸಿತ[4]ಮನಸೋ ನೋಪಹಾಸ್ಯಂ [5]ಪ್ರಯಾನ್ತಿ[5]||”

[ಟೀಕು— ನಾನಾರ್; ದೇಶಕಾಲಂಗಳಾವುವು; ಸಮವಿಷಮವಹ ಹಗೆಗಳಾರ್, ಸಹಾಯರಾರ್; ತನ್ನ ಶಕ್ತಿಯುಪಾಯಮಾವುದು; ಅದು ಹೇಂಗೆ; ದೈವಸಹಾಯಮೆಷ್ಟು; ಆವುದ್ಯೋಗದಿಂ ದೈವಸಹಾಯಂ ದೊರೆಕೊಂಬುದು; ಲೋಗರಿಂ ಕಿಡುವ ನುಡಿಯುಳ್ಳವಗುತ್ತರವಾವುದಹುದೆಂತೆಂತೀಪ್ರಕಾರದಿಂ ತಮ್ಮ ಕಾರ್ಯಸಿದ್ಧಿಯಲ್ಲಿ ಉದ್ಯೋಗಚಿತ್ತವುಳ್ಳವರೆಂದುಂ ನಗಿಸಿಕೊಳ್ಳದಿಹರು ]

ಶ್ಲೋ|| “ಗುಣವದಗುಣವದ್ವಾ ಕುರ್ವತಾ ಕಾರ್ಯಜಾತಂ |
ಪರಿಣತಿರವಧಾರ್ಯಾ ಯತ್ನತಃ ಪಂಡಿತೇನ ||
ಅತಿರಭಸಕೃತಾನಾಂ ಕರ್ಮಣಾಮಾವಿಪತ್ತೇ |
ರ್ಭವತಿ ಹೃದಯದಾಹೀ ಶಲ್ಯತುಲ್ಯೋ ವಿಪಾಕಃ ||” ೧೧೧ [೧೫೫

[ಟೀಕು—ಗುಣಮುಳ್ಳರಾಗಲಿ ಗುಣಹೀನರಾಗಲಿ ಕಾರ್ಯವಂ ಮಾಡುವವರ್ಗೆ ಬುದ್ಧಿವಂತರಿಂದಾಪ ಕಾರ್ಯವುಂ ನಿಶ್ಚಯಿಸಲ್ಪಡುವುದು; ಅತಿತ್ವರಿತದಿಂ ಮಾಡುವವರ್ಗೆ ಕಾರ್ಯಂಗಳಾಧಿಪತ್ಯದಲ್ಲಿ ಶಲ್ಯದೋಪಾದಿ ಹೃದಯಮಂ ಸುಡುವುದು. ]

ಇಂತಪ್ಪ ನೀತಿಗಳೊಳವು; ಆನಪ್ಪೊಡೆತ್ತು, ಎನಗೆ ಸಹಾಯಾದಿ ಸಾಧನೋಪಾಯಂಗಳೊಂದುಮಿಲ್ಲ, ಪಿಂಗಳಕನಪ್ಪೊಡೆ ಮತ್ತಮಾತಂಗಯೂಥಮಂ ಬೆದಱಿ ಬೆಂಕೊಂಡು ಕೊಲ್ವ ಸಿಂಗಂ, ಅದಱಿಂದಸಮಾನವಿಗ್ರಹನೊಡನೆ ಸಮಾನವಿಗ್ರಹಮನೆಂತೆತ್ತಿಕೊಳ್ವೆನೆಂದೊಡೆ; ಇಂತೇಕೆ ಮನಂಗುಂದಿ ನುಡಿವೆಯೆಂದು ದವನಕನಿಂತೆಂದಂ:—ದೈವ ಮನುಷ್ಯಬಲಮೆಂಬೆರಡಱೊಳಂ ಕಾರ್ಯಸಿದ್ಧಿಯಕ್ಕುಂ; ಅಲ್ಲಿ ಮನು

ಪಾ—1. ಎನೆ. ಗ || 2. ಸುಖಂ ಕೀದೃಶೀ. ಖ ||
3. ಸಂಪತ್ತೌ. ಕ || ; ಸತ್ಯೇವಂ. ಗ || 4. ಹಿತ. ಖ || ಗ || 5. ಭಜನ್ತೇ. ಗ ||

ಸ್ಯಬಲಮಿಲ್ಲದವರ್ [1]ಸತ್ವಾವಿಳಂ[1] ಬಿಗಳಾಗಿ ಸಾಹಸಂಗೆಯ್ದು ದೈವಬಲದಿಂದಧಿಕರಪ್ಪರಂ ಗೆಲ್ದ ಕಥೆಗಳೊಳವೆನೆ—ಸಂಜೀವಕನದೆಂತೆನೆ—ದವನಕಂ ಪೇೞ್ಗುಂ:—

೧೯. ಟಿಟ್ಟಿಭಮಿಥುನಂಗಳ ಕಥೆ.

ಬಲವೈರಿಸ್ಫಾರವಜ್ರಾಧಿಕಭಯಚಕಿತೋ[2]ದ್ಧೂತ[2] ವೈನಾಕಗೋತ್ರಾ।
ಚಲಪಕ್ಷ[3] ತ್ರಾಯಿಯಿಂದು[3] ಪ್ರಿಯತಮನತಿಗಂಭೀರನಂತರ್ನಿವಿಷ್ಟಾ॥
ಖಿಲಲೋಕಂ ನಕ್ರಚಕ್ರಸ್ಫುರದುರುತರಯಾದಶ್ಚ[4]ರಾಧ್ಯಾಸಿತ[4] ಪ್ರೋ।
ತ್ಕಲಿತಾಂಭಃಕುಂಭಿಕುಂಭೋನ್ಮದರಸ[5]ವಿಲಸತ್ಕ್ರೋ[5]ಭರೌದ್ರಂ ಸಮುದ್ರಂ

ವ॥ ಅಂತಾಸಮುದ್ರದ ತೀರೈಕಪ್ರದೇಶದೊಳ್ ಮಧುರಾಲಾಪೆಯುಂ ಚಂಡಪರಾಕ್ರಮನುಮೆಂಬ ಟಿಟ್ಟಿಭಮಿಥುನಂ ಸುಖದಿನಿರ್ದೊಂದುದೆವಸಂ ಮಧುರಾಲಾಪೆ ನಿಜಪ್ರಾಣೇಶ್ವರಂಗಿಂತೆಂದಳ್:—ಈಸಮುದ್ರತೀರಮಪಾಯಬಹಳಮೆನಗಂ ಪ್ರಸವಸಮಯಮತ್ಯಾಸನ್ನವಾದಪ್ಪುದು; ಇನ್ನಿಲ್ಲಿರಲ್ಬಾರದು; ಪೆಱತೊಂದು ನಿರಾಕುಳಮಪ್ಪೆಡೆಯನೆಡೆಮಾಡಿ ಬಂದೆನ್ನನೊಡಗೊಂಡು ಪೋಗಿಮೆಂಬುದುಂ; ಟಿಟ್ಟಿಭನಿಂತೆಂದಂ:—ಇಲ್ಲಿಂದಗ್ಗಳಮಪ್ಪ ನಿರಾಕುಳ[6]ಸ್ಥಾನಮಂ[6] ಪಡೆಯಲ್ಬಾರದೆನೆ; ಮಧುರಾಲಾಪೆ ಮತ್ತಮಿಂತೆಂದಳ್:—ಈಸಮುದ್ರಂ ಮೇಲೆ ಭೋರೆಂದೆತ್ತಿ ಬಂದೀತತ್ತಿಗಳಂ ಕೊಂಡು ಪೋದೊಡುತ್ತರಕಾಲಕ್ಕೇಗೆಯ್ವಂ ಪೇೞಿಮೆನೆ; ಚಂಡಪರಾಕ್ರಮನಿಂತೆಂದಂ: —

ಬಡಬಾನಲಂಗೆ ಸಾಸಿ।
ರ್ಮಡಿಯೆನಿಸಿದ ರೌದ್ರಕೋಪಮಂ ತಳೆದೆನ್ನೊಳ್॥

---

ಪಾ—1. ಸರ್ವತ್ವಾಘಲಂ. ಖ ॥ ; ಸತ್ವಾದಿವಿಳಂ. ಗ ॥ 2. ಪ್ಡಾವು. ಕ ॥
3. ತ್ರಾಣಸಿಂಧು. ಕ ॥ ; ತ್ರಾಯಿಸಿಂಧು. ಗ ॥
4. ರೋಧ್ಯಾಸಿತ. ಕ ॥ ; ರೋಧ್ಯಾಯತ. ಗ ॥ ರಾದ್ಯಾಯತ. ಖ ॥
5. ಮಕರಕ್ರೋ. ಖ ॥ ಗ ॥ 6. ಮಪ್ಪೆಡೆಯಂ. ಗ ॥

ತೊಡರ್ದು*ಮಕಾರಣವೈರಮು।
ನೊಡರ಼್್ಚಿಯುಂ ಕಡಲದಾರ ಮುಱಿಯುಂ ಪುಗುವಂ॥ 223

ಎನೆ; ಮಧುರಾಲಾಪೆ—ನಿನಗಿನಿತುವರಮನರ್ಥಮನಾಕೃಷ್ಟಿಗೆಯ್ದು ಕೊಳ್ವ ಕಾರಣಮೇನೆನುತ್ತುಂ,

ಹಿತರುಂ ಸ್ನೇಹಿತರುಂ ಪಂ। [೫
ಡಿತರುಮೆನಿಪ್ಪವರ ವಚನಮುಂ ಕೇಳದ ದು॥
ರ್ಮತಿಯುಪ್ಪವಂಗವಶ್ಯಂ।
ಸತತಂ ಕೇಡಾಗದಿರದು ಕಜ್ಜದ ಕಡೆಯೊಳ್॥ 224

ಎಂಬ ನೀತಿಗಳೊಳವು. ಎನ್ನ ಮಾತಂ ಕೇಳದೆ ಕಲಹಕ್ಕೆ ಕಚ್ಚೆಯಂ ಕಟ್ಟುವ ನಿನಗೆ ಕಚ್ಛಪಕಥೆಯಾಗದೆ ಪೋಗದೆನೆ—ಚಂಡಪರಾಕ್ರಮನದೆಂತೆನೆ—ಮಧುರಾಲಾಪೆ ಪೇೞ್ಗುಂ:— [೧೧

## ೨೦. ಕಚ್ಛಪಕಥೆ.

ಒಂದು ಸರೋವರದೊಳ್ [1]ಸಂಕಟವಿಕಟಂಗಳೆಂಬೆರಡು ಹಂಸೆಗಳಿರ್ಪುವು. ಆಹಂಸೆಗಳ್ಗಂ ವಾಚಾಲನೆಂಬುದೊಂದಾವೆಗಂ ಪರಮಮಿತ್ರತ್ವಮಾಗಿ ಪಲಕಾಲಮಿರ್ಪುದುಮನಾವೃಷ್ಟಿಯಿಂದಾಕೊಳಂ ಬತ್ತುವುದುಂ; ಕಲಹಂಸೆಗಳ್ ಕಂಡು—ಎಮಗಿಲ್ಲಿರಲ್ಬಾರದು, ಮಾನಸಸರೋವರಕ್ಕೆ ಪೋ[2]ಪೆ[2]ವೆಂದಾಳೋಚಿಸುವುದುಂ; ಕಚ್ಛಪಂ ಕೇಳ್ದು—ನೀವಿಲ್ಲದಾನಿಲ್ಲಿ ನಿರ್ವಹಿಸುವೆನಲ್ಲೆನೆನ್ನುಮನೊಡಂಗೊಂಡು ಪೋಗಿಮೆನೆ; ಕಳಹಂಸೆಗಳಿಂತೆಂದುವು:—ನೀನಪ್ಪೊಡೆ [3]ಬಹುಭಾಷಿ, ತುಂಬಿದ ಸಿದ್ದಿಗೆಯಂತೆ ರಥದ[3] ಗಾಲಿಯಂತೆ ಬಟ್ಟೆತ್ತಾಗಿರ್ಪೆ, ನಿನ್ನನೆಂತುಯ್ಯಲ್ಬರ್ಕುಮೆನೆ; ಕಚ್ಛಪಂ—ಅಪ್ಪೊಡೆಯಿಾಯೆಡೆಗೊಂದು ಕಥೆಯುಂಟದಂ ಕೇಳೊಮೆಂದಿಂತೆಂದಂ:—

ಪಾ—1. ಶ ಖ॥ ಗ॥ 2. ಪ. ಖ॥
3. ನೀರ್ತೀವಿದ ಶಕಟದಂತೆತಿಣ್ಣದೇಹಿಯುಮುದಬಿ, ಖ॥ ಶಕಟದ. ಗ॥

### ೨೧. ದೇವದತ್ತನ ಕಥೆ.

ಡಾವರಡಾಕಿನಿಶಾಕಿನಿ |
ದೇವತೆ ಕತೆವೇೞಲತಿಶಯಂ ಬಲ್ಲಳ್ ನಾ ||
ನಾವಿಧದ ಗಾಳು[1]ಗುಂಟಣಿ[1] |
ಭೂವಳಯದೊಳೆಸೆವ ಕನ್ನೆಯುಜ್ಜಯಿನಿಯೊಳಂ || 225 [೫

ಅಂತಾಕೆ ಸಾಸಿರ ಗದ್ಯಾಣಕ್ಕಲ್ಲದೆ ಕಥೆಯಂ ಪೇೞ್ವಳಲ್ಲೆಂಬುದಂ ದೇವ[2]ದತ್ತ[2]ನೆಂಬ ಬ್ರಾಹ್ಮಣಂ ಕೇಳ್ದು ಭ್ರಾಂತಿಗೊಂಡು ಸಾಸಿರ ಪೊನ್ನಂ ಕೊಂಡು ಮಹಾರಣ್ಯದೊಳಗೆ ಬರ್ಪನನೊರ್ವ ಬೊಮ್ಮರಕ್ಕಸಂ ಕಂಡು ಪಿಡಿದು ತಿನಲೆಂದು ತೆಗೆವುದುಂ; ದೇವದತ್ತಂ ತನ್ನ ಪೋಪ ವೃತ್ತಾಂತಮೆಲ್ಲಮಂ ರಕ್ಕಸಂಗಱಿಯೆ ಪೇೞ್ದು ಕಥೆಯ ಕಾರಣಮಾಗಿ ಪಿರಿದಾಯಾಸದಿಂದರ್ಥಮಂ ಪಡೆದು ಬಂದೆನೆನ್ನ ಮನದ[3]ಬೞ್ತಿ[3]ಯಂ ಕಿಡಿಸದೆ ಪಂಚರಾತ್ರಿಯನೆಡೆಗೊಟ್ಟೆಯಪ್ಪೊಡೈದೆ ಕಥೆಯುಂ ಕೇಳ್ದು ತಡೆಯದೆ ಬರ್ಪೆನಂತಪ್ಪುದಕ್ಕೆ ನನ್ನಂ ನಂಬುವುದೆನೆ; ರಕ್ಕಸನದರ್ಕೊಡಂಬಟ್ಟು ನೀಂ ಪಸಿದು ಬಂದೆಯೆಂದಾತಂಗೆ ತಕ್ಕನಿತಾಹಾರಮಂ ಕುಡೆಕೊಂಡು, ರಕ್ಕಸನಂ ಬೀೞ್ಕೊಂಡು ಪೋಗಿ ಭೋಂಕನೆ ಉಜ್ಜಯಿನಿಯನೆಯ್ದಿ, ಪೊೞಲಂ ಪೊಕ್ಕು ಡಾವರಡಾಕಿನಿಯ ಮನೆಯನಱಸುತ್ತುಂ ಬಂದು, [೧೩

ದೇವರ ದೊರೆಯ ವಿದಗ್ಧಜ|
ನಾವಳಿಯಱಿವ[4]ಸಲಗೆ[4]ಗಟ್ಟ ಮಾಱುತ್ತುಂ ನಾ ||
ನಾವಿಧದೊಳೆ ಪ್ರೇಕ್ಕಾಡುವ |
ಡಾವರಡಾಕಿನಿಯ ಮನೆಯ[5]ನಾಗಳ್ ಕಂಡಂ[5] || 226

ಪಾ—1. ಕೞಂತಣಿ. ಖ || 2. ತಮರ್ಗಂ. ಖ || 3. ಥ್ರ. ಖ || ಗ || 4. ನೆಗಲೆ. ಕ || 5. ನಾಗಳೆಪೊಕ್ಕಂ. ಕ ||

ಅಂತು ಕಂಡು ಮನೆಯೊಳಗಂ ಪೊಕ್ಕು ಡಾವರಡಾಕಿನಿಯ ಮುಂದೆ ಪೊನ್ನನಿಟ್ಟು ಪೊಡೆವಟ್ಟು—ತಾಯೆ, ಕಥೆಯುಂ ಪೇೞಿಮೆಂದೊಡಾಗಳ್ ಕುಂಟಣಿ ಕರವೊಳ್ಳಿತ್ತೆೀಕಚಿತ್ತದಿಂ ಕೇಳಿಮೆಂದಿಂತೆಂದಳ್:—ಒರ್ಮೆ ಕಂಡವರ್ ಮತ್ತೊರ್ಮೆ ಕಂಡೊಡೆ ನಂಟರ್, ಇದುವೆ ಪರಮಾರ್ಥಂ ಕಥೆಯೆನೆ; ದೇವದತ್ತಂ ವಿಸ್ಮಯಂಬಟ್ಟು ಕುಂಟಣಿಯುಂ ಬೀೞ್ಕೊಂಡು ಮತ್ತಂ ರಕ್ಕಸನಲ್ಲಿಗೆ ಬರ್ಪುದುಂ; ಆತನಿದಿರಂ ಬಂದೀಂ ಭಾವ! ಬಂದಿರ್ ಎಂದು, ಬೞಿಕ್ಕೆ ನಿಮಗೆ ಪೇೞ್ದ ಕಥೆಯುಂ ಪೇೞಿಮೆನೆ; ದೇವದತ್ತನಿಂತೆಂಬಂ:—

ವರಗುಣಗಣಯುತರೆನಿಪರ್ ।
ಧರೆಯೊಳಗೋರೊರ್ಮೆ ಕಂಡು ಮತ್ತಂ ಕಂಡಂ॥
ದಿರಡವರೆ ನಂಟರೆಂಬುದು ।
ಪರಮಾರ್ಥಂ ಕಥೆಯಿದೆಂದು ಕುಂಟಣಿ ಪೇೞ್ದಳ್ ॥ 227

ಎಂದೊಡಾಕಥೆಯುಂ ರಕ್ಕಸಂ ಕೇಳ್ದು ಬೆಕ್ಕಸಂಬಟ್ಟು—ನಿನ್ನನಾಂ ಮುಂ ಕಂಡನಿತೆಯುಲ್ತು, ನಿನಗಾಹಾರಮನಿಕ್ಕಿದೆನದಱಿಂ ನೀನೆನಗೆ ನಂಟನೆ ಎಂದು ರಕ್ಕಸಂ ಮೊದಲಾಗಿ ರಕ್ಷಿಸಿದಂ.

(೨೦ ನೆಯ ಕಥೆಯ ಶೇಷ.)

ಎಂದೊಡೆ ನೀವೆನ್ನನೆಂತುಪೇಕ್ಷಿಸಿ ಪೋದಪಿರೆನೆ; ಕಳಹಂಸೆಗಳಿಂತೆಂದುವು:—ನೀನೆಂದಂತೆ,

ವಾಕ್ಯಂ॥ "ಸತಾಂ ಸಾಪ್ತಪದಂ ಮೈತ್ರಂ॥" ೧೧೫

ಎಂ[1]ಬುಕ್ತಿ[1]ಯುಂಟು. ನಿನ್ನನೊಂದುಪಾಯದೊಳುಯ್ದಪ್ಪೆ[2]ವು. ಆ ವೇಳೆಯೊ[2]ಳಾರೇನನೆಂದೊಡಂ ನೀನೇನಂ ಕಂಡೊಡಂ ನುಡಿಯಲಾ

ಟ—೧೧೫. ತಮ್ಮೊಡನೆ ಏೞಡಿವರಂ ನಡೆದವನೇ ಸಜ್ಜನರ್ಗೆ ಕೆಳೆಯೆನಿಪನು.

ಪಾ—1. ಬ ಯುಕ್ತಿ.ಖ ॥ ಗ ॥ 2. ಪೆವುಮ್ಮಯ್ದೆಡೆಯೊ. ಖ ॥ ಗ ॥

ಗದು. ಎಮ್ಮ ಮಾತಂ ಮಿಕ್ಕು ನುಡಿದೆಯಾದೊಡೆ ಸೊಸೆಯ ಮಾತಂ ಕೇಳದತ್ತೆಯ ಕಥೆಯಂತಕ್ಕುಮೆನೆ—ಕಚ್ಛಪನದೆಂತೆನೆ—ಕಳಹಂಸೆಗಳ್ ಪೇೞ್ಗುಂ:—

೨೨. ಸೊಸೆಯ ಮಾತಂ ಕೇಳದತ್ತೆಯ ಕಥೆ. [೪

[1]ಸಾಲ[1]ಗ್ರಾಮಮೆಂಬ ಮಹಾಗ್ರಹಾರದೊಳ್ ಗ್ರಾಮಾಧಿಪತಿಯ ಸತಿ ಕುಮತಿಯೆಂಬಳಾಕೆಯೊಂದು ದಿವಸಂ ತನ್ನ ಸೊಸೆಯಪ್ಪ ಸೌಮಿತ್ರಿಗಿಂತೆಂದಳ್:— ಆಂ ನೆರೆಯೂರ್ಗೆ ಪೋಗಿ ಬಂದೆಪೆಂ, ನೀಂ ಮನೆಯಂ ಸುಯ್ಧಾನಂಮಾಡಿಕೊಂಡಿರೆಂದು ಪೇೞ್ದು ಪೋದಳ್. ಅನ್ನೆಗಂ ಸೌಮಿತ್ರಿಯಲ್ಲಿಗೊರ್ವ ಪಾರ್ವಂ ಬಂದು—ಮಗಳೆ! ನೀನಿಂದು ಪನ್ನಿರ್ವರ್ ಪಾರ್ವರ್ಗೆ ಸಾರಮಪ್ಪ ಕ್ಷೀರಭೋಜನಮಂ ಮಾಡಿಸಿದೆಯಪ್ಪೊಡೆ ನಿನಗೆ ಕನಕಲಾಭಮುಂ ಪುತ್ರಲಾಭಮುಂ ಮನೋರಥಸಿದ್ಧಿಯುಮಕ್ಕುಮೆನೆ; ಸೌಮಿತ್ರಿ ಸುಮತಿಯಪ್ಪುದಱಿಂ ತನ್ನ ಮನದೊಳಿಂತೆಂದಳ್:— [೧೩

ಶ್ಲೋ || "ಬ್ರಾಹ್ಮಣಾನ್ನಾವಮನ್ಯೇತ ನಾವಮನ್ಯೇತ ದೇವತಾಃ |
ಸರ್ವದೇವಮಯೋ ವಿಪ್ರೋ ನ ತದ್ವಚನಮನ್ಯಥಾ ||" ೧೧೬

[ಟೀಕು—ಬ್ರಾಹ್ಮಣರನೂ ದೇವರನೂ ಅವಜ್ಞೆಯಂ ಮಾಡಲಾಗದು. ಸರ್ವದೇವತಾಸ್ವರೂಪರಹ ಬ್ರಾಹ್ಮಣರುಗಳ ವಾಕ್ಯವೆಂದುಂ ಹುಸಿಯಿಲ್ಲ]

ಎಂಬುದು ಶಾಸ್ತ್ರಾರ್ಥಮುಂಟು; ಬ್ರಾಹ್ಮಣವಚನಂ ನಿಚ್ಚಯಮಕ್ಕುಮಿದಂ ನೋೞ್ಪಿನೆಂದು

ವಸುಧಾದೇವ[2]ರನಾಮುಂ[2] | [೨೦
ತ್ರಿಸಿ ಪಿರಿದುಂ ಭಕ್ತಿಪೂರ್ವಕಂ ವಿಧಿಯಿಂ ಪೂ ||
ಜಿಸಿ ಮುದ[3]ದೆ ಮಾ[3]ಡಿದಳ್ ಪಾ |
ಯಸಮಂ ನವಘೃತಸಮನ್ವಿತಂ [4]ಸಿತ[4]ಸಹಿತಂ || 228

ಟಿ—೮. ಸುಯ್ಧಾನಂಮಾಡಿ—ಎಚ್ಚರಿಕೆಯಿಂದ ರಕ್ಷಿಸಿಕೊಂಡು.

ಪಾ—1, ಶಾಲಿ. ಗ || ;ಸಾಲಿ. ಖ || 2. ರನುಮಂಸುಂ. ಗ || 3. ದಿನೂ. ಖ || 4. ವಿಧಿ. ಕ ||

ಅಂತು ಪೂರ್ವ[1]ಗಾಡಿ[1] ಪರಕೆಯನಾಂತು ಸೌಮಿತ್ರಿ ಸಂತೋಷದಿನಿರ್ಪುದುಂ; ಕಿಱಿದಾನುಂ ಬೇಗಕ್ಕೆಯಾಸೌಮಿತ್ರಿಯತ್ತೆ ಕುಮತಿಯೆಂಬಳ್ ಬಂದೆಲ್ಲಮುಂ ಕಂಡೆಲೆ ತೊತ್ತೆ! ನಿನಗಿನಿತು ಸಾಮರ್ಥ್ಯವನಾರ್ ಮಾಡಿದರ್, ನೀನಿನಿತು ಪೊೞ್ತು ಮನೆಯೊಳಗಾನಿಲ್ಲದನಿತೞೊಳೆ ಎಡೆವೊತ್ತುವೊಲೆಯುಂ ಕಲೆ ಮುಟ್ಟಲ್ಪೆತ್ತಂತೆ ಮನೆಯೊಳುಳ್ಳುದೆಲ್ಲಮುಂ ಕಾಕಭೋಜನಂಮಾಡಿ ಕಿಡಿಸಿದೆಯೆಂದು ಸೊಸೆಯಂ ನೋಯೆನುಡಿದು ಜಡಿದು ಮನೆಯಂ ಪೊಱಮಡಿಸೆ ಕಟ್ಟಿಲೆಯೊಳಾಕೆ ಭಯಾಕುಳೆಯಾಗಿ ದೂರಂ ಪೋಗಲಣ್ಮದೂರ ಮುಂದಿರ್ದ ಪುಣಿಸೆಯ ಮರದ ಪಿರಿದಪ್ಪ ಪೊಟಿಲೊಳಡಂಗಿರ್ದಳ್. ಅನ್ನೆಗಮಲ್ಲಿಗೆಣ್ಬರ್ ಮಾಯಾರೂಪಿಗಳಪ್ಪ ಶಾಕಿನಿಯರ್ ಬಂದು ಮರನನೇಱಿರ್ದು ಸುವರ್ಣದ್ವೀಪಕ್ಕೆ ಪೋಗೆಂದಭಿಮಂತ್ರಿಸುವುದುಮದು ಮನದಿಂ ಮುನ್ನಮೆಯ್ದಲೊಡಂ ರಕ್ಕಸಿಯರ್ ಮಾಂಸಭಕ್ಷಣಕ್ಕೆ ಪೋಪುದುಂ; ದೆಸೆಯಂ ನೋಡಿ ಸೌಮಿತ್ರಿ ಧರ್ಮಮೇ ಗತಿಯೆಂದು ಪೊಱಮಟ್ಟು ದೆಸೆಯಂ ನೋಡುವಾಗಳ್,

ಇಲಿಯ ಬಿಲದ್ವಾರಂಗಳ ।
ಕೆಲದೊಳ್ ಕೆಂಪೆಸೆದು ಮಿಸುಪ ಕನಕದ ರಜಮಂ ॥ [೧೫
ಲಲಿತಾಂಗಿ ಕಂಡು ಕೊಂಡಾ ।
ಕುಲವಧು ವಿಪ್ರಪ್ರಸಾದಮಾಯ್ತೆಂದಾಗಳ್ ॥ 229

ಅಂತು ಪೊನ್ನಂ ಪೊೞೆಗಟ್ಟಿಕೊಂಡು ಮತ್ತಮಾಪುಣಿಸೆಯ ಮರದೊಳ್ ಪೊಕ್ಕಡಂಗಿರ್ಪುದುಂ; ಕಿಱಿದಾನುಂ ಬೇಗಕ್ಕೆ ರಕ್ಕಸಿಯರ್ ಬಂದಾಮರನನೇಱಿರ್ದಭಿಮಂತ್ರಿಸಲೊಡಂ, ಅದು ಪೞಿಯಂತೆ ಮುನ್ನಿನ ಸ್ಥಾನಕ್ಕೆ ಬಂದಿರೆ; ಶಾಕಿನಿಯರ್ ತಮ್ಮ ತಮ್ಮ ಮನೆಗಳ್ಗೆ ಪೋದರ್. ಇತ್ತಲ್ ಸೌಮಿತ್ರಿಯುಂ ತನ್ನ ಮನೆಗೆ ಬಂದು ಪೊನ್ನ ಪುಡಿಯ

ಟ—೨೦. ಪೞಿಯಂತೆ—ಹಿಂದೆ ಇದ್ದ ಹಾಗೆ.

ಪಾ—1. ರನೂಡಿ. ಖ ॥ ಗ ॥

ನತ್ತೆವಿರ ಮುಂದಿಟ್ಟು ಪೊಡೆಮಟ್ಟೊಡತ್ತೆವಿರ್ ಸಂತೋಷಂಬಟ್ಟು ಬೞಿಕೆ ತತ್ಪ್ರಪಂಚಮೆಲ್ಲಮಂ ಕೇಳ್ದು ಸೌಮಿತ್ರಿಗಿಂತೆಂದಳ್:—ಇಂದಾಂ ಪೋಗಿ ಸಂಪೂರ್ಣವಾಗಿ ಪೊನ್ನಂ ತಂದಪೆನೆಂದು ನೇಸಱ್ ಪಡಲೊಡಂ ಮರದ ಪೊೞಲಂ ಪುಗಲೆಂದು ಪೋಪಳ್ಗೆ ಸೌಮಿತ್ರಿಯಿಂತೆಂದಳ್:—ರಕ್ಕಸಿಯರುಕ್ಕುವ ಮನಮನಱಿಯಲ್ಬಾರದು, ಅತ್ತೆವಿರೇ! ನೀಂ [1]ಪೋದಲ್ಲದಿರೆವೆಂಬಿರಪ್ಪೊಡೆ[1] ಅವರೇನೆಂದೊಡಮೇಗೆಯ್ದೊಡಮುಸಿರದಿರಲಾರ್ಪಿರಪ್ಪೊಡೆ ಪೋಗಿಮಲ್ಲದಾಗಳ್ ಪೋಗಲ್ವೇಡೆಂದೊಡಾಪ್ರಚಂಡೆ ಇಂತೆಂದಳ್:—

ನೀನೆನಗೆ ಬುದ್ಧಿವೇೞಿದೊ ।
ಡಾನಱಿಯೆನೆ ವಾಮೆಯರ್ಕಳುಕ್ಕಿವಮಂ ನೀ ॥
ನೇಸುಮನೆನ್ನದಿರೆಂದಪ ।
ಮಾನಿಸಿ ಪೊೞಮಟ್ಟಳತ್ತೆ ಮನೆಯಿಂದಾಗಳ್ ॥ 230

ಅಂತಾಕೆ ಸೊಸೆ ಬಾರಿಸೆ ಮಾಣದೈತಂದು ಚೌವಟದೊಳಿರ್ದ ಮರನನೆಯ್ದಿ,

ಬಗೆದೊದವಿದ ಕಟ್ಟಿಲೆಯೊಳ್ ।
ಮಿಗೆ ಕುಮತಿಗೆ ಪೊನ್ನ ಮೋಹವಾಗಲ್ ಸಾವಂ ॥
ಬಗೆಯದೆ ಮಿಟ್ಟುವ ಬಾಯುಂ ।
ಪುಗುವಂತಾಮರದ ಪೊೞಲೊ[2]ಳೆಂತುಂ[2] ಪೊಕ್ಕಳ್ ॥ 231

ಪೊನ್ನೆಂದೊಡೆ ಸುವ್ರತಸಂ ।
ಪನ್ನರ [3]ಮನಮುಂ ಮರಂಗಳುಂ ಸೊಡರ್ಗು*ಡಿಯುಂ ॥
ತಾ[3]ನ್ನಿರುತಮೆಱುಗುಗುಂ ಪೇ ।
ೞಿನ್ನುೞಿದೞಿಮನದ ಮನುಜರೆೞಿಗದರೊಳರೇ ॥ 232

ಪಾ—1. ಪೋದಿರಪ್ಪೊಡೆ. ಕ ॥ 2. ಳಂತಾಂ, ಕ ॥ ಗ ॥
3. ಮಮರ್ತ್ಯರುಂ ತಿಶುಗಳ್ ಮೋಹ, ಕ ॥ ಗ ॥

ಅನ್ನೆಗಮರ್ಧರಾತ್ರಿಯಾಗಲೊಡಂ ಶಾಕಿನಿಯರ್ ಬಂದು ಮರನನ ಡರ್ದಿಂದುಂ ನಾವು ಕಡಾರದ್ವೀಪಕ್ಕೆ ಪೋಪಮೆಂದಾಳೋಚಿಸುವುದುಂ; ಕುಮತಿ ಕೇಳ್ದನ್ನುಸಿರದಿರ್ದೊಡೆನ್ನ ಬಗೆ ಕೂಡದು ತನ್ನಪ್ಪುದಕ್ಕೆಂದು ಶಾಕಿನಿಯರ್ಗಿಂತೆಂದಳ್:— ಕಡಾರದ್ವೀಪದ ಮಾನಸರ ಮಾಂಸಂ ಕ್ಷಾರಮುಂ ನಿಸ್ಸಾರಮುಂ, ಅಲ್ಲಿಗೆ ಪೋಗಲ್ವೇಡ; ಸುವರ್ಣದ್ವೀಪದ ಮಾನಸರ ಮಾಂಸಮಮೃತೋಪಮಾನಮಲ್ಲಿಗೆ ಪೋಗಿಮೆಂದು ಪೇೞಲೊಡಮದಂ ಕೇಳ್ದು ರಕ್ಕಸಿಯರ್—ಅಕ್ಕಟ! ಸಗ್ಗಮಿದಿರಂ ಬಂದುದು; ಎಮಗೆ "ಅಱಿಸುವ ಬಳ್ಳಿ ಕಾಲ್ತೊಡರ್ದುದು" ಎಂಬ ನಾಣ್ನುಡಿ ಪ್ರತ್ಯಕ್ಷಮಾದುದೆಂದು ರಾಗಿಸಿ ಬಿಲದೊಳಗಿರ್ದ ಇಲಿಯಂ ತೆಗೆವಂತೆ ಪೊೞಲೊಳಗಿರ್ದ ಕುಮತಿಯಂ ಕಾಲಂ ಪಿಡಿದು ತೆಗೆದು ಇರ್ಬಗಿಮಾಡಿ ಕೊಂದು ತಿಂದರ್. [೧೧

(೨೦ ನೆಯ ಕಥೆಯ ಶೇಷ.)

ಅದಱಿಂದಿದನಱಿದೇನುಮಂ ನುಡಿಯದೆ ಬರ್ಪುದೆಂದು ಕಳಹಂಸೆಗಳ್ ಕಚ್ಛಪಂಗೆ ಬುದ್ಧಿವೇೞ್ದೊಡಂತೆಗೆಯ್ವೆನೆಂಬುದುಂ; ಕಲಹಂಸೆಗಳ್ ಬಲ್ಲಿತಪ್ಪುದೊಂದು ದಕ್ಕಂ ತಂದದಱೆರಡು [1]ಕಡೆಯುಮಂ ತಾವಡಸಿ ಕರ್ಚಿ[1] ನಡುವೆಯಾಮೆಯುಂ ಕರ್ಚಿಸಿ ಕೊಂಡನೇಕಗ್ರಾಮ ನಗರ ಖೇಟ ಖರ್ವಟ ಮಡಂಬ ಪತ್ತನ ದ್ರೋಣಾಮುಖಂಗಳಂ [2]ಜನ[2] ಪದಂಗಳಂ ಕಳಿದು ಬರುತ್ತುಂ ಪರಶುರಾಮನ ಬಾಣಘಾತದಿಂ ಭಿನ್ನಮಾದ ಕ್ರೌಂಚಾಚಲದ [3]ಶಿಖರ[3] ಪ್ರದೇಶಮಂ ನೋಡುತ್ತುಮಳಕಾಪುರದ ಪೊಱವೊೞಲನೆಯ್ದುವುದುಮಲ್ಲಿಯ ಜನಪದಂಗಳ್ ಕಂಡು—[4]ಇದೊಂದು ಭಂಡಿಯ ಗಾಲಿಯಂತುಟ[4] ನೆರಡುಕಲಹಂಸೆಗಳ್ ಕರ್ಚಿಕೊಂಡು ಪೋದಪ್ಪುವಿದೊಂದಾಶ್ಚರ್ಯಮೆಂದು ಭೋರೆಂದಾ

ಪಾ—1. ಕೆಲವೆರಡು ಹಂಸೆಗಳ್ ಕಚ್ಚಿಕೊಂಡು. ಗ ‖ 2. ಪಟ್ಟಣಂಗಳಂ. ಜನ. ಕ ‖ 3. ಕುಜ. ಖ ‖ 4. ಭಂಡಿಯಂತುಟ. ಗ ‖ ಖ ‖

ಱುತ್ತುಂ ಬರ್ಪ ರಭಸಮಂ ಕೂರ್ಮಂ ಕೇಳ್ದೀಪಾಪಕರ್ಮರೆಮ್ಮಂ ವಿಚಾರಿಸುವುದು ತಮಗಾವ ಕಾರ್ಯಮೆಂದು ನುಡಿಯಲ್ ಬಗೆದು ಬಾಯಂ ತೆಗೆವುದುಂ; ಅಚ್ಚು ಮುಱಿದ ಭಂಡಿಯಂತೆ ನುಚ್ಚುನುಱಿಯಾಗೆ ಬಿರ್ದುದಂ ಮಾಂಸಾಹಾರಿಗಳ್ ಕಂಡು ಕೊರಪುಳ್ಳಿಯೊಳ್ ಮೋದಿ ಕೊಂದರ್. ಅದಱಿಂ, [೯

ಶ್ಲೋ|| "ಸ್ನಿಗ್ಧಾನಾಂ ಹಿತಕರ್ತೄಣಾಂ ಯೋ ವಾಕ್ಯಂ ನಾಭಿನಂದತಿ |
ಸ ಕೂರ್ಮಇವ ದುರ್ಬುದ್ಧಿಃ ಕಾಷ್ಠಾದ್ಭ್ರಷ್ಟೋ ವಿನಶ್ಯತಿ ||" ೧೧೭

[ಟೀಕು—ಹಿತಮಂ ಮಾಡುವ ಸ್ನೇಹಿತರ ಮಾತನಾವನೊರ್ವಂ ಕೇಳದೆ ಇರ್ಪನಾತಂ ಕಿಡುವಂ; ಅದು ಹೇಗೆಂಬೊಡೆ—ಕಾಷ್ಠಮಂ ಬಿಟ್ಟು ಬಿರ್ದು ಸತ್ತ ಕೂರ್ಮನಹಗ]

(೧೯ ನೆಯ ಕಥೆಯ ಶೇಷ.) [೧೦

ಎಂಬೀಕಥೆಯಂ ಕೇಳ್ದು ಚಂಡಪರಾಕ್ರಮನಿಂತೆಂದಂ:—ತತ್ತಿಗಳಂ ನೀಂ ಪೆತ್ತಂದು ಚಿಂತಿಸಿಕೊಳ್ವಂ, ಇನ್ನಪ್ಪ ಕಜ್ಜಕ್ಕೆ ಮುನ್ನಮೆ ಮಱುಗುವುದಿದಾವ ಕಾರಣಮೆನೆ; ಮಧುರಾಲಾಪೆ ಮತ್ತಿಂತೆಂದಳ್:—ನಿನಗಿನಿತಪ್ಪ ದುರ್ಬುದ್ಧಿ ಪುಟ್ಟಿತ್ತಾದೊಡಂ ಯದ್ಭವಿಷ್ಯನೆಂಬ ಮತ್ಸ್ಯದ ಕಥೆಯಂ ಕೇಳೆಂದು ಪೇೞ್ದುದು. ಅದೆಂತೆನೆ:— [೧೫

## ೨೭. ಯದ್ಭವಿಷ್ಯನೆಂಬ ಮತ್ಸ್ಯದ ಕಥೆ.

ಮಹಾನದಿಯ ಮಡುವಿನೊಳನಾಗತಮತಿಯುಮುತ್ಪನ್ನಮತಿಯುಂ ಯದ್ಭವಿಷ್ಯನುಮೆಂಬ ಪೆಸರ ಮೂಱು ಮತ್ಸ್ಯಂಗಳ್ ಮತ್ಸ್ಯಪ್ರಧಾನರಾಗಿರ್ಪುವು. ಅಲ್ಲಿಗೊಂದು ದಿವಸಂ ಜಾಲಗಾಱರ್ ಬಂದು—ಈಮಡುವಿನೊಳ್ ಪಲವು ಮತ್ಸ್ಯಂಗಳೊಳವಿಲ್ಲಿಗೆ ನಾಳೆ ಬಂದು ಜಾಲಮಂ ಬೀಸಿ ಮತ್ಸ್ಯಂಗಳಂ ಪಿಡಿವಮೆಂದು ನುಡಿವ ಮಾತನನಾಗತಮತಿ ಕೇಳ್ದು ಮತ್ತಿನ ಮತ್ಸ್ಯದ್ವಯದಲ್ಲಿಗೆ ಬಂದು ತತ್ಪ್ರಪಂಚಮನೆಲ್ಲಮಂ ಪೇೞ್ದು ನಮಗಿಲ್ಲಿರಲ್ಬಾರದು, ಪೆಱತೊಂದು ಮಡುವಿಗೆ ಪೋಪಂ ಬನ್ನಿಮೆಂದೊಡುತ್ಪನ್ನಮತಿ—ಮುನ್ನಮೆ ಪೋಗದೊಡೇಂ, ಅವರ್ಬಂದಾಗಳೆ

ಬಗೆದು ಕೊಳ್[1]ಬ್ರರ್ಕು[1]ಮೆಂಬುದುಂ; ಯದ್ಭವಿಷ್ಯಂ—ಇಂತುಟಪ್ಪೆಡೆಯನೆಲ್ಲಿಯುಂ ಪಡೆಯಲ್ಬಾರದು, ತನ್ನಪುದಕ್ಕೆ, ಇಲ್ಲಿಂದಂ ಪೋಗಲ್ವೇಡೆಂದೊಡೆ; ಅವರನೊಡಂಬಡಿಸಲಾಱದನಾಗತಮತಿ ತನ್ನ ಸಮೂಹಂಬೆರಸು ಪೆಱತೊಂದೆಡೆಗೆ ಪೋಪುದುಂ; ಮಱುದೆವಸಮಾಜಾಲಗಾಱರ್ ಬಂದು ಜಾಲಮಂ ಬೀಸುವುದುಂ; ಆಬಲೆಯೊಳುತ್ಪನ್ನಮತಿ ತೊಡರ್ದು ತನ್ನ ಪೆಸರಂ ನೆನೆದುಸಿರನೊಳತೆಗೆದಸುಪೋದಂತೆ ಮಿಸುಕದಿರ್ಪುದುಂ; ಮೀಂ[2]ಗು[2]ಲಿಗರ್ ಬಲೆಯುಂ ತೆಗೆದು ನೋಡಿ ಮುನ್ನಮೆ ಸತ್ತುಂತಿರ್ದುತ್ಪನ್ನಮತಿಯುಂ ಕಂಡು ಬಲೆಯಿಂ ತೆಗೆದು ನೆಲದೊಳಿರಿಸುವುದುಮದು [3]ಪೊಳೆದು[3] ಜಳದೊಳ್ ಮುೞುಂಗಿ ಪೋದುದು. ಯದ್ಭವಿಷ್ಯಂ ಮತ್ತೊಂದು ಬಲೆಯೊಳ್ ಸಿಲ್ಕಿ ತಲೆಯುಂ ಬಡಿಯುತ್ತಿರ್ದುದಂ ಮೀಂಗುಲಿಗಂ ಕಂಡು ನೆಲದೊಳಪ್ಪಳಿಸಿ ಕೊಂದಂ. [೧೧

ಅದಱಿಂ,

ಶ್ಲೋ || "ಅನಾಗತವಿಧಾತಾ ಚ ಪ್ರತ್ಯುತ್ಪನ್ನಮತಿಸ್ತಥಾ ।
ದ್ವಾವಿಮೌ ಸುಖಮೇಧೇತೇ ಯದ್ಭವಿಷ್ಯೋ ವಿನಶ್ಯತಿ ||" ೧೧೪

[ಟೀಕು—ಮುಂದೆ ಬಹುದನಱಿವವನುಂ ಬಂದುದರ್ಕೆ ತಕ್ಕುದಂ ನಿಶ್ಚೈಸಬಲ್ಲವನುಂ ಈಯಿರ್ವರೇ ಸುಖಂಬಡುವರ್; ಬಂದುದಂ ಬಗೆಯೆಂದಿರ್ದವಂ ಕಿಡುವಂ.]

(೧೯ ನೆಯ ಕಥೆಯ ಶೇಷ.)

[4]ಎಂಬೀಕಥೆಯಂತೆನ್ನ ಮಾತಂ ಕೇಳದೆ ನೀನುಂ ಯದ್ಭವಿಷ್ಯನಾದೆ[4] ಎಂದು ನುಡಿಯೆ ಚಂಡಪರಾಕ್ರಮನಿಂತೆಂದಂ:—

ಪೆಂಡಿರ ಮಾತಂ ಸಲೆ ಕೈ । [೨೦
ಕೊಂಡವರಭಿಮತದೆ ನಡೆವನಪ್ಪೊಡೆ ಗಂಡಂ ||
ಗಂಡನಣಮಾಗಲಱಿಯಂ ।
ಭಂಡಂ ಮೇಣ್ ಷಂಡನಕ್ಕುಮಾ[5]ಚಂಡಾಲಂ[5] || 233

ಪಾ—1. ಲಕ್ಕು. ಗ || 2. ಬು. ಕ || ಗ || 3. ಪೊಱಿಯೆ. ಗ ||
4. ಗ || ಪ್ರತಿಯಲ್ಲಿಲ್ಲ. 5. ನರಮನುಜಂ. ಕ ||

ಅದಱಿನಿನ್ನಾವುದುಮಂ ನಾನೆ ಬಲ್ಲೆಂ, ನೀನುಸಿರದಿರೆಂದು ವಲ್ಲಭೆಯುಂ ಕಲ್ಲ ಸರದಿಂ ನುಡಿದು ಮಾಣಿಸುವುದುಂ; ಮಧುರಾಲಾಪೆ ಮಱುದಿವಸಂ ತತ್ತಿಗಳಂ ಪೆತ್ತು ಬಱಿಕ್ಕೆ ನಿಜಪ್ರಾಣೇಶ್ವರನುಂ ತಾನುಂ ಕುಡುಕಂ ಕೊಳಲಡವಿಗೆ ಪೋಪುದುಮನ್ನೆಗಮಾಸಮುದ್ರಂ ವೇಲೆಯೊತ್ತಿ ತತ್ತಿಗಳಂ ತನ್ನ ತೆರೆಗೈಗಳಿಂ ಮೆಲ್ಲನೆ ತೆಗೆದು ತಂದಾಗಳ್ ಮತ್ತೊಂದುತ್ತಮಮಪ್ಪೆಡೆಗೆ ಸಾರ್ಚಲನ್ನೆಗಂ ಟಿಟ್ಟಿಭಮಿಥುನಂ ಕಿಱಿದಾನುಂ ಬೇಗದಿಂ ಬಂದು ತಮ್ಮಿರ್ಕೆಗೆ ಪೋಗಲಲ್ಲಿ ತತ್ತಿಗಳಂ ಕಾಣದೆ ಬೆಕ್ಕಸಂಬಟ್ಟು ಮಱುಗಿ ಮಧುರಾಲಾಪೆ ವಿಪ್ರಲಾಪಂಗೆಯ್ಯೆ; ಚಂಡಪರಾಕ್ರಮನಿಂತೆಂದಂ: —

ಚಂಡಪರಾಕ್ರಮವೆಸರಂ ।
ಕೊಂಡಿರ್ದೆನ್ನಳವನಱಿದುಮಱಿಯದೆ ವೈರಂ ॥
ಗೊಂಡೀಕಡಲಂ ತವೆ ಪೀ ।
ರ್ದಂಡಂಗಳನಱಿಸಿ ತಂದು ನಿನಗಾನೀವೆಂ ॥ 234

ಬಗೆಯದಿ[1]ರಾ[1] ನಿನ್ನಯ ತ ।
ತ್ತಿಗಳಂ ಸಾಗರಮ[2]ನೊ[2]ತ್ತಿ ತಂದಾನೀವೆಂ ॥
ಪಗೆಗೊಂಡು ಕುಡದೆ [3]ತಡೆದಂ ।
ದ[3]ಗಸ್ತ್ಯನುಱಿ[3] ಪೀರ್ದ ತೆಱದೆ ಕಡಲಂ ಪೀರ್ವೆಂ ॥ 235

ಎಂದು ಮಾಣದೆ ಬಕಕಾಕಕೋಕಿಲಶುಕಚಕ್ರವಾಕಚಕೋರಕರ್ಕರಶ್ಯೇನಕಪೋತಹಂಸಕಾರಂಡಭೇರುಂಡಾದಿಸಮಸ್ತವಿಹಂಗಮಜಾತಿಗಳೆಲ್ಲಮಂ ನೆರಪಿ ತನ್ನ ತತ್ತಿಗಳಂ ಸಮುದ್ರ[4]ನೆತ್ತಿಕೊಂಡುಯ್ದನೆಂ[4]ದು ಪುಯ್ಯಲಿಡುವುದುಂ; ಪಕ್ಷಿಗಣಂಗಳದನುಪೇಕ್ಷಿಸಲಾಗದು, ಎಮಗೆ ಕುಲಸ್ವಾಮಿಯಪ್ಪ ಗರುಡಂಗಱಿಪಲ್ವೇಳ್ಕುಮೆಂದೆಲ್ಲಮೊಂದಾಗಿ ಪೋಗಿ,

ಪಾ—1. ರೆಂ. ಕ ॥ ಖ ॥ 2. ನೆ. ಖ ॥ ಗ ॥
3. ಪೋದೊಡೆಯು. ಗ ॥ 4. ನೊತ್ತಿಕೊಂಡುದೆಂ. ಖ ॥

ಕನಕನಿಭಪ್ರಭಾಂಘ್ರಿಯುಗನಂ ತುಹಿನಾಚಲವರ್ಣಮಧ್ಯದೇ ।
ಹನನುದಿತಾರುಣಪ್ರತಿಮಕಂಠನನಂಜನಮೇಚಕೋರುಮೂ ॥
ರ್ಧನನತುಲಪ್ರತಾಪವಿಜಿತೋದ್ಧತವಿಶ್ವಮರುನ್ನಿಕಾಯನಂ ।
ವಿನಿಹತಕಾದ್ರವೇಯನನಜೇಯನನೂರ್ಜಿತವೈನತೇಯನಂ ॥ 236

ವ॥ ಅಂತು ಕಂಡು ಪೊಡೆಮಟ್ಟು ಸಮುದ್ರನ ದೆಸೆಯಿಂ ತಮಗಾದುಪದ್ರವಮನಱಿಪೆ; ತದುಪದ್ರವಪ್ರತೀಕಾರವಿಧಾನಸಮರ್ಥನಖಿಳಕಾದ್ರವೇಯವಿದ್ರಾವಣಂ ಸಕಲಶಕುನಿಗಣಸಮೇತಂ ಕ್ಷೀರಪಾರಾವಾರಾಭಿಮುಖನಾಗಿ ಭಾಸುರಸುರಾಸುರಶಿರೋಮಣಿಮರೀಚಿಮಾಲಾಲಂಕೃತಚಾರುಚರಣಾರವಿಂದನಂ ಲಕ್ಷ್ಮೀಕುಚಕುಂಭಕುಂಕುಮಪಂಕಾರುಣೀಭೂತವಿಶಾಲವಕ್ಷಸ್ಸ್ಥಳನಂ ಮಧುಮುಖ್ಯಾಸುರವಧೂಜನಾಕ್ರಂದನನಯನವಾರಿಧಾರಾಪೂರಪರಿಪಾತನಿರಾಕೃತಕಲುಷಶಿಖಿಶಿಖಾ[1]ಕಲಾಪ[1]ನಂ ಭೌಮಭಾವಮಾ[2]ಭರಣ[2]ಭಂಜನವಿಧಾನಸಮರ್ಥನಂ ಹಿರಣ್ಯಕಶಿಪುಮಹಾದಾನವವಕ್ಷಸ್ಸ್ಥಳಸ್ಥಿತವಜ್ರಾಯಿತನಖರಶಾಲಿಯುಂ ವಜ್ರಪಾಷಾಣವಿಷಮಿತಶಂಖಚಕ್ರಧರನಂ ಪಿತಾಮಹಾದಿಮುನಿಗಣಸ್ತೂಯಮಾನಶುಭಚರಿತನಂ ನಿಜಪ್ರತಾಪ[3]ಸಂಶೋಷಿತದನುಜ[3]ವೃಂದಲತಾ[4]ಕಂದನಂ[4] ಮುಕುಂದನಂ ಕಂಡು ಕೈಗಳಂ ಮುಗಿದು, [೧೯

[5](ಪದ್ದಳಿ)[5]

ಜಯ ದಿವಿಜಗಣಾರ್ಚಿತಚಾರುಚರಣ ।
ದುರಿತೋಗ್ರತಮಃಪಟಲೋಷ್ಣಕಿರಣ ॥೧॥
ತಾಪಿಂಛಸಮಚ್ಛವಿನೀಲವರ್ಣ । [೨೦
ವಿದ್ಯಾಧ[6]ರಕಾಂತಾಗೀತವರ್ಣ[6] ॥೨॥

ಪಾ—1. ಜ್ವಲ. ಕ ॥ 2. ರಮಣ. ಖ ॥ 3. ಸಂತೋಷಿತಬೃಂದಾರಕ. ಗ ॥ 4. ಕಂದಳನಂ. ಕ ॥ 5. ಪದ್ದಳಿ. ಕ ॥ 6. ರಾಂಗನಾಗೀತಾಕರ್ಣ. ಕ ॥

ರಾಮಾವದನಾಂಬುಜಮತ್ತಭೃಂಗ ।
ವರಕೌಸ್ತುಭಭೂಷಣಭೂಷಿತಾಂಗ ॥೩॥
ಮಧುಕೈಟಭಪಾದಪಘನಕುಠಾರ ।
ಲಕ್ಷ್ಮೀಕುಚಮಂಡನತಾರಹಾರ ॥೪॥
ನರಕಾಸುರಮದಕರಿಪಂಚವದನ ।
ಕುಸುಮಾಯುಧ[1] ಮಂಗಳ[1] ಜನ್ಮಸದನ ॥೫॥
ಕಂಸಾಸುರಹಂಸಪಯೋದಕಾಲ ।
[2]ಶಕಟಾಸುರಪ್ರಕಟವಿಲಯಕಾಲ[2] ॥೬॥
ಕೃತಬಾಣಭಯಂಕರದರ್ಪಭಂಗ ।
ಚಾಣೂರಸರೋರುಹ[3] ಮದ[3] ಮಾತಂಗ ॥೭॥
ನಖಭಿನ್ನಹಿರಣ್ಯಕಶಿಪುಶರೀರ ।
ಜಠರಾಂತರ್ವಿನಿಹಿತಭುವನಭಾರ ॥೮॥
ಖಳಧೇನುಕಕಾನನಕೃಷ್ಣಮಾರ್ಗ ।
ವಿತ್ರಸ್ತಸಮಸ್ತನಿಶಾ[4]ಟ[4]ವರ್ಗ ॥೯॥
ಕೋಪಾನಲಮಗ್ನಸುರಾರಿಶಲಭ ।
ಘನ[5]ಭ[5]ಕ್ತಿಸಮನ್ವಿತಯೋಗಿಸುಲಭ ॥೧೦॥
ಉತ್ಪಾಟಿತಕಾಳಿಯಭುಜಗದಂತ ।
ದಿತಿಜೋತ್ತಮಸಮದತನುಕೃತಾಂತ ॥೧೧॥
ಮಂದಾರರಜೋಂಚಿತಮಣಿಕಿರೀಟ ।
ಬಳಭೀಕರಮುಷ್ಟಿಕಕಾಳಕೂಟ ॥೧೨॥
ವರಶೌರ್ಯವಿನಿರ್ಜಿತಕಾರ್ತವೀರ್ಯ ।
ಚಲಿತೋನ್ನತಮಂದರಕುಧರಧೈರ್ಯ ॥೧೩॥

ಪಾ—1. ಖ ॥ ಗ ॥ ಪ್ರತಿಗಳಲ್ಲಿಲ್ಲ. 2. ಶಕಟಪ್ರಕಟಾಸುರವಿಲಯಶೀಲ. ಗ ॥
3. ಮತ್ತ. ಖ ॥ 4. ಚರ. ಕ ॥ 5. ಶ. ಕ ॥ ಗ ॥

ಸರ್ವೇಶ್ವರ ಸರ್ವಗ ದೇವದೇವ ।
ಸರ್ವಜ್ಞ ನಮಸ್ತೇ ವಾಸುದೇವ ||೧೪|| 237

ಎಂದು ದೇವದೇವನನನೇಕಪ್ರಕಾರದಿಂ ಸ್ತುತಿಸಿ ಸಾಷ್ಟಾಂಗವೆಱಗಿ ಪೊಡೆಮಟ್ಟು ಮುಂದೆ ನಿಂದ ಪತತ್ರಿಗೋತ್ರಾಧಿಪತಿಯ ಮೊಗಮಂ ದಾಮೋದರನಾದರಂಬೆರಸು ನೋಡಿ—ನೀನೆಂದಿನಂದಮಲ್ಲಿಂದು ನಿನ್ನ ಗೋತ್ರಸಮೇತಂ ಬಂದ ಕಾರಣಮಾವುದೆನೆ; ವಿನತಾನಂದನನಿಂತೆಂದು ಬಿನ್ನಪಂಗೆಯ್ದಂ:—ಈಟಿಟ್ಟಿಭನ ತತ್ತಿಗಳಂ ವಾರಿಧಿ ಮೇರೆದಪ್ಪಿ [1]ಕೊಂಡುಯ್ದೊಡೆ[1] ಪುಯ್ಯಲಿಡಲ್ಬಂದೆವೆಂಬುದುಂ; ಮುಕುಂದಂ ಮುಗುಳ್ನಗೆನಗುತ್ತುಂ—ಇದಾವ ಕಾರ್ಯಮೆಂದಿಂತಪಹಾಸ್ಯಂಗೆಯ್ಯೆ; ವಿನತಾನಂದನಂ ಮತ್ತಮಿಂತೆಂದು ಬಿನ್ನಪಂಗೆಯ್ದಂ:— [೧೦

ಶ್ಲೋ || “ಆಶಾಃ ಪೂರಯಿತುಂ ಗುಣಾನ್ ಪ್ರಕಟಿತುಂ ಮಾನೋನ್ನತಿಂ ರಕ್ಷಿತುಂ|
ಕಾರ್ಯಂ ಸಾಧಯಿತುಂ ಖಲಾನ್ [2]ಸ್ಖಲ[2]ಯಿತುಂ ಲಕ್ಷ್ಮೀಂ ಸಮಾಸೇವಿತುಂ||
ಸ್ವಪ್ರಾಣೈಃ ಪರಿಕಲ್ಪಿತಾಂಜಲಿಜಲೈಃ ವಿಕ್ರೀಯ ದೇಹಸ್ಥಿತಿಂ ।
ಸಂತೋ ಭೂಪತಿಮಾಶ್ರಯಂತಿ ನ ಪುನರ್ದೈನ್ಯಾಯ ದುಃಖಾಯ ಚ||” ೧೯

[ಟೀಕು—ಬಯಕೆಯಂ ತೀರ್ಚಲುಂ, ಗುಣವಂ ಪ್ರಕಟಿಸಲುಂ, ಅಭಿಮಾನದ ಪೆರ್ಚಂ ರಕ್ಷಿಸಲುಂ, ಕಾರ್ಯವಂ ಸಾಧಿಸಲುಂ, ದುರ್ಜನರಂ ಕೆಡಿಸಲುಂ, ಶ್ರೀಯಂ ಲೇಸಾಗಿ ಭೋಗಿಸಲುಂ, ತಮ್ಮ ಪ್ರಾಣವಂ ಧಾರೆಯನೆಱೆದು ದೇಹಸ್ಥಿತಿಯಂ ಮಾಱಿ ಸತ್ಪುರುಷರ್ ಅರಸನನಾಶ್ರಯಿಸಿರ್ಪರ್; ಅದಲ್ಲದೆ ದೈನ್ಯಕ್ಕಂ ದುಃಖಕ್ಕಂ ಆಶ್ರಯಿಸುವರಲ್ಲ.] [೧೯

ಎಂದು ನೊಂದು ನುಡಿದ ತಾರ್ಕ್ಷ್ಯನ ಮನಃಕ್ಷತಮನಧೋಕ್ಷಜನಱಿತು ವರುಣನಂ ನೆನೆಯಲೊಡಮಾತಂ ಬಂದು ಪೊಡೆಮಟ್ಟು—ಬೆಸನಾವುದೆಂದೊಡೀಪಕ್ಷಿಯ ತತ್ತಿಗಳಂ ಸಮುದ್ರಂ ತನ್ನ ಮೇರೆಯಂ

ಪಾ—1. ಕೊಂಡರೆ. ಖ ||   2. ಖಿಲ. ಖ ||

ವಿಾಱಿ [1]ಕೊಂಡು ಪೋದಂ: ಅವಂ[1] ಬೇಗಂ ತಂದೊಪ್ಪಿಸೆನಲೊಡಂ; ಮಹಾಪ್ರಸಾದವೆಂದು ತಂದಾತತ್ತಿಗಳಂ ಟಿಟ್ಟಿಭಮಿಥುನಕ್ಕೆ [2]ಕೊಟ್ಟಂ.[2]

ಆದಱಿಂ,

ಶ್ಲೋ || "ಶತ್ರೋರ್ಬಲಮವಿಜ್ಞಾಯ ವೈರಮಾಚರತೇ ತು ಯಃ |
ಸ ಪರಾಭವಮಾಪ್ನೋತಿ ಸಮುದ್ರ ಇವ ಟಿಟ್ಟಿಭಾತ್ ||" ೧೨೦ [೫

[ಟೀಕು—ಆವನಾನೊರ್ವಂ ಶತ್ರುವಿನ ಬಲವನಱಿಯದೆ ವಿರೋಧಂಗೊಂಬಂ, ಅವಂ [3]ಸೋಲವ[3]ನೈದುವಂ. ಅದೆಹಗೆಂದೊಡೆ—ಟಿಟ್ಟಿಭನಿಂ ಸಮುದ್ರನೆಂತಂತೆ]

ಎಂಬ ಶ್ಲೋಕಾರ್ಥಮುಂಟದಱಿಂ,

ವಾಕ್ಯಂ || "ಸಾಹಸ್ಯೇ ಖಲು ಶ್ರೀ[4]ರ್ವಸತಿ ||" ೧೨೧

ಎಂಬ ನಯಮಂ ಪಿಡಿದು ಸಾಹಸಂಗೆಯ್ವುದೆನೆ; ಸಂಜೀವಕನಿಂತೆಂದಂ:—

ವಾಕ್ಯಂ || "ಸಂದಿಗ್ಧೋ ವಿಜಯೋ ಯುಧಿ ||" ೧೨೨

ಎಂಬುದು; ಇನ್ನುಂ ಪಿಂಗಳಕನಲ್ಲಿಗೆ ಪೋಗಿ ನಿನ್ನಱಿವಂದದಿಂ ನುಡಿದೆನ್ನಂ ನೀನೊರ್ಮಿಂಗೆ ಕಾವುದೆನೆ; ದವನಕನಿಂತೆಂದಂ:—

ವಾಕ್ಯಂ || "ಅರ್ಥೀ ದೋಷಂ ನ ಪಶ್ಯತಿ ||" ೧೨೩ [೧೫

ಎಂಬುದು ತಪ್ಪದು. ಅದೆಂತೆನೆ:—

## ೨೪. ಅರ್ಥೀ ದೋಷಂ ನಪಶ್ಯತಿ.

ಬೊಮ್ಮದೇವನ ಮೊಮ್ಮಂ ಶ್ರುತಿವಿಹಿತಕರ್ಮಾನುಷ್ಠಾನನಿಷ್ಠನಪ್ಪ ರಾವಣಂ ಕಾಮಾತುರನಾಗಿ ರಾಮನಂ ವಂಚಿಸಿ ಭೂಮಿಜೆಯನುಯ್ಯೆ ತದ್ವಿಯೋಗವಿಹ್ವಲೀಭೂತಚಿತ್ತಂ ರಘುವಂಶಜಾತಂ ಸೇತುವಂ

ಟ—೧೨೧. ಸಾಹಸಂಗಳಿಂ ಸಿರಿ ನೆಲೆಗೊಳ್ಗುಂ.
೧೨೨. ಕಾಳೆಗದೊಳು ಗೆಲುವಿಂತೆಂದು ನಿರ್ಣಯಿಸಲರಿದು.
೧೨೩. ಪಿರಿದುಂ ಬಯಕೆಯನುಳ್ಳವಂ ಕೇಡಂ ನೋಡಂ.

ಪಾ—1. ಕೊಂದನವಂ. ಖ || 2. ಇತ್ತಂ. ಕ || ಗ ||
3. ಪೊಲವ. ಖ || 4. ರ್ವಸತಿ. ಖ ||

ಬಂಧನಂಗೆಯ್ದು ಮೇಲೆ ವರಲಿರ್ಪುದಂ ರಾವಣಂ ಕೇಳ್ದು ತತ್ಕಾರ್ಯ ಪರ್ಯಾಲೋಚನೆಯೊಳಿರ್ದಲ್ಲಿ, ವಿಭೀಷಣನಿಂತೆಂದಂ:—

ಶತಧೃತಿಪೌತ್ರನುಂ ಜಿತಜಗತ್ತ್ರಯವೀರನುಮಾಗಿ ನೀಂ ಮಹಾ ।
ಸತಿಗವನೀಜೆಗನ್ಯವಧುಗಾಟಿಸೆ ವಾಸವವಹ್ನಿಧರ್ಮನೈ ॥ [೪
ರ್ಋತಿವರುಣಾನಿಲಾರ್ಥಪಹರರ್ ನಗುವರ್ ಮುಳಿಗುಂ ಮುರಾರಿ ವಾ।
ಕ್ಪತಿ ಪಳಿಗುಂ ಮನೋಜರಿಪು ಪೇಸುಗುಮಗ್ಗದ ಕೀರ್ತಿ ಮಾಸುಗುಂ॥

ಎಂಬುದುಮದಲ್ಲದೆಯುಂ,

ವಾಕ್ಯಂ ॥ "ಪರದಾರಗಮನಮನ್ಯಾಯಃ ॥" ೧೨೪

ಎಂಬುದು ಶಾಸ್ತ್ರಾರ್ಥಮುಂಟದಱಿಂ ಸೀತೆಯಂ ರಾಮಂಗೊಪ್ಪಿಸುವುದೆ ನೀತಿಯುಂ ನಿರ್ವಾಹಮುಮೆಂದು [1]ಸತ್ಪುರುಷವಿಭೂಷಣನಪ್ಪ ವಿಭೀಷಣಂ[1] ಸುಭಾಷಿತಂಗಳಂ ನುಡಿಯೆ ತನಗಿಚ್ಛಾವಿಘಾತಿಯಂ ಮಾಡಿದನೆಂಬನಿತಱಿಂದೊಳಾದನುಜನನುಜನಂ ಮೊದಲಾಗಿ ಕೊಲಲ್ಬಗೆದಂ.

ಪಿಂಗಳಕನಪ್ಪೊಡೆ ಕೇವಲಂ ರಜೋಮೂರ್ತಿಯುಮತಿವರ್ತಿಯುಮಾಗಿರ್ಪನಂತುಮಲ್ಲದೆಯುಂ. [೧೪

ಶ್ಲೋ ॥ "ನ ವದೇತ್ಸ್ವಾಮಿನಿ ಕ್ರುದ್ಧೇ ಯುಕ್ತಮಪ್ಯುತ್ತರಂ ಬುಧಃ ।
ಜ್ವರಾದೌ ದುಗ್ಧಪಾನಂ ಹಿ ವಿಷಮಾಹುರ್ಮನೀಷಿಣಃ ॥" ೧೨೫

[ಟೀಕು—ಅರಸು ಕುಪಿತನಾದಲ್ಲಿ ಉಚಿತವಹ ಉತ್ತರವಾದೊಡಂ ಬಲ್ಲವರ್ ನುಡಿಯಲಾಗದು. ಜ್ವರದ ಮೊದಲಲ್ಲಿ ಹಾಲು ಕುಡಿದೊಡಂ ವಿಷವಹುದೆಂದು ಬುದ್ಧಿವಂತರ್ ಪೇಳ್ವರ್.] [೧೯

ಎಂಬ ನೀತಿವಾಕ್ಯಮುಂಟಪ್ಪುದಲ್ಲದೆ ಪಲವು ದಿವಸಮಾಹಾರಂಬಡೆಯದೆ ಕೆಂಗೋಲ್ಮಸಗಿದ ಸಿಂಹಕ್ಕೆ ಪೂಣಿಗತನದಿಂದೇನಾನುಮೊಂದಂ ನುಡಿದೆನಪ್ಪೊಡೆನ್ನನೆ ಮುನ್ನಮಾಪೋಶನಂಗೊಳ್ಗುಮದಱಿಂ ನುಡಿ

ಟ—೧೨೪. ಪೆಱವೆಣ್ಗೊಳ್ ಕೂಡುವವನಾಯುಮವರೆಗುಂ.

ಪಾ—1. ವಿಭೀಷಣಂ ಸತ್ಪುರುಷವಿಭೂಷಣಮಪ್ಪ. ಗ ॥ ಖ ॥

ವುದದಂತಿರ್ಕೆ; [1]ಅದಿರ್ದ[1] ದೆಸೆಯುಂ ಮೊದಲಾಗಿ ನೋಡಲಕ್ಕೆನದಲ್ಲದೆಯುಂ,

ಸಂಜೀವಕ ನೀನೆನಿತೆನಿ ।
ತಂಜಿದೊಡಂ ಕುಂಜರಾರಿ ಕೊಲ್ಲದೆ ಮಾಣಂ ॥
ಕಂಜೋದರನುಂ ಹರನುಂ । [೨೪
ಕಂಜಾಸನನುಂ ಕಡಂಗಿ ಕಾವೊಡ[2]ಮಾ[2]ಗಳ್ ॥ 238

ಎನೆ; ಗವಾಧಿಪನದೆಲ್ಲಮಂ ಕೇಳ್ದೊಡ[3]ಮಿನ್ನೆಂತುಂ[3] [4]ಶಕ್ತ್ಯನುರೂಪದಿಂ[4] ಸಾಹಸಂಗೈದಪ್ಪೆಂ, ಪಿಂಗಳಕನೆನಗೆ [5]ತಪ್ಪಂ[5] ಬಗೆವಾಗಳೆಂತಿರ್ಪನಱಿಯೆ ಪೇೞಿನೆ; ದವನಕಂ ಪೇೞ್ಗುಂ:—ಆಸಿಂಗಂ ಮುನ್ನಿನಿರ್ಪಂದಮಲ್ಲದೆ ಶಿಲಾತಳದ ಮೇಲೆ ಕಾಲುಮಂ ಬಾಲಮುಮನುಡುಗಿಯುಡಂಗಿಸಿ ಕಿವಿಯುಂ ಕತ್ತರಿಸಿ ಶರೀರಮಂ ಸಂಕೋಚಿಸಿ ನಟ್ಟ ದಿಟಗಳ್ವೆರಸು ನಿನ್ನನೆ ನೋಡುತ್ತುಮಿರ್ಕುಮಪ್ಪೊಡಾಗಳೆ ಯುದ್ಧಸನ್ನದ್ಧನೆಂದಱಿಯೆಂದು ಪೇೞ್ದಿರಡರ್ಕಂ ಪರಸ್ಪರವಿರೋಧಮಂ ಮಾಡಿ ಪ್ರಕೋಪಂಗೊಳಿಸಿ ಮಾಣದಾಕ್ಷಣದೊಳೆ ದವನಕಂ ಕರಟಕನಲ್ಲಿಗೆ ಬಂದು,—ಎನ್ನೆತ್ತಿ ಕೊಂಡ ಕಜ್ಜದ ಕಡೆಯನೆಯ್ದಿಸಿ ಬಂದೆನೆಂಬುದುಂ; ಕರಟಕನಿಂತೆಂದಂ:— [೧೬

ಶ್ಲೋ || “ಭಿನತ್ತಿ ಸಮ್ಯಕ್ಪ್ರಹಿತೋ ಭೇದೋಪಾಯಸ್ಸ್ಥಿರಾಂ ಮತಿಂ |
ಭೂಧರಾನ್ ಕರ್ಕಶಿಲಾನ್ ಮಹಾಶನಿರಿವೋದಕಂ ||” ೧೦೬

[ಟೀಕು—ಲೇಸಾಗಿ ಪ್ರಯೋಗಿಸಿದ ಭೇದೋಪಾಯವು ಸ್ಥಿರವಹ ಮತಿಯುಂ ಭೇದಿಸುವುದು: ಅದು ಹೇಗೆಂದೊಡೆ—ಬಟ್ಟತಪ್ಪ ಕಲ್ಲುಗಳುಳ್ಳ ಬೆಟ್ಟವಂ ಸಿಡಿಲುಂ ನೀರುಂ ಭೇದಿಸುವಹಗೆ.]

ಎಂದಿಂತಾನರಿಗಳ್ ತಮ್ಮೊಳ್ ನುಡಿಯುತ್ತಿರ್ಪಿನಮಿತ್ತಲ್,

---

ಪಾ—1. ಆಸಿಂಹಮಿರ್ದ. ಗ || 2. ಮಾ. ಗ || 3. ಮೆನ್ನ. ಖ ||
4. ಶಕ್ತ್ಯನುಸಾರಂ. ಗ || 5. ತಪ್ಪಲ್. ಖ || ಗ ||

ಸಂಜೀವಕನೆಂದಂತೆನ ।
ಗಂ ಜೀವನದಾಸೆಯದು ನಿರಾಸೆಯುಮಾಯ್ತು ॥
ನ್ನಂಜದೆ ಕಾದುವೆನಂಜಿದೊ ।
ಡಂ ಜವನಿನ್ನೆನ್ನ ಬೞಿಯನೇನುೞಿದಪನೇ ॥ 239

ಅದಱಿಂದೀಗಳೆ ಪೋಗಿ ತಾಗಿ ತಳ್ತಿಱಿವೆಂ; ಬೞಿಕ್ಕೆ ತನ್ನಪ್ಪುದಕ್ಕೆಂದು ಭೋರೆನೆ ಬಂದಾಸನ್ನಮುಮತಿದೂರಮುಮಲ್ಲದೆ ನಿಂದು ದವನಕಂ ಪೇೞ್ದ [1]ಚಿಹ್ನಂಗಳನಾಸಿಂಗದ ಮೊಗದೊಳ್[1] ಕಂಡು ಕಡುಗಲಿಯಪ್ಪುದುಮದಱ ಚೇಷ್ಟೆಯುಮಂ ಪಿಂಗಳಕಂ ಕಂಡು ಕಡುಮುಳಿದು

ಬಳವದರಿಕುಂಭಿಕುಂಭ ।
ಸ್ಥಳಕ್ಕೆ ಪಾಯ್ವಂತೆ ಪಾಯ್ದನಧಿಕಬಲಂ ಪಿಂ ॥
ಗಳಕಂ ಮಾಣದೆ ಗೋವಂ ।
ಡಳಮುಖ್ಯನ ಮೇಲೆ ಕಲುಷಕಲುಷಿತವದನಂ ॥ 240

ಅಂತು ಪಾಯ್ವುದುಂ ಸಂಜೀವಕಂ ವಜ್ರಪಾಷಾಣನಿಶಿತವಿಷಾಣಯುಗಳದಿಂ ಕಂಠೀರವನ ಕಂಠಪ್ರದೇಶಮನಿಱಿದು ಪಿರಿದುಂ ಪೊಯ್ತು ತಳ್ತಿಱಿದು ಕಾದಿ,

ಬಳಿಭು[2]ಗ್ಗೃಧ್ರ[2]ಕದಂಬಮಂಬರದೊಳುಗ್ರಶ್ವಾಪದಶ್ರೇಣಿ ಭೂ ।
ತಳದೊಳ್ ನರ್ತಿಸೆ ಕೋಪಪಾವಕಶಿಖಾಜಾಲಾತಿರೌದ್ರಾನನಂ ॥
ಕುಳಿಶಾಗ್ರೋಗ್ರಪರಿಸ್ಫುರನ್ನಖಮುಖವ್ಯಾಳಗ್ನಮಾತಂಗಜಾಂ ।
ಗಳಕಂ ಪಿಂಗಳಕಂ ಗವಾಧಿಪತಿಯಂ ಕೊಂದಂ ಭುಜಾದಂಡದಿಂ ॥

ಅಂತು ಕೊಂದತಿಶ್ರಾಂತನಾಗಿ ವಸಂತಸಮಯಕಿಂಶುಕೋಪಮನಖಮುಖದಿನತ್ಯಾಸುರಮಾಗಿರ್ದ ನಿಜಸ್ವಾಮಿಯಂ ಕಂಡು ಕರಟಕಂ

ಪಾ—1. ಚಿಹ್ನಂಗಳನಾಸಿಂಗದಮೆಯ್ಯೊಳ್. ಕ ॥ ; ಕುಱುಪನಾಸಿಂಗದೊಳ್. ಗ ॥
2. ಗೋಗ್ರ. ಗ ॥

ದವನಕಂಗಿಂತೆಂದಂ:—ನಿನ್ನಂತಪ್ಪ ದುರ್ಮಂತ್ರಿಯ ಕಾರಣದಿಂ ಪಿಂಗಳಕಂಗೆ ಧರ್ಮಹಾನಿಯುಂ ಯಶೋಹಾನಿಯುಮಾಗಿ ಮಾಣದೆ ಪ್ರಾಣಹಾನಿಯುಮಾಗಲಿರ್ದುದಿದಾತನ ದೋಷ[1]ಮಲ್ಲದೆ ನಿನ್ನ ದೋಷಮಲ್ಲದೆಂತೆನೆ[1]:—

ಶ್ಲೋ || "ದುರ್ಮಂತ್ರಿಣಂ ಕಮುಪಯಾಂತಿ ನ ನೀತಿದೋಷಾಃ | [೫
ಸಂತಾಪಯಂತಿ ಕಮಪಥ್ಯಭುಜಂ ನ ರೋಗಾಃ ||
ಕಂ ಶ್ರೀರ್ನದರ್ಪಯತಿ ಕಂ ನ ನಿಹಂತಿ ಮೃತ್ಯುಃ |
ಕಂ ಸ್ತ್ರೀಕೃತಾ ನ ವಿಷಯಾಃ ಪರಿತಾಪಯಂತಿ ||" ೧೨೭

[ಟೀಕು—ದುರ್ಮಂತ್ರಿಯಾಗಿರ್ದವನ ನೀತಿದೋಷಂಗಳ್ ತಾಗದಿರವು, ಅಪಥ್ಯದಲುಂಬವನ ವ್ಯಾಧಿಗಳ್ ಪೀಡಿಸುವುವು, ಐಶ್ವರ್ಯವೆಂತಹನನುಂ ಸೊಕ್ಕಿಸುವುದು, ಮೃತ್ಯುವೆಂತಹನನುಂ ಕೊಲುವುದು, ಸ್ತ್ರೀಯರು ಮಾಡಿದಂಥ ವಿಷಯಗಳಾವನನಾದೊಡಂ ಸಂತಾಪಂಬಡಿಸುವುವು.] [೧೦

ಮತ್ತಂ,

ಶ್ಲೋ || "ಸಾಮ್ನೈವ ಹಿ ಪ್ರಯೋಕ್ತವ್ಯಮಾದೌ ಕಾರ್ಯಂ ವಿಜಾನತಾ |
ಸಾಮಸಿ[2]ದ್ಧೋ[2] ಹಿ ವಿಜಯೋ ನ ಪ್ರಯಾತಿ ಪರಾಭವಂ ||" ೧೨೮

[ಟೀಕು—ಕಾರ್ಯವನರಿವಾತನು ಮೊದಲಲ್ಲಿ ಸಾಮವನೆ ಪ್ರಯೋಗಿಸುವುದು, ಸಾಮಂ ಸಿದ್ಧಿಸಿದೊಡೆ ವಿಜಯಮಹುದು ಸೋಲವನ್ನೈದನು.]

[3]ಅದೆಂತೆಂದೊಡೆ[3]:— [೧೫

ಶ್ಲೋ || "ಸಾಮಾದಿದಂಡಪರ್ಯಂ[4]ತಂ[4] ನಯಃ ಪ್ರೋಕ್ತಶ್ಚತುರ್ವಿಧಃ |
ತೇಷಾಂ ದಂಡಸ್ತು ಪಾಪೀಯಾನ್ ತಸ್ಮಾದ್ದಂಡಂ ವಿ[5]ವ[5]ರ್ಜಯೇತ್ ||"

[ಟೀಕು—ಸಾಮಾದಿಯಾಗಿ ದಂಡಪರ್ಯಂತಮಾಪುಪಾಯಂ ನಾಲ್ಕು ತೆರನಕ್ಕುಂ. ಅವರೊಳಗೆ ದಂಡಮೊಂದುದು ಪಾಪವನುಳ್ಳುದು, ಅದುಕಾರಣದಿಂ ದಂಡಮಂ ಬಿಟ್ಟು ಕಳೆವುದು.]

ಶ್ಲೋ || "ನ ಮಯೂಖೇನ ರತ್ನಾನಾಂ ನಾತಪೇನ ನ ವಹ್ನಿನಾ |
ಸಾಮ್ನೈವ [6]ಪ್ರಭಯಾ[6] ಯಾತಿ ವಿದ್ವಿಷ ಪ್ರಭವಂ ತಮಃ ||" ೧೩೦

ಪಾ—1. ಮಲ್ಲಂತೆನೆ. ಗ || 2. ದ್ಧಾ. ಖ || 3. ಗ || ಪ್ರತಿಯಲ್ಲಿಲ್ಲ. 4. ತೋ. ಕ || 5. ಸ. ಕ || 6. ಪ್ರಲಯಂ. ಗ || ; ಪ್ರಭವಂ. ಕ ||

[ಟೀಕು—ಶತ್ರುವಿಂ ಜನಿಸಿದ ಕತ್ತಲೆಯೆಂಬುದು ರತ್ನದ ಬೆಳಗಿಂದಂ, ಬಿಸಿಲಿಂದಂ, ಕಿರ್ಚಿಂದಂ ಕಿಡುವುದಲ್ಲ ; ಸಾಮದ ಬೆಳಗಿಂದಮೆ ಕಿಡುವುದು.]

ಶ್ಲೋ || “ ಕಾರ್ಯಾಣ್ಯುತ್ತಮದಂಡಸಾಹಸಮಯಾನ್ಯಾಯಾಸಸಾಧ್ಯಾನಿ ಯೇ

ಪ್ರೀತ್ಯಾ ಸನ್ನಮಯಂತಿ ನೀತಿ[1]ಕುಶ[1]ಲಾಃ ಸಾಮ್ನೈವ ತೇ ಮಂತ್ರಿಣಃ |

ನಿಸ್ಸಾರಾಲ್ಪಫಲಾನಿ ಯೇತ್ವವಿಧಿನಾ ವಾಂಛಂತಿ ದಂಡಾಧನಾ [೫

ಸ್ತೇಷಾಂ ದುರ್ಣಯಚೇಷ್ಟಿತೈರ್ನರಪತೇರಾರೋಪ್ಯತೇ ಶ್ರೀಸ್ತುಲಾಂ || ” ೧೩೧

[ಟೀಕು—ಆರ್ ಕೆಲಂಬರ್ ನೀತಿಕುಶಲರ್ ದಂಡಸಾಹಸಮಯವಹ ಅಸಾಧ್ಯಮಪ್ಪ ಕಾರ್ಯಂಗಳಂ ಸಾಮದಿಂದಮೆ ಮಾಡಿ ನೃಪಂಗೆ ಸಂತೋ[2]ಷಂಬಡಿಸುವರ್[2] ಅವರೀಗಲೆ ಮಂತ್ರಿಗಳ್ ; ಆರ್ ಕೆಲಂಬರ್ ತಿಳಿನಱಿಯದೆ ನಿಸ್ಸಾರವಾಗಿ ಅಲ್ಪಫಲವಹಂತಹವನೆ ಮಾಡಲಿಚ್ಛೈಸಿಹರ್ ಅವರ್ ದಂಡಾಧಮರೆನಿಸಿಕೊಂಬರ್ ; ಅವರ ದುರ್ಣಯಚೇಷ್ಟೆಗಳಿಂ ನೃಪನೈಶ್ವರ್ಯಂ ತೊಲೆಯಲ್ಲಿ ತೂಗಿಸಿ ಕೊಂಬುದು.] [೧೧

[3]ಜಯಮಂ ಸ್ವಾಮಿಗೆ ಮೊದಲೊಳ್[6] |

ಬಯಸುವ ಸಚಿವಂ ಸಮಸ್ತಕಾರ್ಯಂಗಳೊಳಂ ||

ನಯಶಾಸ್ತ್ರಕ್ರಮದಿಂದಂ |

ಪ್ರಯತ್ನದಿಂ ಸಾಮಮಂ ಪ್ರಯೋಗಿಪುದುಚಿತಂ[3] || 242

ಅದಱಿಂ ನೀತಿಶಾಸ್ತ್ರಾಭಿಪ್ರಾಯೋಪಾಯನಿಪುಣನುಂ ಸ್ವಾಮಿಹಿತನುಂ ಚತುರುಪಧಾವಿಶುದ್ಧನುಮಲ್ಲದ ನಿರ್ಬುದ್ಧಿಯನನ್ವಯಾಗತನೆಂಬನಿತಱಿಕೊಳೆ ಮಂತ್ರಿಯಂ ಮಾಡಿದ ಕಾರಣದಿಂ ನಿನ್ನ ದುರ್ಮಂತ್ರದಿಂ ಮೃಗಾಧಿರಾಜನಪ್ಪ ಪಿಂಗಳಕಂಗಿಂತಪ್ಪವಸ್ಥೆಯಾದುದು. [೧೯

ಶ್ಲೋ || “ ದುಷ್ಟಬುದ್ಧಿಸ್ಸುಬುದ್ಧಿಶ್ಚ ದ್ವಯೋರ್ಧರ್ಮಸ್ಯ ಸಂಶ್ರಯಾತ್ || ”

ಎಂಬ ಕಥೆಯಂತಾದುದೆನೆ—ದಮನಕನದೆಂತೆನೆ—ಕರಟಕಂಪೇೞ್ಗುಂ:—

## ೨೫. ದುಷ್ಟಬುದ್ಧಿಯುಂ ಧರ್ಮಬುದ್ಧಿಯುಂ.

ನ್ಯಗ್ಭೂತಸುರಪುರಂ ಸುವ |

ಱಿಗ್ಭಾಸಿ ಸಮಸ್ತವಸ್ತುಪರಿಪೂರ್ಣಂ ಸ ||

ಪಾ—1. ಸಕ. ಗ || 2. ದಿಂ ಮಾಡೀರು. ಬ || 3. ಗ || ಪ್ರತಿಯಲ್ಲಿಲ್ಲ.

ವ್ಯಗ್ರವನರುಚಿರಮುತ್ತರ |
ದಿಗ್ಭಾಗದೊಳುಂಟು ಮಧುರೆಯೆಂಬುದು ನಗರಂ ‖ 243

ಅಂತಾನಗರದೊಳಗೆ ಧರ್ಮಬುದ್ಧಿಯುಂ ದುಷ್ಟಬುದ್ಧಿಯುಮೆಂ ಬರಿರ್ವರ್ ವಣಿಕ್ಪುತ್ರರ್ ಪುದುವಿನೊಳ್ ಪರದುವೋಗಿ ಪಿರಿದಪ್ಪ ಪೊನ್ನಂ ಪಡೆದು ಮಗುೞ್ದು ಬಂದು ನಿಜಜನ್ಮಭೂಮಿಯಪ್ಪ ಮಧುರಾ ಪುರದ ಬಹಿರುದ್ಯಾನವನದೊಳ[1]ಗೆ ಬೀಡಂ ಬಿಟ್ಟರ್ಧ[1]ರಾತ್ರಿಯೊಳ್ ಧರ್ಮಬುದ್ಧಿ ದುರ್ಬುದ್ಧಿಯುಪ್ಪ ದುಷ್ಟಬುದ್ಧಿಯುಂ ಕರೆದು, ಪೊನ್ನಂ [2]ಪಚ್ಚು[2]ಕೊಳ್ವಮೆನೆ; ದುಷ್ಟಬುದ್ಧಿ ಪಾಪಬುದ್ಧಿಯಾಗಲ್ಬಗೆದಿಂತೆಂದಂ:—ನಾವೀಪೊನ್ನಂ [2]ಪಚ್ಚು[2]ಕೊಂಡು ಮನೆಯೊಳ್ ಸ್ವೇಚ್ಛೆಯಿಂದಿರ್ಪವರ ಲ್ಲಂ, ಮತ್ತಂ ಪರದುವೋಗಲ್ವೇೞ್ಕುಮದುಕಾರಣದಿಂ ನಿನಗಮೆನಗಂ ಬೀಯಕ್ಕೆ ತಕ್ಕನಿತು ಪೊನ್ನಂ ಕೊಂಡು ಮಿಕ್ಕ ಪೊನ್ನನೆಲ್ಲಮನಿಲ್ಲಿಯೆ ಮಡಂಗುವಮೆನೆ; ಧರ್ಮಬುದ್ಧಿಯಾಪಾಪಕರ್ಮನಂ ತನ್ನ ಮನದ ನ್ನನೆಂದೆ ಬಗೆದುಮದಕೊರ್ಡಂಬಟ್ಟೊಂದು ಮಹಾವಟವಿಟಪಿಯ ಕೆ ಲದೊಳ್ ಪೊನ್ನಂ ಪೂೞ್ದು ಮಱುದೆವಸಮಿರ್ವರುಂ ಪೊೞಲಂ ಪೊ ಕ್ಕು ಇಷ್ಟ[3]ವಿಷಯಕಾಮಭೋಗ[3]ಸುಖಂಗಳನನುಭವಿಸುತ್ತಿರ್ದು ದು ಷ್ಟಬುದ್ಧಿ ಧರ್ಮಬುದ್ಧಿಯುಂ ವಂಚಿಸಿ ಪೋಗಿ ಪೊನ್ನನೆಲ್ಲಮಂ ಕೊಂಡು ಕುೞಿಯುಂ ಮುನ್ನಿನಂತೆ ಪೂೞ್ದು ಕೆಲವಾನುಂ ದಿವಸಕ್ಕೆ ತಾನೆ ಧರ್ಮ ಬುದ್ಧಿಯಲ್ಲಿಗೆ ವಂದು,—ಬೀಯಕ್ಕೆ ಪೊನ್ನಿಲ್ಲವಿನ್ನುಂ ಕಿಱಿದು ಪೊನ್ನಂ ತೆಗೆದು ಕೊಳ್ವಂಬನ್ನಿಮೆಂದೊಡಂಗೊಂಡು ಪೋಗಿ ಪೂೞ್ದಿಡೆಯೊಳ್ ಪೊನ್ನಂ ಕಾಣದೆ ಇನ್ನುಸಿರದಿರ್ದೊಡೆ ಅನೃತಂ ತನ್ನ ಮೇಲೆ ವರ್ಪು ದೆಂದು ಪೊನ್ನನೆಲ್ಲಮಂ ನೀನೆ ಕೊಂಡೆ[4]ಯೆಂಬುದುಂ;[4]

ಪಾ—1. ಳಗಿರ್ದ. ಖ ||; ಳಗೆ ಬೀಡಂ ಬಿಟ್ಟಿರ್ದು. ಗ || 2. ಪಚ್ಚು, ಕ ||; ಪಟ್ಟಿ. ಗ ||
3. ಭೋಗಕಾಮ. ಖ || 4. ಯೆಂದು ಬನ್ನಿಮೆಂದು ಡಗೊಂಡು. ಗ ||

ಅತಿಕುಟಿಲಮನಂ ಧನಲು |
ಬ್ಧತೆಯಿಂದಂ ದುಷ್ಟಬುದ್ಧಿ ನುಡಿದಂ ಪುಸಿ[1]ಯಂ[1] ||
ಮತಿಗೆಟ್ಟು "ತಸ್ಕರಸ್ಯಾ |
[2]ನೃತಂ ಬಲಂ" ಎನಿಪ ವಾಕ್ಯವಂ ನೆನೆಯುತ್ತುಂ[2] ||244

ಅಂತು ದುಷ್ಟಬುದ್ಧಿ ಮುನ್ನಮೆ—[3]ಹಾ! ಹಾ![3] ಕೆಟ್ಟೆನೆಂದು ಬಾಯಂ ಬಸಿಱಂ ಪೊಯ್ದು ಕೊಂಡು ಪುಯ್ಲಿಟ್ಟು ಧರ್ಮಬುದ್ಧಿಯ ಮೇಲೆ ಕಳವನಿಟ್ಟು ಕಾಪಱಿದು ಕಾತರಿಸಿ ನುಡಿಯೆ; ಧರ್ಮಬುದ್ಧಿ [4]ತತ್ಕೂರ್ಮಗಿಡಲ್ನುಡಿದು ನೀಂ ಗೆಲೆ ಬಾಯಾರ್ದು ಪೋಗಲ್ಪಡೆಯೆ[4] ವಿಚಾರಂಗೆಯ್ವಮೆಂದು, ಧರ್ಮಾಧಿಕರಣರಲ್ಲಿಗೆ ಬಂದಿರ್ವರುಂ ತತ್ಪ್ರಪಂಚಮೆಲ್ಲಮುಂ ಸವಿಸ್ತರಂ ನುಡಿದು, ಕಡೆಯೊಳ್ ದುಷ್ಟಬುದ್ಧಿಯಿಂತೆಂದಂ:—ಪೊನ್ನೆಲ್ಲಮನೀತನೆ ಕಳೆದು ಕೊಂಡುದರ್ಕೆ ಸಾಕಿಯುಂಟೆನೆ; ಸಭಾಸದರ್ ಸಾಕ್ಷಿಯುಂ ಪೇೞ್ದಿನೆ; ಪೊನ್ನಂ ಮಡಗುವಾಗಳೀತನುಮಾನುಮಲ್ಲದೆ ಮನುಷ್ಯರ್ ಪೆಱರಿಲ್ಲ, ತತ್ಸನ್ನಿಧಾನಸ್ಥಿತಮಪ್ಪ ವಟವೃಕ್ಷಮೆ ಸಾಕ್ಷಿಯೆಂಬುದುಂ; ಧರ್ಮಾಧಿಕರಣರ್ ವಿಸ್ಮಯಂಬಟ್ಟು—ಈತನ ಮಾತು ಅಶ್ರುತಪೂರ್ವವಿವಾದೋದ್ಯಮಂ ನೋಡು[5]ವಮೆಂ[5]ದು ಧರ್ಮಬುದ್ಧಿಯುಂ ಕರೆದು—ನೀನೀಸಾಕ್ಷಿಯುಂ ಕೈಕೊಳ್ವುದೆಂದೊಡಾತಂ—ವೃಕ್ಷಂ ಸಾಕ್ಷಿಯೆಂದು ಮುನ್ನಂ ಪೇಳ್ದಿರುಂ ಕೇಳ್ದರುಮಿಲ್ಲಮದಲ್ಲದೆಯುಂ,

ಶ್ಲೋ || "ಗೃಹಿಣಃ ಪುತ್ರಿಣೋ ಮೌ[6]ಲಾಃ[6] ಕ್ಷತ್ರವಿಟ್ಛೂದ್ರಯೋನಯಃ |
[7]ಇ[7]ತ್ಯುಕ್ತಾಃ ಸಾ[8]ಕ್ಷ್ಯ[8]ಮರ್ಹಂತಿ ನಯಕೋವಿದಮಾನದಿ ||" ೧೭೦

ಪಾ—1. ದಂ. ಖ || 2. ನೃತಮೇವ ಬಲಂ ಎನಿಪ್ಪ ವಾಕ್ಯವ ನೆನೆದುಂ. ಕ ||; ನೃತಂ ಬಳಮೆನಿಪ್ಪ ವಾಕ್ಯಮಂ ನೆನೆಯುದೆಯುಂ ಗ || 3. ಅಕಟಾ!. ಖ || 4. ತಪ್ಪಂ ನುಡಿದ ನಿನ್ನಂ. ಗ || 5. ವೆವೆಂ. ಗ || 6. ಲಾಃ. ಗ || 7. ಇ. ಗ || 8. ಕ್ಷಿ. ಖ ||

[ಟೀಕು—ಗೃಹಸ್ತರಪ್ಪ ಪುತ್ರರುಗಳುಳ್ಳ ಕ್ಷತ್ರಿಯವೈಶ್ಯಶೂದ್ರರುಗಳು ಆಪತ್ತಿನಲ್ಲಿ ನೀತಿವಿದರನೆ ಸಾಕ್ಷಿಯೆಂದು ಕೈಕೊಳ್ವರ್.]

ಎಂಬೀಶ್ಲೋಕಂಗಳೊಳಂ ಆವಾವ ವಿಷಯದೊಳಂ ಪ್ರಾಪ್ತಮನುಷ್ಯರೆ ಸಾಕ್ಷಿಯಪ್ಪರೆಂದು ಪೇೞ್ದಿರಲ್ಲದೆ ವೃಕ್ಷಂ ಸಾಕ್ಷಿಯೆಂದು ಪೇೞರಿಲ್ಲ: ಎಂತು ಕೈಕೊಳ್ವೆನೆನೆ; ಧರ್ಮಾಧಿಕರಣದವರಿಂತೆಂದರ್:—

ಶ್ಲೋ|| "ಆದಿತ್ಯಚಂದ್ರಾವನಿಲೋನಲಶ್ಚ ದ್ಯೌರ್ಭೂಮಿರಾಪೋ ಹೃದಯಂ ಯಮಶ್ಚ |
ಅಹಶ್ಚ ರಾತ್ರಿಶ್ಚ ಉಭೇ ಚ ಸಂಧ್ಯೇ ಧರ್ಮಶ್ಚ ಜಾನಾತಿ ನರಸ್ಯ ವೃತ್ತಂ||" ೧೬

[ಟೀಕು—ಸೂರ್ಯಚಂದ್ರಮರುಗಳು, ವಾಯು, ಅಗ್ನಿ, ಆಕಾಶ, ಭೂಮಿ, ಉದಕ, ಹೃದಯ, ಯಮನು, ಹಗಲಿರುಳು, ಉದಯಾಸ್ತಗಳು, ಧರ್ಮವು ಎಂಬಿವು ಮನುಷ್ಯರ ನಡೆವಳಿಯನಱಿವುವು.] [೧೦

ಎಂಬುದು ವಾಕ್ಯಮುಂಟು. ಮನುಷ್ಯರ ಸುಕೃತದುಷ್ಕೃತಂಗಳಂ ದೈವಂಗಳಱಿಗುಮದಱಿಂದೀಸಾಕ್ಷಿಯುಮುಚಿತಂ. ಮನುಷ್ಯಂ ಮೊದಲಾಗಿ ನುಡಿವುದರಿದೆಂದೊಡೆ ಮರನಂ ನುಡಿಸುವುದು ಪರಮಗಹನಮೀಸಾಕ್ಷಿಯಂ ಕೈಕೊಳ್ವುದೆನೆ—ಧರ್ಮಬುದ್ಧಿ ಕರಮೊಳ್ಳಿತ್ತು, ಕೈಕೊಂಡೆನೆನೆ; ಧರ್ಮಾಧಿಕರಣದವರಿಂದು ಪೊೞ್ತು ಪೋದದು, ನಾಳೆ ಪೋಗಿ ಕೇಳ್ವಮೆನೆ; ತಮ್ಮ ತಮ್ಮ ಮನೆಗೆಲ್ಲರುಂ ಪೋದರ್. [೧೭

ಅನ್ನೆಗಂ ದುಷ್ಟಬುದ್ಧಿಯುಂ ತನ್ನ ಮನೆಗೆ ಬಂದು ತಮ್ಮಯ್ಯನ ಕಯ್ಯಂ ಪಿಡಿದು ಕಟ್ಟೇಕಾಂತಕ್ಕುಯ್ದು ತದ್ವೃತ್ತಾಂತಮೆಲ್ಲಮಂ ತಿಳಿಯೆ ಪೇೞ್ದು—ನಿಮ್ಮೊಂದು ವಚನಮಾತ್ರದಿಂ ನಮ್ಮ ಪರಿಗ್ರಹಮೆಲ್ಲಂ ಪಲವು ಕಾಲಂ ಪಸಿಯದುಂಡು ಬಾೞ್ವಂತರ್ಥಂ ಸಾರ್ದಪ್ಪುದು; ನೀವಾಮರದ ಪೊೞಲೊಳಡಂಗಿರ್ದು, ಧರ್ಮಬುದ್ಧಿಯೆ ಪೊನ್ನಂ ಕೊಂಡುಯ್ದನೆಂದು ನುಡಿಯಿಮೆಂಬುದುಮಾತನಿಂತೆಂದಂ:— [೨೨

ಧರಣೀವಳಯಂ ಚೀ! ಎನೆ।
ಪರಧನಮಂ ಕಪಟವೃತ್ತಿಯಿಂ ವಂಚಿಸಿ ಕೊಂ ||

ಕುರುರಾಜ್ಯಶ್ರೀಸಹಿತಂ |
ನಿರುತದೊಳಂದಿಱಿದ ಕೌರವಂ ರೌರವಮಂ || 245

ಅಂತದಱಿಂ ಪರ[1]ಧನ[1]ಹರಣಮುಂ ಪರಸ್ತ್ರೀಗಮನಮುಂ ವಿಶ್ವಾಸಘಾತುಕಮುಂ ಸ್ವಾಮಿದ್ರೋಹಮುಂ ಇವೆಲ್ಲಮೇಗೆಯ್ದುಂ ಕಿಡಿಸುಗುಮಿಂತಪ್ಪುದೆಲ್ಲಮಂ ನೀನಱಿದಿರ್ದೆನ್ನುಮಂ ಸಾಕ್ಷಿಮಾಡಿ ನುಡಿಸಿ ಕಿಡಿಸಲ್ಬಗೆದೆ. ನಿನ್ನ ಪುಱುವಗೆ ನಮ್ಮ ಕುಲಮನೆಲ್ಲಮನಱಿವ ಬಗೆ. ಅಲ್ಲದೆಯುಂ ನಿನ್ನ ಕಂಡೀಯುಪಾಯಕ್ಕಪಾಯಂ ಬಹುಳಮದೆಂತೆನೆ:—

ಶ್ಲೋ|| "ಶ್ರೂಯತೇ ಹಿ ಸಮುದ್ರಾಂತೇ ನಕುಲೈರ್ಭಕ್ಷಿತೋ ಬಕಃ ||"

ಎಂಬ ಕಥೆಯಂ ಕೇಳ್ದಱಿವುದಿಲ್ಲಕ್ಕುಮೆನೆ — ದುಷ್ಟಬುದ್ಧಿಯದೆಂತೆನೆ—ಪ್ರೇಮಮತಿ ಪೇೞ್ಗುಂ:— [೧೦

೨೬. ಬಕನ ಕತ್ತಿಗಳುಂ ಮುಂಗುರಿಗಳುಂ.

ಸಮುದ್ರತೀರದೊಳೊಂದು ಮರದೊಳ್ ಬಕಮಿಥುನಮಿರ್ಕುಂ. ಅವಱ ತತ್ತಿಗಳನಾಮರದ ಕೆಲದ ಪುತ್ತಿನೊಳಿರ್ಪುದೊಂದು ಸರ್ಪಂ ಪರಿತಂದು ಮರನನಡರ್ದು ತಿನುತ್ತಿರೆ; ಬಕಂ ಕಲುಷಿತಚಿತ್ತನಾಗಿ ಯೇಗೈಯ್ಯಲುಮಱಿಯದೊಂದು ದಿವಸಂ ಸಮುದ್ರತೀರದೊಳ್ ನಿಂದು ಜಾನಿಸುತಿರ್ಪುದನೊಂದು [2]ಕರ್ಕಟಕಂ[2] ಕಂಡೇಂ ಭಾವಾ! ನೀನಿಂದಾಹಾರಚಿಂತೆಯಂ ಮಾಣ್ದು [3]ವೇಹಾರಂಗೆಯ್ವರಂತೆ[3] ಕಣ್ಣಂ ತಿಣ್ಣಂ ಮುಚ್ಚಿಕೊಂಡಿರ್ಪ ಕಾರಣಮಾವುದೆನೆ; ಬಕನಿಂತೆಂದುದು:— ಎನಗೆ ಮನದ ಮಱುಕಂ ಪಿರಿದುಮಾಹಾರಕ್ಕೆಂತು ಚಿಂತೆಗೆಯ್ವೆನೆನೆ; ಕರ್ಕಟಕನದೇಂ ನಿಮಿತ್ತಮೆನೆ; ತದ್ವೃತ್ತಾಂತಮೆಲ್ಲಮಂ ಬಕಂ ಪೇೞೆ ಕೇಳ್ದಂತೆಂದುದು:—

ಪಾ—1. ದ್ರವ್ಯಾಪ. ಗ || 2. ಕುಳೀರಂ, ಗ || 3. ತಪಸ್ವಿಗಳಂತೆ. ಗ ||

ಅಂತಪ್ಪೊಡುರಗನಂ ಕೊ ।
ಲ್ವಂತಪ್ಪುಪದೇಶವೊಂದನಾಂ ಪೇೞ್ದಪೆಂ ॥
ನೀಂ ತಪ್ಪದೆ ಪಿಶಿತಮನು ।
ಯ್ದಂತಾನಕುಲಂಗಳಾಡುವೆಡೆಯಿಂ ತೊಟ್ಟುಂ ॥246
ಉರಗನ ಪುತ್ತುವರಂ ಸೈ । [೫
ತಿರೆ ಸಾಲಿಟ್ಟಂತೆ ಮಾಂಸ[1]ಖಂ[1]ಡಮನಿಡೆ ಮುಂ ॥
ಗುರಿಗಳ್ [2]ಲಬ್ಧಾ[2]ಸ್ವಾದದಿ ।
ನುರಗನುಮಂ ತಿಂಗುಮೆಂದು ಪೇೞ್ವುದುಮಾಗಳ್ ॥247

ಅಂತೆ ಗೆಯ್ವೆನೆಂದುಮಾಬಕಂ ಮೀಂಗಳನಾಗಳೆ ಕೊಂದು ತಂದು ಕರ್ಕಟಕಂ ಪೇೞ್ದಿಂದದೊಳಿಕ್ಕುವುದುಂ; ಮುಂಗುರಿಗಳ್ ಮತ್ಸ್ಯಮಾಂಸಮಂ ತಿನುತುಂ ಬಂದು ಪುತ್ತುಮನ್ಯೈದುವುದುಂ; ಉರಗಂ ಪೊಱಮಟ್ಟು ಮರನನಡರ್ವುದಂ ಕಂಡದಂ ಶತಖಂಡಂಮಾಡಿ ಕೊಂದು ತಿಂದು ಮತ್ತಂ ಮಱುದಿವಸಮಾಮಾರ್ಗದಿಂ ಬಂದೆಲ್ಲಿಯು[3]ಮಡಗಂ[3] ಪಡೆಯದೆ ಮರನನಡರ್ದು ಪಾವಿನ ಬಾಯಿಂ ಬದುಂ*ಕಿದ ತತ್ತಿಗಳಂ ನಕುಲಂಗಳ್ ತಿಂದುವು. [೧೫

(೨೫. ನೆಯ ಕಥೆಯ ಶೇಷ.)

ಅದಱಿಂ

ಶ್ಲೋ॥ "ಉಪಾಯಂ ಚಿಂತ[4]ಯೇತ್[4] ಪ್ರಾಜ್ಞಸ್ತಥಾಪಾಯಂ ಚ ಚಿಂತಯೇತ್ ।
ಶ್ರೂಯತೇ ಹಿ ಸಮುದ್ರಾಂತೇ ನಕುಲೈರ್ಭಕ್ಷಿತೋ ಬಕಃ ॥" ೧೭೪

[ಟೀಕು— ಬಲ್ಲವರುಪಾಯವಂ ಚಿಂತಿಸುವುದು, ಮೇಲೆ ಬರ್ಪಪಾಯವಂ ಚಿಂತಿಸುವದು. ಅದೇನುಕಾರಣವೆಂದೊಡೆ — ಸಮುದ್ರತೀರದಲ್ಲಿರ್ದ ಬಕನ ತತ್ತಿಗಳಂ ಮುಂಗುರಿಗಳ್ ತಿಂದುವಪ್ಪುದೆ ಕಾರಣವಾಗಿ. ]

---

ಪಾ—1. ಪಿಂ. ಗ ॥ 2. ಬದ್ಧ. ಖ ॥
3. ಮಹಾಹಂ. ಖ ॥ 4. ಯನ್. ಖ ॥

ಎಂಬ ಕಥೆಯುಂ ದುಷ್ಟಬುದ್ಧಿ ಕೇಳ್ದು ನೀನೊಂದು [1]ಭಣಿತೆಯ ಕಥೆಯುಂ[1] ಪೇೞ್ದು ನಮ್ಮ ನಿರ್ವಾಹಮಂ ಕಿಡಿಸದೆನ್ನೆಂದುದಂ ಗೆಯ್ಯೆಂದು ತನ್ನ ತಂದೆಯುನೊಡಂಬಡಿಸುತ್ತಿರ್ಪಿನಮಾದಿತ್ಯನಪರಗಿರಿಯನೆಯ್ದುವುದುಂ; [೪

ಮೇದಿನಿಯುಂ ಕ್ರಮಕ್ರಮದೆ ಪರ್ವಿದುದಾತ್ತನಭೋವಿಭಾಗಮಾ।
ಚ್ಛಾದಿತದಿಙ್ಮುಖಂ ವ್ಯವಹಿತಾಖಿಲದೃಷ್ಟಿ[2]ಪಥಂ ತ[2]ಮಾಲಭೃಂ ॥
ಗೋದರನೀರದಾಗಮಘನಪ್ರಕರಾಂಜನಪುಂಜಕೋಕಿಲಾ ।
ಜ್ಞೋದರಕಾಯಕಾಂತಿಶಿತಿಕಂಠಗಳಪ್ರತಿಮಪ್ರಭಂ ತಮಂ ॥248

ವ॥ ಅಂತು ಕವಿದ ಕೞ್ತಲೆಯೊಳ್ ದುಷ್ಟಬುದ್ಧಿ ತನ್ನ ತಂದೆಯುಂ ಕೊಂದಲ್ಲದೆ ಮಾಣೆನೆಂದುಯ್ವಂತುಯ್ದು [3]ಬಳಾರಿ[3]ಯ ಮನೆಯುಂ ಪರಕೆಯ ಕುಜಿಯುಂ ಪುಗಿಸುವಂತೆ ವಟವಿಟಪಿಕೋಟರಕುಟೀರಾಂತರಮಂ ಪುಗಿಸಿ ಬವರಮಂ ಗೆಲ್ದೆನೆಂದು ರಾಗಿಸಿ ಮನೆಗೆ ವಂದು ನಿದ್ರಾಂಗನಾಸಕ್ತನಾದಂ. ಅನ್ನೆಗಮಿತ್ತಂ [೧೭

ಪರಧನಹರಣಾರ್ಥಂ ನಿಜ ।
ಗುರುವಧೆಯುಂ ಮಾಳ್ಪ ದುಷ್ಟಬುದ್ಧಿಯ ಕಥೆಯುಂ ॥
ನಿರುತಂ ನೋಡಲ್ ಬರ್ಪಂ ।
ತಿರೆ ಬಂದಂ ಪೂರ್ವಗಿರಿಗೆ ಸರಸಿಜಮಿತ್ರಂ ॥ 249 [೧೭

ಅಂತಾದಿತ್ಯೋದಯಮಾಗಲೊಡಂ ಧರ್ಮಬುದ್ಧಿ ದೇವಗುರುದ್ವಿಜಪೂ[1]ಜೆಗಳಂ ಮಾಡುತ್ತುಂ[1] ತಡೆಯೆ ದುಷ್ಟಬುದ್ಧಿ ಮುಖಮಂ ತೊಳೆಯದೆ ಬಂದು ಧರ್ಮಾಧಿಕರಣಕ್ಕಿಂತೆಂದಂ:— ಪ್ರತ್ಯರ್ಥಿ ಬಂದನಿಲ್ಲ, ಪಿರಿದುಂ ಪೊೞ್ತು ಪೋದದು, ಎನಗೆ ಕರ್ತವ್ಯಮಾವುದೆಂದು

ಪಾ—1. ಪ್ರಣಿತಿಗತೆಯುಂ, ಖ ॥ ಗ ॥ 2. ಪತತ್ತ್ರ, ಕ ॥ ; ಪರಂತ, ಗ ॥
3. ಮಾರಿ, ಕ ॥ 4. ಜಾನಿರತನಾಗಿರ್ದ, ಗ ॥

ನುಡಿಯುತಿರ್ಪನ್ನೆಗಂ; ಧರ್ಮಬುದ್ಧಿಯು ಬರವಂ ಕಂಡಾಕ್ಷಣದೊಳ್ ಧರ್ಮಾಧಿಕರಣರ್-ನಡೆಯಿಂ ನಿಮ್ಮಿರ್ವರ ಬವರಮಂ ತಿರ್ದುವವೆಂದು ವಟವೃಕ್ಷದ ಸಮೀಪಕ್ಕೆ ವಂದಷ್ಟವಿಧಾರ್ಚನೆಯಿಂದರ್ಚಿಸಿ ತದನಂತರಮಾಯಿರ್ವರುಮಂ ನುಡಿಸಿ ಬಳಿಕ್ಕಾಮರನನಿಂತೆಂದರ್:—

ಶ್ಲೋ|| [1] "ಬ್ರೂಹಿ ಸಾಕ್ಷಿನ್ಯಥಾವೃತ್ತಂ ಲಂಬಂ ತೇ ಪಿತರಸ್ತ್ವವ |
ತಥಾ ವಾಕ್ಯಮುದೀಕ್ಷಂತೇ ಉತ್ಪತಂತು ಪತಂತು ವಾ ||" [1] ೧೫

[ಟೀಕು— ಎಲೆ ವೃಕ್ಷವೆ, ಪಿತೃಗಳ್ ನಿನ್ನನೇ ಅವಲಂಬಿಸಿ ಇರ್ದಹರು; ನಿನ್ನ ವಾಕ್ಯವನೆ ಇಚ್ಛೈಸಿಹರು; ಉತ್ಪತನವಾಗಲಿ ಪತನವಾಗಲಿ ಯಥಾವೃತ್ತವಹ ಸಾಕ್ಷಿಯಾನೆ ನುಡಿ.]

ಎಂದು, ಮತ್ತಂ,

ಶ್ಲೋ || "ನಗ್ನೋ ಮುಂಡಃ ಕಪಾಲೀ ಚ ಭಿಕ್ಷಾರ್ಥೀ ಕ್ಷುತ್ಪಿಪಾಸಿತಃ |
ಅಂಧಶ್ಶತ್ರುಗೃಹಂ ಗಚ್ಛೇದ್ಯ[2]ಸ್ಸಾಕ್ಷೀ ಚಾನೃತಂ[2] ವದೇತ್ ||" ೧೬

[ಟೀಕು— ಆವನೊರ್ವ ಸಾಕ್ಷಿ ಅನೃತವಂ ನುಡಿವನು ಆವನು ದಿಗಂಬರನು, ಬೋಳನು, ಕಾಪಾಲಿಕನು, ಭಿಕ್ಷುಕನು, ಹಸಿವುತೃಷೆಯುಳ್ಳತನು, ಕುರುಡನು ಆಗಿ ಹಗೆಯ ಮನೆಗೆ ತಿರಿದುಂಬುದಕ್ಕೆ ಹೋಹನು.]

ಎಂಬುದು ವಾಕ್ಯಮುಂಟು. ಸಾಕ್ಷಿಯಾಗಿ ತಪ್ಪಿ ನುಡಿವರ್ಗೆ ಪಾಪಮೆ ಸಂಭವಿಸುವುದು. ನೀನಪ್ಪೊಡೆ ಯಕ್ಷಾದಿದಿವ್ಯದೇವತಾವಾಸಮುಂ [3]ಸೇವ್ಯ[3]ಮುಮಪ್ಪ ವೃಕ್ಷಮದುಕಾರಣದಿಂ ನಿನ್ನಂ ಸಾಕ್ಷಿಮಾಡಿ ಕೇಳ್ದಪೆವು. ನೀಂ ತಪ್ಪದೆ ನುಡಿಯೆಂದು ಧರ್ಮಾಧಿಕರಣಂ ಧರ್ಮಪ್ರವಣಂಗೆಯ್ದುಸಿರದಿರ್ಪುದುಂ—ಪೊಟ್ಟಲೊಳಡಂಗಿರ್ದ ದುಷ್ಟಬುದ್ಧಿಯ ತಂದೆ ಪ್ರೇಮಮತಿ ಮತಿಗೆಟ್ಟು ಧರ್ಮಗತಿಯಂ ಬಿಟ್ಟು "ಪ್ರಕೃತಿವಿಕೃತಿಯಾದ ಮನುಷ್ಯನಾಯುಷ್ಯಂ ಕುಂದುಗುಂ" ಎಂದು ನುಡಿವಂತೆ

ಪಾ—1. ಬ್ರೂಹಿ ಸಾಕ್ಷ್ಯಂ ಯಥಾವೃತ್ತಂ (ವಿತ್ತಂ) ಲಭಂತೇ ಪಿತರಸ್ತಥಾ |
ತವ ವಾಕ್ಯಂ ಸಮಿಚ್ಛಂತಿ ವ್ಯ(ಉ)ತ್ಪತಂತು ಪತಂತು ವಾ || ಕ || ಗ ||
2. ಸ್ಸಾಕ್ಷ್ಯಮನೃತಂ, ಗ || 3. ಸತ್ಯ. ಕ ||

ಧರ್ಮಬುದ್ಧಿಯೆ ಧನಮಂ ತೆಗೆದುಕೊಂಡನೆಂದು ನುಡಿವುದುಂ, ನೆರವಿಯುಂ ಧರ್ಮಾಧಿಕರಣಮುಂ ಚೋದ್ಯಂಬಟ್ಟರೆ; ಧರ್ಮಬುದ್ಧಿ—

ವಾಕ್ಯಂ || "ಧರ್ಮೋ ಜಯತಿ ನಾಧರ್ಮ ಇತ್ಯಮೋಘೀಕೃತಂ ವಚಃ ||" ೧೪೩

ಎಂಬೀ ವಾಕ್ಯಂ ತಪ್ಪಲಱಿಯದಪ್ಪುದಱಿಂದೆನಗಮಿದು ಚೋದ್ಯಮಿದು ದೈವಮಲ್ಲಕ್ಕುಮಂತಪ್ಪೊಡೆ ಸತ್ಯಮನೇಕೆ ನುಡಿಯದು, ಇದೇನಾನುಮೊಂದು ಕೃತ್ರಿಮಮಾಗಲೆ ವೇೞ್ಕುಮೆಂದಾಮರನಂ ಬಲವಂದು ನೋಡಿ ಪಿರಿದಪ್ಪ [1]ಪೊಟಿಲುಮನಲ್ಲಿಯೆ[1] ಮನುಷ್ಯಸಂಚಾರಮಾಗಿರ್ದುದುಮಂ ಕಂಡು ನಿಶ್ಚೈಸಿ ಧರ್ಮಬುದ್ಧಿ ಧರ್ಮಾಧಿಕರಣರ್ಗಿಂತೆಂದಂ:—

ವಾಕ್ಯಂ || "ಕಿರಾಟೋ ನಾಸ್ತಿ ನಿಶ್ಶಠಃ ||" ೧೪೮ [F

ಎಂಬ ವಾಕ್ಯಾರ್ಥದಿಂ ಹುಸಿಯದ ಬೇಹಾರಿಯೋ ಇಲ್ಲ, ನಾಂ ಬೇಹಾರಿಯಪ್ಪುದಱಿಂದೆಮ್ಮ ಜಾತಿಧರ್ಮಕ್ಕೆ ಧರ್ಮಬುದ್ಧಿಯಧರ್ಮಬುದ್ಧಿಯಾಗಿ ಧನಮಂ ಬಂಚಿಸಿಕೊಂಡೆನ್ನ ಮನೆಗುಯ್ವೆನೆಂಬನ್ನೆಗಂ; ನೇಸಮಾಡಿದೊಡುಯ್ಯಲಿಂಬಿಲ್ಲದೆ ಮರದ ಪೊಟಿಲೊಳಗಿಟ್ಟು ಬಂದು ಮಱುದಿವಸಂ ಪೋಗಿ ನೋೞ್ಪನ್ನೆಗಂ, ಆಪೊನ್ನನೊಂದು ಪನ್ನಗಂ ಸುತ್ತಿಪಟ್ಟಿರ್ದೊಡೆ ಕೊಳಲಂಜಿ ಪೋದೆಂ; ನೀಮಿಲ್ಲಿರ್ದಂತೆ ನೋಡುತ್ತುಮಿರಿಂ, ಪೊಟಿಲೊಳಗೆ ಪೊಗೆಯನಿಕ್ಕಿ ಪಾವಂ ಪೊಱಮಡಿಸಿ ಕಳ್ದುಕೊಂಡೊಡವೆಯಂ ಕುಡುವೆನೆಂದು ಧರ್ಮಬುದ್ಧಿ ಪುಲ್ಲಂ ಪುಳ್ಳಿಯುಂ ತರಿಸಿಯಾಪೊಟಿಲೊಳಗಡಸಿ ತುಂಬಿ ದುಷ್ಟಬುದ್ಧಿಯ ಮನೆಯೊಳ್ ಕಿಚ್ಚನಿಕ್ಕುವಂತೆ ಕಿಚ್ಚನಿಕ್ಕಲೊಡಂ; ಪೊಗೆ ಸುತ್ತಿಯುರಿಯಟ್ಟಲ್ ಪ್ರೇಮಮತಿ ಧೃತಿಗೆಟ್ಟು ಪುಯ್ಯಲಿಟ್ಟು ಪೊಟಿಲೊಳಗಿಂದಂ ಸುರುಳ್ದುರುೞ್ದು ಕಂಠಗತಪ್ರಾಣನಾಗಿರ್ಪುದಂ ಧರ್ಮಾಧಿಕರಣರ್ ಕಂಡು ದುಷ್ಟಬುದ್ಧಿಯ ತಂದೆಯಪ್ಪುದಂ ಸಂದೆಯಮಿಲ್ಲೆಂದಱಿದು—ಈಪಾಪಕರ್ಮನಪ್ಪ

ಪಾ—1. ಪೊಟ್ಟಱೆಯೊಳ್. ಕ ||

ದುಷ್ಪುತ್ರನಿಂ ನಿನಗಿಂತಪ್ಪ ದುರ್ಮರಣಂ ಸಮನಿಸಿದುದೆಂದು ನುಡಿವುದುಂ; ಪ್ರೇಮಮತಿಯಿಂತೆಂದಂ:— ಇನಿತನ್ಯಾಯಮನಾನೆ ಮಾಡಿದೆನೆನ್ನ ಮಗನ ಮೇಲೆ ದೋಷಮಾವುದುಮಿಲ್ಲೆಂದು ಲೋಕಾಂತರಿತನಾದಂ. ಅದೆಲ್ಲಮಂ ಕಂಡು ಧರ್ಮಾಧಿಕರಣರ್ ತಮ್ಮೊಳಿಂತೆಂದರ್:—

ಪುರುಷೋತ್ತಮನಾದರದಿಂ । [೫
ಪರೋಪಕಾರಾರ್ಥಮಿತ್ತನಾತ್ಮೀಯಕಳೇ ॥
ಬರಮಂ ಸುತರಕ್ಷಾರ್ಥಂ ।
ಶರೀರಮಂ ಜನಕನೀವುದಾವುದು ಚೋದ್ಯಂ ॥ 250

ಎಂದು ಸಭಾಸದರ್ ಪರೆದೆರ್ದು ಪೋದರ್. ಅದಱಿಂ,

ಶ್ಲೋ॥ "ದುಷ್ಟಬುದ್ಧೇಸ್ಸುಬುದ್ಧೇಶ್ಚ ದ್ವಯೋರ್ಥರ್ಮಸ್ಯ ಸಂಶಯಾತ್ । [೧೦
ಪುತ್ರ[1]ಸ್ಯಾಪ್ಯ[1]ತಿಪಾಂಡಿತ್ಯಾತ್ ಪಿತಾ ಧೂಮೇನ ಮಾರಿತಃ ॥" ೧೧

[ಟೀಕು— ದುಷ್ಟಬುದ್ಧಿಯುಂ ಸುಬುದ್ಧಿಯುಮೆಂಬಿರ್ವರೊಳಗೆ ದುಷ್ಟಬುದ್ಧಿ ದುರ್ಬುದ್ಧಿಯಿಂ ತನ್ನ ತಂದೆ ಹೊಗೆಯಿಂದಂ ಮರಣನೈದಿದನು.] [೧೨

ಎಂಬ ಕಥೆಯಂತೆ ನಿನ್ನ ಪಾಂಡಿತ್ಯದಿಂ ಪತಿಗಿನಿತನರ್ಥಮಾದುದು. "ತಮ್ಮಡಿಗೆ ಮೊಱೆವ ಶ್ವಾನಂ [2]ದಮ್ಮಿ[2]ಯನೇಕೆ ಬಾಲಿಲಿತ್ತಪುದು." ಎಂಬಂತೆ ನೀನುಱಿದರಂ ಬಾಲುಂ ಬರ್ದುಂಕಲೇಕಿತ್ತಪೆಯೆನೆ; ದಮನಕನಿಂತೆಂದಂ:— ಎನ್ನಿಂ ಸಿಂಗಂ ಕೊಂದೊಡೆ ನಿನಗಾವುದು ಭಯಂ ಬಂದಪ್ಪುದೆನೆ; ಮತ್ತಂ ಕರಟಕನಿಂತೆಂದಂ:— [೧೮

ಶ್ಲೋ॥ "ದಾಸೀಮೇಷವಿರುದ್ಧೇನ ವಾನರಾಃ ಪ್ರಳಯಂಗತಾಃ ॥"

ಎಂಬ ಕಥೆಯಂ ನಿನಗೆ ಪೇೞ್ದಪೆಂ, ಕೇಳೆಂದಿಂತೆಂದಂ:—

೨೭. ತಗರಿನ ಮತ್ತು ತೊತ್ತಿನ ಕಲಹದಿಂದ ಕಪಿಗಳು ಕೆಟ್ಟ ಕಥೆ.

ಸಗರಪುರಮೆಂಬ [3]ಪುರ[3]ದೊಳ್ । [೨೦
ಸಗರಾನ್ವಯದರಸನಧಿಕವಿಭವಂ ಪೆಸರಿಂ ॥

1. ಸ್ಯಚಾ. ಖ ॥ 2. ಮರ್ಮ. ಕ ॥ ; ಧರ್ಮ. ಗ ॥ 3. ಪೊಟ. ಗ ॥

ಸಗರಂ ತಗರಂ ಪೋರಿಪ |
ಬಗೆಯಿಂ ತಗರಂ ವಿನೋದದಿಂದಂ ಪೊರೆದಂ || 251

ಅಂತಾತಂ ಪಲವುಂ ತಗರನಾಳ್ದು ಮಾಡದೊಳಂ [1]ಮಂದುರ[1]ದೊಳಂ [2]ಕಟ್ಟಿಸಿದೊಡೊ[2]ರ್ವ ಸೊರ್ಕಿದ ತೊಱ್ಱು ತೊಱ್ಱುಗೆಲಸಕ್ಕ ರಮನೆಯುಂ ಪುಗುವ ಪೊಱಮಡುವ ಸೂೞುೞೆಲ್ಲಂ ಬಂದು ತಗರಂ ಬಗೆಯದೆ ಬಡಿಯುತ್ತುಮಿರ್ಪುದುಮೊಂದು ದಿವಸಮಾತೊಱ್ಱು ತನಗೆ ಪಕ್ಕಾಗಿ ಬಂದು ಮುಂದೆ ನಿಲೆ; ಸಂಜಾತರೋಷಂ ಮೇಷಂ ಮುಳಿದು ಕೆಡೆಯೆ ಪಾಯ್ದೊಡವಳ್ ಕಡುಮುಳಿದು ಪಿರಿಯದೊಂದುರಿವ ಕೊಳ್ಳಿಯಂ ತಂದಾತಗರಂ ಪೊಯ್ಯಲೊಡನದಱ [3]ಮೆಯ್ಯನುರಿ[3] ಪತ್ತಲ್ ಕಟ್ಟಿದ ನೇಣಂ ಪಱಿಯೆ ಪಾಯ್ದಾತಗರ್ ಪರಿದು ಕುದುರೆಯ ಮಂದುರಮಂ ಮಾರಿ ಪುಗುವಂತೆ ಪೊಕ್ಕು ಚರಣಿಯ ಪುಲ್ಲೊಳ್ ಪೊರಳಲೊಡಮಾಪುಲ್ಲು ಪೊತ್ತಿ ಪೊಗೆದುರಿದು ಮಂದುರಮಂ ಪೊತ್ತಿದೊಡಲ್ಲಿಯ ರೆಬೆಂದ ತುರಗಂಗಳನರಸಂ ಕಂಡು ಅಶ್ವವೈದ್ಯರಂ ಕರೆದಿವರ್ಕೆ ತಕ್ಕ ಚಿಕಿತ್ಸೆಯುಂ ಪೇೞಿಮೆನೆ; ವೈದ್ಯರಿದರ್ಕೆ ಮರ್ಕಟಂಗಳ ನೆಣನುಂ ನೆತ್ತರುಂ ಮರ್ದೆಂದೊಡರಸ[4]ನ ಬೆಸದೊಳ್[4] ಪುರಜನಮುಂ ಪರಿಜನಮುಂ ಪರಿತಂದು ತರುಚರಂಗಳಂ ನಿರವಶೇಷಂಗಳಂ ಮಾಡಿ ಕೊಂದರ್.

ಅದಱಿಂ, [೧೭

ಶ್ಲೋ|| "ದಾಸೀಮೇಷವಿರುದ್ಧೇನ ವಾನರಾಃ ಪ್ರಳಯಂಗತಾಃ |
ತಸ್ಮಾತ್ಕಲಹಸಂಕೀರ್ಣಂ ದೂರತಃ ಪರಿವರ್ಜಯೇತ್ ||" ೧೮೦

ಎಂದು, ಮತ್ತಂ,

ಟ—೧೮೦. ತಗರ ಮತ್ತೆ ತೊತ್ತಿನ ಕಲಹದಿಂ ಕಪಿಗಳ್ ಕೆಟ್ಟುವು; ಅದಱಿಂ ಕಲಹಶೀಲನಂ ದೂರದೊಳಿರಿಸವೇೞ್ಕುಂ.

ಪಾ—1. ಮಂದಿರ. ಕ || 2. ಕಟ್ಟಿಸುತ್ತಿರಲೊ. ಕ || 3. ಮೆಯ್ಯೊಳುರಿ. ಗ || 4. ಸಂ ಬೆಸಸಲ್. ಗ ||

ಕಲಹಸ್ಥಾನಂಗಳೊಳಂ ।
ಕಲಹಪ್ರಿಯರಪ್ಪ ನರರ ಸಂವಾದ[1]ದೊಳಂ[1] ॥
ನೆಲಸಿದ ಸಾಧುಜನಾಳಿಗೆ ।
ಪಲತೆಱದಿನಪಾಯಮಕ್ಕುಮೆಂತುಂ ತುದಿಯೊಳ್ ॥ 252

ಅದಱಿಂ ಕಲಹಕ್ಕೆ ಕಾರಣಮಿಲ್ಲದ ಪರಮಮಿತ್ರನಂ ಭೇದಿಸಿ ಕಾದಿಸಿದ ಕಲಹಪ್ರಿಯಂ ನೀಂ; ನಿನ್ನ ಸಮೀಪದೊಳನ್ನಿರಲಾಗದೆಂದು ಕರಟಕಂ ದವನಕನನಗಲ್ದು ಪೋದಂ. [೭

ಅನ್ನೆಗಮಿತ್ತಲ್ ತಾರಪರ್ವತದ ತಪ್ಪಲೊಳ್ ಬಿಟ್ಟಿರ್ದ [2]ಗಂಡ[2] ನಗಮಂ ಪೋಲ್ತಿರ್ದ ಗೋಪತಿಯಂ ಮೃಗಾಧಿಪತಿ ನೋಡಿ ಕರುಣಾ ರಸಾರ್ದ್ರಹೃದಯನಾಗಿ ಮನಂ ಮಿಕ್ಕು ಖಿನ್ನ[3]ನಾಗಿರ್ದ[3] ಪಿಂಗಳ ಕನಲ್ಲಿಗೆ ದವನಕಂ ಬಂದು — ದೇವಾ! ನೀಮಿಾದ್ರೋಹನ ಮುಂದೆ ನಿಂದಿರ್ದೇನೆಂದು ಚಿಂತಿಸುತಿರ್ದಪಿರೆನೆ; ಪಿಂಗಳಕಂ ಕಡುಮುಳಿ ದೆಲೆ [4]ಪಾತಕ[4]! ಮುನ್ನಂ ನಿನ್ನ ಪ್ರೇರಣೆಯಿಂದೀಪಶುವಂ ಕೊಂದು ದುರ್ಗತಿಯಂ ಮಾಡಿಕೊಂಡೆಂ, ಇನ್ನಾಂ ನಿನಗೆ ಮುಳಿದೊಡೆನ್ನ ಜಸಂ ಮಸುಳ್ಸುಗುಮುಸಿರದೆ ಪೋಗು, ಮೇಲಪ್ಪುದಂ ನಾನೆ ಬಲ್ಲೆನೆನೆ; ನರಿ ಹರಿಯ ಪರುಷಾಕಾರದ ಪುರಳನಱಿವುದಪ್ಪುದಱಿಂ ಶಂಕಿಸದೆ ಮತ್ತಮಿಂತೆಂದುದು:— ದೇವಾ! ನೀನೆನ್ನನೇಗೆಯ್ದೊಡಮಕ್ಕುಂ, ಸಿಂಹ ದೊಡನೆಯ್ದಿ ಪೋದುದೆಂಬುದಂ ಕಥೆಗಳೊಳಪ್ಪೊಡಂ ಕೇಳ್ದುದಿಲ್ಲ, ಸಂಜೀವಕಂ ನಿನ್ನ ಮುನ್ನಿನ ಭವದ ಪಗೆ ಪಶುವಾಗಿ ಪುಟ್ಟಿ, [೧೯

ಶ್ಲೋ॥ „ ಖಾದೇ ಹಾಸ್ಯೇನ್ನಪಾನಾದೌ ಶತ್ರುಣಾ ಸಹ ಭೋಜನಂ ।
ಸಂಬಂಧಮಪಿ ಕುರ್ವೀತ ತತ್ರ ವೈರಮನುಸ್ಮರೇತ್ ॥'' ೧೪೧

ಪಾ—1. ಗಳಿಂ. ಗ ॥ 2. ಗಂಧ. ಗ ॥
3. ಭಿನ್ನಮಾರ್ಗದೊಳಿರ್ದ. ಖ ॥ 4. ಪಾಪಾತ್ಮ. ಗ ॥

[ಟೀಕು— ಮೆಲ್ಲುವಲ್ಲಿ, ನಗುವಲ್ಲಿ, ಅನ್ನಪಾನಾದಿಕಂಗಳಲ್ಲಿ, ನುಡಿವಲ್ಲಿ, ವಿರೋಧಿಗಳ ಸಹಭೋಜನವನೂ ಸಂಬಂಧವನಾದರೂ ಮಾಡುವದು; ಅಲ್ಲಿ ತನ್ನ ವೈರವಂ ನೆನೆವುದು.]

ಎಂಬುದಂ ಬಗೆದು ನಿಮ್ಮೊಳ್ ಕೊರ್ಬಿ [1]ಕೋ[1]ಡಿಟ್ಟು ಮೇಲ್ವಾಯ್ದು ಸತ್ತುದು. ನೀನುಂ ನಿನ್ನಾಯುಷ್ಯಬಲದಿಂ ಬರ್ದು*ಂಕಿದೆ. ಇಂತಪ್ಪ ಪಗೆಯಂ ಕೊಂದು ಸಂತೋಷಂಬಡುವದಲ್ಲದೆ ಚಿಂತೆಗೆಯಲ್ವೇಡೆನೆ—ಮತ್ತಂ ಪಿಂಗಳಕನಿಂತೆಂದಂ:—ಸಂಜೀವಕನೆನಗೆ ತಪ್ಪಿದೊಡಾಂ ಸೈರಿಸುವುದೆ ಧರ್ಮಮದಲ್ಲದಾನದರ್ಕೆ ತಪ್ಪುವುದೆಂ[2]ತುಂ[2] ಧರ್ಮಮಲ್ಲದೆಂತೆನೆ:— [೮

ಶ್ಲೋ|| “ ಅಪಶ್ಯ ಲಕ್ಷ್ಮೀಹರಣಾರ್ಥವೈರತಾ |
ಮಚಿಂತಯಿತ್ವಾ ಚ ತದದ್ರಿಮರ್ದನಂ ||
ದದೌ ನಿವಾಸಂ ಹರಯೇ ಮಹೋದಧಿ |
ರ್ಮಹತ್ಸರಾ ಧೀರಧಿಯಾಂ ಹಿ ವೃತ್ತಯಃ || ” ೧೬ [೧೦

[ಟೀಕು— ಮಂದರಾಚಲದಿಂ ನೋಯೆ ಕಡೆದೊಡಂ ಅಲ್ಲಿ ಹುಟ್ಟಿದಂತಪ್ಪ ಲಕ್ಷ್ಮಿಯಂ ಕೊಂಡೊಡಂ ವಾರಿಧಿ ಹರಿಯಿರಲ್ಕೆಡೆಗೊಟ್ಟುದಲ್ಲದೆ ವೈರವಂ ನೆನೆದುದಿಲ್ಲ. ಅದು ಕಾರಣವಾಗಿ ಹಿರಿಯರ ನೆಗಲ್ತಿಗಳವೆಂದುಂ ದೋಷವನ್ನೈದುವುವಲ್ಲ] [೧೫

ಎಂಬುದು ಮಹಾಸತ್ಪುರುಷರ ಚರಿತಂ. ಇಂತಪ್ಪುದನಾಂ ಬಗೆಯದೆ ಸಂಜೀವಕನಂ ಕೊಂದೀಜಗದೊಳ್ ನಿಂದಿಸಿಕೊಂಡೆಂ. [3]ಇನ್ನಿದಾದು[3]ದನಪ್ಪೆಂ. ಆಗಲಾಱದ ಪಕ್ಷಂ ಮುಮುಕ್ಷುವೃತ್ತಿಯೊಳಿರ್ಪೆನೆನೆ—ದವನಕನಿಂತೆಂದಂ:—ದೇವಾ! ನೀವೊರ್ಬರಲ್ಲಿದು; ಮುನ್ನಂ ರಾಜತನೂಜನಪ್ಪಂ ಯುಧಿಷ್ಠಿರಂ ಮೊದಲಾಗಿ ಸೋದರರಂ ದಾಯಾದರೆಂದು ಕೊಂದು ಬೞಿಕ್ಕೆ ವೈರಾಗ್ಯಂ ಪುಟ್ಟೆ ರಾಜ್ಯಂಗೆಯ್ಯಲೊಲ್ಲದಿರೆ, ಗುರುಜನಮುಂ ಬಂಧುಜನಮುಮಾತನಂ ತಿಳಿಪಿ ರಾಜ್ಯಂಗೆಯಿಸಿದರದಱಿಂ

ಪಾ—1. ಕೋ. ಗ || ಖ || 2. ದುಂ. ಗ || 3. ಇನ್ನಿದಱಿಂದು. ಕ || ಗ ||

ದೇವಾ! ನೀವೀಪಶ್ಚಾತ್ತಾಪಮಂ ಮಾಣ್ದು ನಿಶ್ಚಿಂತರಾಗಿರ್ಪುದೆನೆ; ಪಿಂಗಳಕನಲ್ಲಿಂ ತಳರ್ದು ಮತ್ತಮೊಂದು ರಮ್ಯಪ್ರದೇಶಕ್ಕೆ ಪೋಗಿ

ಭ್ರಾಜಿಷ್ಣು ಸಮದಸಾಮಜ।
ರಾಜಿಶಿರಃಪೀಠದಳನದಕ್ಷಂ ರಾಜ॥
ತ್ರೇಜೋನಿಧಿ ಬಲದೊಳ್ ಮೃಗ। [ಸ
ರಾಜಂ ಸುಖಸಂಕಥಾವಿನೋದದೊಳಿರ್ದಂ॥ 253

ಕಾದಿ ಗೆಲಲ್ಕಸಾಧ್ಯರೆನೆ ಸಂದ ಸರಿತ್ಸುತಕುಂಭಜರ್ಕಳಂ।
ಭೇದಿಸಿ ಕಾದಿ ಗೆಲ್ದನಧಿಕಂ ಯಮನಂದನನೆಂದೊಡೊಂದೆ ಸಾ॥
ಮಾದಿನಯಂಗಳೊಳ್ ಸುನಯಸಾಧನಮಪ್ಪುದು ಭೇದಮಂತದಂ। [ಳ
ಭೇದಿಸಿ ದುರ್ಗಸಿಂಹಮತದಿಂದಮೆ ಗೆಲ್ಗೆ ವಿರೋಧಿವರ್ಗಮಂ॥ 254

ಉದಯೋತ್ತುಂಗನಗಸ್ವಭಾವದಿನಪಂ ಪ್ರೋದ್ದಾಮಧರ್ಮಕ್ಷಮಾ।
ಜದ ಬೇರ್ ಸ್ವಾಮಿಹಿತೌಘನಿರ್ಮಲಮಹಾರತ್ನಾಕರಂ ನೀತಿಶಾ॥
ಸ್ತ್ರದ ಮಂತ್ರಕ್ಕಧಿದೈವತಂ ದ್ವಿಜಕುಲಶ್ರೀಕೇಳಿಸಂವಾಸಮೆಂ।
ಬುದು ಸರ್ವೋರ್ವರೆ ಧರ್ಮನಿರ್ಮಲಯಶಸ್ಸದ್ವರ್ಗನಂ[1] ದುರ್ಗನಂ॥

॥ ಗದ್ಯಂ ॥

ಇದು ವಿನಮದಮರರಾಜಮೌಳಿಮಾಣಿಕ್ಯಮರೀಚಿಮಂಜರೀಪುಂಜರಂಜಿತ
ಭಗವದ್ಭವಾನೀವಲ್ಲಭಚರಣಸರಸಿರುಹಷಟ್ಚರಣಂ
ಶ್ರೀಮನ್ಮಹಾಸಂಧಿವಿಗ್ರಹಿ ದುರ್ಗಸಿಂಹ ವಿರಚಿತಮಪ್ಪ
ಪಂಚತಂತ್ರದೊಳ್
ಭೇದಪ್ರಕರಣವರ್ಣನಂ

ಪ್ರಥಮಂ ತಂತ್ರಂ ಸಮಾಪ್ತಂ.

---

ಪಾ—1. ಸಂಸರ್ಗನಂ. ಗ॥

# ದ್ವಿತೀಯತಂತ್ರಂ.

ಶ್ರೀಗಂ ವಿಶುದ್ಧಕೀರ್ತಿ।
ಶ್ರೀಗಂ ನೆಲೆಯಪ್ಪೆನೆಂಬ ಮಹಿಪತಿ ರಭಸೋ॥
[1]ದ್ಯೋ[1]ಗಮನುೞಿದು ಪರೀಕ್ಷಕ। [೯
ನಾಗಲ್ವೇೞ್ಪುದು ಸಮಸ್ತಕಾರ್ಯಂಗಳೊಳಂ॥ 256

ವಿಪುಳನಯಶಾಸ್ತ್ರಪಾರಾ।
ಶಿಪಾರಗಂ ಸುಕವಿ ಸಂಧಿವಿಗ್ರಹಿ ದುರ್ಗಂ॥
ನೃಪಹಿತಮಂ ಪೇೞ್ಗುಂ ಸಲೆ।
ಸುಪರೀಕ್ಷಾತಂತ್ರಮಂ ಜಗಜ್ಜನವಿನುತಂ॥257 [೧೦

ಶ್ಲೋ॥ “ಯೋಽರ್ಥ[2]ತತ್ತ್ವಮ[2]ವಿಜ್ಞಾಯ ವಶಂ ಕ್ರೋಧಸ್ಯ ಗಚ್ಛತಿ।
ಸೋಽಚಿರಾದ್ಭ್ರಂಶಯೇನ್ಮಿತ್ರಂ ಬ್ರಾಹ್ಮಣೋ ನಕುಲಂ ಯಥಾ॥” ೧೪

[ಟೀಕು— ಆವನಾನೊರ್ವಂ ಕಾರ್ಯದ ನಿಜವನಱಿಯದೆ ಕೋಪಿಸಿಹಂ, ಆವಂ ಬೇಗದಿಂ ಮಿತ್ರನಂ ಕಿಡಿಸುವಂ; ಅದೆಹೆಗೆಂದೊಡೆ— ಬ್ರಾಹ್ಮಣಂ ಮುಂಗುರಿಯಂ ಕಿಡಿಸಿದಹಗೆ] [೧೧

## ಬ್ರಾಹ್ಮಣಂ ಮುಂಗುರಿಯಂ ಕೊಂದ ಕಥೆ.

ಆಕಥಾಪ್ರಪಂಚಮೆಂತೆನೆ:—

ಭೂಭುವನವಿನುತಮಿಂದ್ರಪು।
ರಾಭಂ ಮಣಿಮಾಟಕೂಟ[3]ಕಾನಕಭವನ[3]॥
ವ್ಯಾಭಾಸಿತರತ್ನಚಯಂ।
ಶೋಭಾವತಿಯೆಂಬ ಪುರವರಂ ರಂಜಿಸುಗುಂ॥ 258

---

ಪಾ—1. ದ್ವೈ. ಗ॥ 2. ತಂತ್ರಮ. ಗ॥ 3. ಹಾಟಕನಿವಹ. ಗ॥

ಅನಿಲಾಂದೋಳಿತಚಿತ್ರಕೇತುನಿವಹವ್ಯಾಭಾಸಿತೋದಗ್ರದೇ ।
ವನಿವಾಸಾಳಿಯಿನುದ್ಘಶಾಳಿವನದಿಂ ಸರ್ವರ್ತುಕೋದ್ಯಾನನಂ ॥
ದನದಿಂ ಸೌಂದರಸೌಂದರೀನಿವಹದಿಂದಂಭೋಜಷಂಡಂಗಳಿಂ ।
ತನಗನ್ವರ್ಥಮೆನಿಪ್ಪುದಾಪುರವರಂ ಶೋಭಾವತೀನಾಮದಿಂ ॥ 259

ವ॥ ಅಂತಪ್ಪ ಪುರದೊಳ್ ನಿರಂತರಂ ವೇದಾಧ್ಯಯನತತ್ಪರನುಮಜಸ್ರಸ್ರುಕ್[1]ಸಂದರ್ಭಪವಿತ್ರ[1]ಸಂವಾಹನಪವಿತ್ರಿತಪಾಣಿಪಲ್ಲವನುಂ, ಪುರೋಡಾಶಭೋಜನಪವಿತ್ರೀಕೃತಗಾತ್ರನುಂ, ಯಜನಾದಿಷಟ್ಕರ್ಮನಿರತನುಂ, ಆಹಿತಾಗ್ನಿಯುಮಪ್ಪ ದೇವಶರ್ಮನೆಂಬ ಪಾರ್ವನಿರ್ಪಂ. ಆತನ ಸತಿ[2]ಪರಮಪತಿವ್ರತಾಗುಣವಿಶುದ್ಧಚಿತ್ತೆ[2] ಯಜ್ಞದತ್ತೆಯೆಂಬಳ್. ಆಕೆಗೆ ಋತುಕಾಲಪ್ರಾಪ್ತಿಯಿಂ ಗರ್ಭಮಾಗೆ ಕೆಲವು ದಿವಸದಿಂ,

ಬಿಸರುಹನೇತ್ರೆಯೊಳ್ನಡು ಪೊದಟ್ಬಿದು ದಾಂಗುಡಿಯಿಟ್ಟು ಬಾಸೆ ನೀ।
ಳ್ದೆಸೆದುದು ಪಿಂಗಿ[3]ಪೋದುದು ವಳಿತ್ರಿತಯಂ ಕುಚಚೂಚುಕಂಗಳೊಳ್॥
ಪಸರಿಸಿ ಕರ್ಪು ಪರ್ಬಿದುದು ಮಂದರಯಾನಮೊಡರ್ಚಿತಾನನಂ।
ಮಿಸುಗೆಬೆಳರ್ತುಪೂರ್ಣಶಶಿಕಾಂತಿಯನಾಂತುದುಗರ್ಭದೇಬಿಗೆಯೊಳ್॥

ವ॥ ಅಂತು ತೋಱಿದ ಗರ್ಭಚಿಹ್ನಮುಂ ಕಂಡು ದೇವಶರ್ಮಂ ನಿಧಿಗಂಡ ನಿರ್ಧನನಂತೆ ರಾಗಿಸಿ ನಿಜಸತಿ[4]ಯಪ್ಪಂತರ್ವತ್ನಿಯುಂ ಕರೆದಿಂ[4]ತೆಂದಂ:—ಎಮಗೆ ಮನೋರಥಸಿದ್ಧಿಯಾಗಲ್ ಬಗೆದಪ್ಪುದದೇಕೆಂದೊಡೆ, ನಿನ್ನ ಗರ್ಭದೊಳ್ ಗಂಡುಗೂಸು ಪುಟ್ಟಿದಪುದು; ನಾವಾಸುತಂಗೆ ಜಾತಕರ್ಮನಾಮಕರಣಾನ್ನಪ್ರಾಶನಚೌಲೋಪನಯನಾದಿಕ್ರಿಯೆಗಳಂ ಮಾಡಿ ಬಱಿಕ್ಕ ವೇದಶಾಸ್ತ್ರಕಾವ್ಯನಾಟಕಪುರಾಣಂಗಳನೋದಿಸುವಮೆಂದೊಡಾಮಹಾಸತಿ ನಿಜಪತಿಯಂ ಮಾರ್ಕೊಂಡಿಂತೆಂದಳ್:—

ಪಾ— 1. ಗ॥ ಇಲ್ಲ. 2. ಪತಿವ್ರತಾಗುಣವಿಶುದ್ಧೆ. ಗ॥
3. ಪೊಂಗಿ. ಕ॥ ಗ॥ 4. ಗ. ಖ॥

ಶ್ಲೋ|| "ಆಯುರ್ಜ್ಞಾನೇ ವಯೋಜ್ಞಾನೇ ಗರ್ಭಿಣೀಗರ್ಭಸಂಭವೇ |
ಮುನಯೋಪಿ [1]ವಿ[1]ಮುಹ್ಯಂತಿ ಕಿಂ ಪುನರ್ಮಾಂಸಚಕ್ಷುಷಃ ||" ೧೪೪

[ಟೀಕು—ಆಯುಷ್ಯಮನಱಿವಲ್ಲಿ ವಯಸ್ಸನಱಿವಲ್ಲಿ ಗರ್ಭಿಣಿಯರ ಗರ್ಭದ ನೆಲೆಯಲ್ಲಿ ಋಷಿಯರುಂ ನಿಶ್ಚೈಸಲಱಿಯರು; ಮತ್ತಿನ ಜಡರುಗಳೆಂತುಂ ತಪ್ಪರೆನಲಾಗದು] [೫

ಅದೆಂತೆಂದೊಡೆ —

ಶ್ಲೋ|| "ಅನಾಗತ[2]ವತೀಂ[2] ಚಿಂತಾಂ ಯೋ ನರಃ ಕರ್ತುಮಿಚ್ಛತಿ |
ಸತತಂ ಪಾಂಡುರಾಂಗಸ್ಸ್ಯಾತ್ ನಾಗಶರ್ಮ ಪಿತಾ [3]ಯಥಾ[3] ||" ೧೪೫

[ಟೀಕು—ಆವನಾನೊರ್ವ ಮನುಷ್ಯನು ಮುಂದೆ ಬಹಂಥದನು ಚಿಂತಿಸಿ ಮಾಡಲುದ್ಯೋಗಿಸಿಹನು, ಅವನನುದಿನವು ಪಾಂಡುರಾಂಗನಹನು; ಅದೆಹೆಗೆಂದೊಡೆ—ನಾಗಶರ್ಮನ ತಂದೆಯಹಗೆ.] [೧೦

ಎಂದಿಂತನಾಗತಮಂ ಚಿಂತಿಸುವುದು ಲೋಕಾಪಹಾಸ್ಯಕ್ಕೆಡೆಯಪ್ಪುದದೆಂತೆನೆ:—

ಶ್ಲೋ|| "ಅನಾಗತಾರ್ಥಮುತ್ಪ್ರೇಕ್ಷ್ಯ ಯಸ್ಯಾರಂಭೋ ವಿಜೃಂಭತೇ |
ಲೋಕೇ ಹಾಸ್ಯಮವಾಪ್ನೋತಿ ಸೋಮಶರ್ಮಪಿತಾ [4]ಯಥಾ[4] ||" ೧೪೬

[ಟೀಕು— ಮುಂದಹಂತಹ ಕಾರ್ಯವನಪೇಕ್ಷಿಸಿ ಆವನಾನೊರ್ವನಾರಂಭವು ಹೆಚ್ಚುತಿರ್ದಹುದು; ಅದು ಲೋಕದಲ್ಲಿ ಹಾಸ್ಯಕ್ಕೊಳಗಹುದು. ಅದೆಂತೆಂದೊಡೆ—ಸೋಮಶರ್ಮನ ತಂದೆಯಂತೆ.] [೧೫

ಆಪಾರ್ವನದೆಂತೆನೆ—ಪಾರ್ವತಿ ಪೇೞ್ಗುಂ:—

## ೧. ಸೋಮಶರ್ಮನ ತಂದೆಯ ಕಥೆ.

ಧರ್ಮವತಿಯೆಂಬ ಪುರದೊಳ್ ನಾಗಶರ್ಮನೆಂಬ ಪಾರ್ವಂ ತನಗೆ ಯಾಚಕವೃತ್ತಿಯೆ ವೃತ್ತಿಯಾಗಿರ್ದು ಪಲವುದಿವಸಕ್ಕೊಂದು ಕೊಡಂ ತೀವಿದ ಸತ್ತುಗದ ಪುಡಿಯಂ ಪಡೆದು ಆಕೊಡನಂ ತನ್ನ ಪಟ್ಟೆರ್ಡೆಯೊಳ್ ಕಟ್ಟಿ[5]ನೇಲ್ದಿಟ್ಟು[5] ಮಾಹಳದ ಪಕ್ಷದೊಳೊಂದು ದಿವಸಂ

ಇಂಬಾಗಿರೆ ಮುದದಿಂ ಪಲ|
ವುಂ ಬಣ್ಣದ ಭಕ್ಷ್ಯರಾಶಿವೆರಸಾ[6]ಕಂಡೋ[6] ||

ಪಾ—1. ಹಿ. ಖ || ; ನ. ಗ || 2. ಮತಿಂ. ಗ || 3. ಯುವಾ. ಗ || 4. ಇವ. ಗ || 5. ನೇಱಿಟ್ಟು. ಕ || ಖ || 6. ಸಂತು. ಗ ||

ಷ್ಠಂಬರಮುಂಡೊಯ್ಯನೆ ಪಾ।
ರ್ವಂಬಂದಾ ಕೊಡನ ಕೆಳಗೆ ಪಟ್ಟಿರ್ದಾಗಳ್ ‖ 261

ಆನಾಗಶರ್ಮಂ ರಾಗಿಸಿ ಮೇಗಂ ನೋಡಿ ತನ್ನೊಡನೆಯ ಬಡ ಪಾರ್ವಂಗಿಂತೆಂದಂ:— ಧಾನ್ಯಮನರ್ಘವಾದ ಕಾಲದೊಳೀಕೊಡಂ ತೀವಿದ ಸತ್ತುಗದ ಪುಡಿಯುಂ ಪತ್ತು ಪಣವಿಂಗೆ ಮಾಱಿ ಪತ್ತಾಡಂ ಕೊಳ್ವೆಂ. ಅವು ವರುಷಕ್ಕಿರ್ಮೆ ಮಱಿಯುಂ ಪಡೆವುವು. ಪ್ರಸವಪರಿವರ್ತನದಿಂ ಪಲವಾಡಕ್ಕುಂ. ಆದೊಡವಂ ಕೊಟ್ಟು ಪಯ[1]ನಾವಂ[1] ಕೊಳ್ವೆಂ. ಅವರ್ಕೆ ಪುಟ್ಟಿದ ಪೋರಿಗಳಂ ತಿರ್ದಿಯಾರಂಬಂಗೆಯ್ದು ಸಮಸ್ತಧಾನ್ಯಮಂ ಸಮ್ಪೂರ್ಣವಾಗಿ ಬೆಳೆದು ಆಧಾನ್ಯಮಂ ಮಾಱಿ ಪೊನ್ನಂ ಪಡೆದು ಈಪೊಲಿಲೊಳ್ ಸುಪ್ರದೇಶಮಪ್ಪ ಸ್ಥಾನದೊಳ್ ಸುಧಾಧವಳತಮಪ್ಪ ಧವಳಾಗಾರಂ [2]ಗೋಷ್ಠಾ[2]ಗಾರಂ ಮೊದಲಾಗಿ ಪಲವುಂ ಶೋಭಾವಹಂಗಳಪ್ಪ ಗೃಹಂಗಳಂ ಮಾಡಿಸಿ ಧನಕನಕಸಮೃದ್ಧಿಯಿಂ ತನಗೆ ವಜ್ರದ ಕುಂಡಲಮಂ ವಜ್ರಧಾರೆಯ ಚೆನ್ನ ಸರಪಳಿಯುಮಂ ನವಗ್ರಹದ ವಿಚಿತ್ರಕಂಕಣಮುಮಂ ನವರತ್ನದುಂಗುರಂಗಳುಮಂ ಮಾಡಿಸಿಕೊಂಡು ಪಟ್ಟಾವಳಿಯನುಟ್ಟುಕೊಂಡರಸುಮಗನಂ ಪೋಲ್ತು ಪುರಜನಂಗಳ್ಗೆಲ್ಲಂ ಪಿರಿಯನಾಗಿರ್ಪೆನ್ನಂ ಕಂಡೊರ್ವಂ ಕುಲಮುಂ ಶೀಲಮುಂ ಪೆಂಪುಂ ಬಿಣ್ಪುಂ ಪುಣ್ಯಮುಳ್ಳಾತಂ ತನ್ನ ಮಗಳ್ ಚೆನ್ನೆಯಪ್ಪ ಕನ್ನೆಯಂ ಕುಡೆ ಮದುವೆಯಂ ಮಾಡಿಕೊಂಡು ಇಷ್ಟವಿಷಯಕಾಮಭೋಗಂಗಳನನುಭವಿಸುತಿರ್ಪುದುಂ; ಕೆಲದಿವಸಕ್ಕಾಕೆಗೆ ಗರ್ಭಮಾಗೆ ಗರ್ಭಚಿಹ್ನಂಗಳನಾಂ ಕಂಡು ಬಲ್ಲ ಜೋಯಿಸನಂ ಕರೆಯಿಸಿ— ಎನ್ನ ಪೆಂಡತಿಯೇನಂ ಪಡೆವಳೆಂದು ಬೆಸಗೊಂಡೊಡೆ, ಗಂಡು[3]ಗೂಸಂ ಪಡೆವಳೆಂದು[3] ಪೇೞ್ದೊಡೆ, ಕೇಳ್ದಾಭಟ್ಟಂಗೆ ಮೆಚ್ಚು

ಪಾ—1. ನಾಕಳಂ. ಕ ‖ ಗ ‖ 2. ಶ್ರೇಷ್ಠಾ. ಖ ‖
3. ಗೂಸುಪುಟ್ಟದಪುದೆಂದು. ಕ ‖ ; ಮಗಂಪುಟ್ಟದಪನೆಂದು. ಖ ‖

ಗೊಟ್ಟು ಬೞಿಕ್ಕಾಕೆಯ ಸೀಮಂತವಮಂ ಸಂಭ್ರಮದಿಂ ಮಾಡಿ ಶೋಭನಕ್ರಿಯೆಗಳೊ[1]ಳ್ಸಿತ್ತಾಗೆ[1] ಪುರಜನಂಗಳಂ ಬಂಧುಜನಂಗಳು ಮನಾಮಂತ್ರಿಸಿ ತುಪ್ಪದ ತೊಱೆಗಳ್ ಪರಿವನ್ನಂ ಪಿರಿದಪ್ಪ ಭಕ್ಷ್ಯ ಭೋಜ್ಯಂಗಳಂ ಭೋಜನಂಗಳಂ ಮಾಡಿಸಿ ತದನಂತರಂ ನವಮಾಸಂ ನೆಱೆವುದುಮೆನ್ನ ಪೆಂಡತಿ ಗಂಡುಮಗನಂ [2]ಪೆಱೆ[2]ಲೊಡಮಪ್ಪಶೋ ಭೆಯಂ ಮಾಡಿಸಿ ಮಹಾದಾನಂಗೆಯ್ದಾಶಿಶುವಿಂಗೆ ಜಾತಕರ್ಮಮಂ ಸೋಮಶರ್ಮನೆಂಬ ನಾಮಕರಣಮುಂ ಅನ್ನಪ್ರಾಶನಮುಂ ಕ್ರಮದಿಂ ಮಾಡಿ ಸುಖದಿನಿರ್ಪುದುಮಾಬಾಲಕಂ ಬಾಲದುಡಿಗೆಗಳಂ ತೊಟ್ಟು ನಡೆಗಲ್ತೊಂದು ದಿವಸಂ[3]ಗೋವ್ರಜಂಗಳೊಳ್[3] ಸೋಂಕುವುದನಾಂ ಕಂಡೆಲೆತೊತ್ತೇ! [4]ಮಗನ[4] ನೀಪ್ರೊತ್ತಿನೊಳ್[6] ಪರಿಯಬಿಟ್ಟೆಯೆಂದು

ಮುನಿದಿರದೆ ಪರಿದು ಪಿರಿದೊಂ। [೧೧
ದೊನಕೆಯೊಳಾನವಳ ತಲೆಯನೀತೆಱದಿಂ ಪೊ॥
ಯ್ವೆನುತೆತ್ತಿ ಯಷ್ಟಿಯಂ ಕೊಂ।
ಡೆನಸುಂ [5]ಪ್ರೊಯ್ದಂ[5] ಕಡಂಗಿ ಸತ್ವದ ಕೊಡನಂ॥ 262

ಅಂತು ಪೊಯ್ಯೆ ಕೊಡನೊಡೆದು [6]ಶ್ವೇತಚೂರ್ಣಮೆಲ್ಲಂ[6] ತನ್ನ ಮೇಲೆ ಬೀೞ್ವುದುಂ; ನಾಗಶರ್ಮಂ ಬೂದಿವೂಸಿದ ತಪೋಧನನಂತೆ ಯುಂ, ಪುಡಿಯೊಳ್ ಪೊರೞ್ದ ಬೆಳ್ಗತ್ತೆಯಂತೆಯುಂ, ಶ್ಲೇಷ್ಮೋತ್ಕಟ ಮಾದಂತೆಯುಗುೞುತ್ತುಂ, ಅಳಿಗಣ್ಣರಂತೆ ಮಿಳುಮಿಳನೆ ನೋಡುತ್ತುಂ, ಮಠದಿಂ ಪೊಱಮಟ್ಟು ನಿಂದ ಛಾಂದಸಬ್ರಾಹ್ಮಣನಂ ಕಂಡು ಗುಂಡು ನೆರೆದಿದೇನೆಂದು ಬೆಸಗೊಂಡೊಡಾತನೊಡನೆಯ ಪೂರ್ವಂ ತತ್ಪ್ರಪಂ ಚಮೆಲ್ಲಮುಂ ಸವಿಸ್ತರಂ ಪೇೞ್ವುದುಂ; ಪುರಜನಂಗಳ್ ಕೇಳ್ದು ಕರು ಳಂ ಪಿಡಿದು ನಗೆಯೊಳ್ ಪೊರೞ್ದರ್. [೨೭

ಪಾ—1. ಳ್ತಾನೀ. ಗ॥ 2. ಪಡೆಯ. ಕ॥ಗ॥
3. ಗೋಪದಂಗಳ್. ಗ॥; 4. ಮನ್ನನ. ॥
5. ಮಾಣದೆ, ಖ॥ 6. ಸಿತಚೂರ್ಣಮೆಲ್ಲಂ. ಕ॥; ಶತಚೂರ್ಣಮಾಗಿ, ಗ॥

ಅದಱಿಂ,

ಏಗೆಯ್ದುಂ ಸತ್ಪುರುಷರ |
ನಾಗತಮುಂ ಗತಮುಮಪ್ಪ ಕಾರ್ಯಮನೆಂದುಂ ||
ರಾಗಿಸಿ ಬಯಸುವುದುಂ ಹೃ |
[1]ದ್ರೋ[1]ಗಂಬಡುವುದುಮಿವೆರಡು ಕಷ್ಟಮನಿಷ್ಟಂ ||263

ಎಂದು ಯಜ್ಞದತ್ತೆ ತನ್ನ [2]ಗಂಡ[2]ನಂ ಬಾರಿಸಿದಳ್; ಅನ್ನೆಗಂ ಪ್ರಸವಸಮಯಮಾಸನ್ನಮಾಗೆ

ವಿಮಲನಿಜಗೋತ್ರಶತಪ |
ತ್ರಮಿತ್ರನಂ ಸದ್ಗ್ರಹಂಗಳೆಲ್ಲಂ ವರ್ಗೋ ||
ತ್ತಮ[3]ದಿನಿ[3]ರೆ ಮುದದಿನತ್ಯು |
ತ್ತಮದಿನದೊಳ್ ಯಜ್ಞದತ್ತೆ ಸುತನಂ ಪಡೆದಳ್ || 264

ಅಂತು ಪುತ್ರೋತ್ಪತ್ತಿಯಾಗಲೊಡಮಾಶಿಶುವಿಂಗೆ ದೇವಶರ್ಮಂ ಜಾತಕರ್ಮವಿಧಾನಮಂ ತೀರ್ಚಿ ಸುಖದಿನಿರ್ದೊಂದು ದಿವಸಂ ಯಜ್ಞದತ್ತೆ ಕೂಸಿಂಗೆ ಪಾಸುವ ಸೀರೆಗಳನೊಗೆಯಲೆಂದು ಪೋಗುತ್ತುಂ ಸುತನಂ ಸುರಕ್ಷಿತನಂಗೆಯ್ಯಿಮೆಂದು ತನ್ನ ಪಾರ್ವಂಗೆ ಪೇೞ್ದು ಪೋದಳ್. ಅನ್ನೆಗಮಾಪೊೞಲನಾಳ್ವರಸಂ ದಾನಂಗೊಟ್ಟಪೆನೆಂದು ಬಱಿಯಟ್ಟಿದೊಡೆ ಭಟ್ಟಂ ಪುತ್ರರಕ್ಷಣಾರ್ಥಮಂ ಬಗೆಯದೆ ಅರ್ಥಾರ್ಥಿಯಾಗಿ ಪೋಗಲ್ಬಗೆದು ತನ್ನ ಮನೆಯೊಳ್ ಮಾರ್ಮನುಷ್ಯರಿಲ್ಲದ ಕಾರಣದಿಂ ತಾಂ [4]ನಡಪಿ[4]ದೊಂದು ನಕುಲನಂ ತೊಟ್ಟಿಲ ಸಮೀಪದೊಳ್ ನಿಡಿದಪ್ಪ ನೇಣಿಂ ಕಟ್ಟಿ ಪೋದಂ. ಅನ್ನೆಗಮಿತ್ತಂ,

ಸ್ಫುರಿತವಿಷಾವಿಲದಂಷ್ಟ್ರಂ |
ಕುರಸಂಕುಳಭೀಕರಾನನಂ ಸಾರ್ದತ್ತೊಂ ||

---

ಪಾ—1. ದ್ವೋ. ಕ || ಗ ||  2. ಪಾರ್ವ. ಖ ||
3. ದೊಳ್. ಗ || ಖ ||  4. ಸಲಹಿ. ಕ || ಗ ||

ದುರಗಂ ಮೆಲ್ಲನೆ ಬಾಲಾ।
ಸ್ಮರಣಾಂಕಿತಮಂ ಕೃತಾಂತಪಾಶಪ್ರತಿಮಂ ॥ 265 [೨

ಅಂತು ಸಾರ್ತರ್ಪ ಭುಜಂಗನನಾಮುಂಗುರಿ ಕಂಡು ನಿಸರ್ಗವೈರಮಂ ನೆನೆದಿರದೆ ಸರ್ಪನಂ ಶತಖಂಡಂಮಾಡಿ ಕೊಂದು ತಿನುತ್ತಿರ್ಪುದುಂ; ಕಿಱಿದಾನುಂ ಬೇಗಕ್ಕೆ ಪಾರ್ವಂ ಬರ್ಪುದುಂ, ತನ್ನ ಸಾಹಸಮಂ ತನ್ನಾಳ್ದಂಗೆ ತೋಱಲೆಂದು ರುಧಿರಾರುಣಿತಮಾದ ನಖಮುಖಮುಂ ಪಲ್ಗಳೊಳ್ ಪತ್ತಿರ್ಪ ಖಂಡಂಗಳ್ವೆರಸು ಪರಿತಂದು ಕಾಲ ಮೇಲೆ ಪೊರಳ್ದು ಚಾಟುಕಾರಂಗೆಯ್ವುದುಂ; ಪಾರ್ವಂ ಕಂಡೀಕಾವಲ್ ಕೂಸಂ ಕೊಂದುದಾಗಲೆವೇಳ್ಕುಮೆಂದು ವಿಚಾರವಿಕಳಂ ನಕುಲನ ಶಿರಮಂ ಬಿರಿಯೆ ಪೊಯ್ದು ಮಾಣದೆ ಪರಿತಂದು ನೋಡಿ ತೊಟ್ಟಲೊಳ್ ಸುಖನಿದ್ರಿತನುಮಕ್ಷತಶರೀರನುಮಾಗಿರ್ದ ಮಗನುಮನಾಕೆಲದೊಳ್ ಶತಖಂಡಮಾಗಿರ್ದ ಪಾವುಮಂ ಕಂಡು ಬೞಿಕ್ಕೆ ಪಾರ್ವಂ ಮುಂಗುರಿಯ ಮೇಲೆ ನೀರಂ ತಳಿದು ಬೀಸೆ ನಿರ್ಜೀವಮಾದುದಂ ಕಂಡು ಪಾಪಕರ್ಮಂ ತಾಂ ಕೋಪವಶದಿಂ ಕೂಸಿನಂತೆ ನಡಪಿದ ನಕುಲ[1]ನಂ ಪರೀಕ್ಷಿಸದೆ[1] ಕೊಂದೆನೆಂದು ಶೋಕಂಗೆಯ್ವುತ್ತುಮಿರ್ಪಿನಂ; ಯಜ್ಞದತ್ತೆ ಬಂದಿದೇನೆಂದು ಬೆಸಗೊಳೆ; ದೇವಶರ್ಮಂ ತತ್ಪ್ರಪಂಚಮೆಲ್ಲಮಂ ಪೇೞೆ ಕೇಳ್ದಂಙೆಂದಳ್:— [೧೭

ಶ್ಲೋ॥ "ಕುದೃಷ್ಟಂ ಕುಪರಿಜ್ಞಾತಂ ಕುಶ್ರುತಂ ಕುಪರೀಕ್ಷಿತಂ।
ತನ್ನರೇಣ ನ ಕರ್ತವ್ಯಂ ಕಿರಾಟೇನ ತು ಯತ್ಕೃತಂ॥" ೧೪೭

[ಟೀಕು — ಮನುಷ್ಯಂ ಲೇಸಾಗಿ ಕಾಣದುದಂ ಅಱಿಯದುದಂ ಪರೀಕ್ಷಿಸದುದಂ ಮಾಡಲಾಗದು ; ಆವುದಾನೊಂದನಱಿಯದೆ ವ್ಯವಹಾರಿ ಮಾಡಿದ ಹಾಂಗೆ. ]

ಎಂಬ ಕಥೆಯಂತಾದುದೆನೆ— ದೇವಶರ್ಮನದೆಂತೆನೆ — ಯಜ್ಞದತ್ತೆ ಪೇೞ್ಗುಂ:—

ಪಾ—1. ನನಪರೀಕ್ಷಿತಂ. ಖ ॥

## ೨. ಪರದನ ಕಥೆ.

ವ|| ಭದ್ರಪುರವೆಂಬ ಪುರದೊಳ್ ದಾರಿದ್ರ್ಯಭೂತಿಯೆಂಬ ಪರದನಿರ್ಪಂ. ಆತನ ಮಗಂ ಧನದತ್ತನೆಂಬಂ ನವಯೌವನಪ್ರಾರಂಭದೊಳ್ ತನಗಿಷ್ಟಭೋಗಕಾಮವಿಷಯಸುಖಕುಪಾಯಮಿಲ್ಲದೆ ಸಂಸಾರಕ್ಕೆ ಬೇಸತ್ತೊಂದು ದಿವಸಂ ನಡುವಿರುಳ್ ತನ್ನ ತಂದೆಗಿಂತೆಂದಂ:— [೫

ಶ್ಲೋ|| "ಪುಂಸಾಮುನ್ನತಚಿತ್ತಾನಾಂ ದ್ವಯಮೇವ ಸುಖಾವಹಂ|
ಸರ್ವಸಂಗನಿವೃತ್ತಿರ್ವಾ ವಿಭೂತಿರ್ವಾ ಸುವಿಸ್ತರಾ ||" ೧೪೮

[ಟೀಕು— ಸುಚಿತ್ತರಪ್ಪ ಪುರುಷರ್ಗೆ ಸರ್ವಸಂಗಪರಿತ್ಯಾಗವಾಗಲಿ ಸಕಲೈಶ್ವರ್ಯವಾಗಲಿ ಎರಡೇ ಸುಖವಪ್ಪುದಹುದು.]

ಎಂಬ ನೀತಿಯುಂಟು. ತಾಂ ಮಹಾನೃಪತಿಯ ಸೇವೆಗೆಯ್ಯಲ್ವೋಪೆನೆಂದೊಡಾತನ ತಂದೆಯಿಂತೆಂದಂ:— ಮಗನೆ ದೇಶಾಂತರಕ್ಕೆ ಪೋಗಿ ಪೊನ್ನಂ ಪಡೆವುದು ಸಂದೆಯಂ, ಸಾವುಂ ಕೇಡುಂ ನಿಶ್ಚಯಮದಱಿಂ ಪೋಗಲ್ವೇಡೆನೆ; ಧನದತ್ತಂ ಮತ್ತಮಿಂತೆಂದಂ:— [೧೩

ಶ್ಲೋ|| "ಉದ್ಯೋಗೀ ಪ್ರಾಪ್ನುಯಾದರ್ಥಂ ಯಶೋವಾ ಮೃತ್ಯುಮೇವ ವಾ|
ಮೃತ್ಯುಮೇವ ನಿರುದ್ಯೋಗೀ ನ ಯಶೋ ನಾರ್ಥಸಂಪದಃ||" ೧೪೯

[ಟೀಕು—ಉದ್ಯೋಗವುಳ್ಳಾತಂಗರ್ಥಲಾಭವಹುದು; ಕೀರ್ತಿಯಾನಾಗಲಿ ಮೃತ್ಯುವನಾಗಲಿ ಐದುವನು. ನಿರುದ್ಯೋಗಿಗೆ ಕೀರ್ತಿಯಾಗದು, ಅರ್ಥಲಾಭವಾಗದು, ಮೃತ್ಯುವೇ ಅಹುದು.]

ಎಂಬುದು ಯುಕ್ತಿಯುಂಟಪ್ಪುದಱಿಂ,

ಪುರುಷಂ ದೈವಮೆ ಶರಣೆಂ| [೨೦
ದಿರಲಾಗದು ತನಗೆ ತಾನೆ ಮಾಡದು ದೈವಂ ||
ಪುರುಷಾರ್ಥಂಗೆಯ್ಯುತ್ತಿರೆ|
ಪರಮಾರ್ಥಂ ದೈವಮುಂ ಕೃತಾ[1]ರ್ಥಮದಕ್ಕುಂ[1] || 266

ಅದಱಿಂ ತಾನೇಗೆಯ್ದುಂ ಪೋಗಿ ಪುರುಷಾರ್ಥಂಗೆಯ್ಯದೆ ಮಾಣೆನೆಂದು ತನ್ನ ಮನೋಧರ್ಮಮಂ ತಂದೆಗೆ ಪೇೞ್ದು ನಿದ್ರಾಂಗನಾಸಕ್ತ

ಪಾ—1. ರ್ಥನಮಾಟ್ಕುಂ. ಗ ||

ನಾಗಿರ್ಪುದುಂ; ನಿಶಾವಸಾನಸಮಯದೊಳಾತನ ಮುನ್ನ ಮಾಡಿದ ದಾನಧರ್ಮಂಗಳ ಫಲಂಗಳೇ ಮೂರ್ತಿಮತ್ತಾಗಿ ಬಂದಿಂತೆಂದುವು:—

ನೀನಿನಿತು ಕಾಲಮುದ್ಯಮ ।
ಹೀನನೆಯಾಗಿರ್ದೆಯದಱಿನಾಮುಂ ನಿನಗಂ ॥
ತೇನುಮುಪಕರಿಸಲಱಿಯಮೆ ।
ನೀನೀತೆಱದಿಂದೆ ನೆಱೆಯೆ ತಱಿಸಂದುದಱಿಂ ॥ 267

ಇನ್ನೆಮಗಿರಲ್ಬಾರದು. ನಾಳೆ ನಾಂ ನಾಲ್ವರ್ ದಿಗಂಬರರೂಪುಗೊಂಡು ನಿನ್ನ ಮನೆಗೆ ಬಂದಪ್ಪೆವು: ನೀನೆಮಗಿದಿರಂ ಬಂದು ವಂದಿಸಿ ವಿಧಿಯಿಂದರ್ಚಿಸಲೊಡಂ ನಿಧಿಗಳಾಗಿ ಪರಿಣಮಿಸುವೆವೆಂದು ಪೇೞ್ವುದುಂ; ಕನಸಂ ಧನದತ್ತಂ ನೆನಸೆಂದು ಭೋಂಕನೆೞ್ಚತ್ತತಿಕುತೂಹಲಂಬೆತ್ತು ಮೀಚೋದ್ಯಮಂ ನೋೞ್ಪೆನೆಂದು ಮನೆಯುಂ ಶೋಭಾವಹಂಗೆಯ್ದು ಶುಚಿರ್ಭೂತನಾಗಿರ್ದು ದ್ವಾರದೊಳ್ ನಿಲ್ವುದುಂ; ನಾಲ್ವರ್ [1]ಸವಣರ್[1] ಸೈತೆ ತನ್ನ ಮನೆಗಾಗಿ ಬರ್ಪುದಂ ಕಂಡು ಇದಿರಂ ಪೋಗಿ ಬಲವಂದು ವಂದಿಸಿ ಮನೆಗೊಡಂಗೊಂಡು ಪೋಗಿ ಪೂಜಿಸಿ ಪೊಡೆಮಡಲೊಡಂ ಪೊನ್ನರಾಶಿಯಾಗಿರ್ದುದಂ ನೆರೆಮನೆಯ ಪರದಂ ಕಂಡೊಡಾತಂಗೆ ರಹಸ್ಯರಕ್ಷಣೋಚಿತಂ ಕಿಱಿದು ಪೊನ್ನನಿತ್ತೊಡವನದನೀಡಾಡಿ ಪೋಗಿ

ನಿನಗುಳ್ಳ ಸವಣರೇಂ ಮ ।
ತ್ತೆನಗಿಲ್ಲವೆಯೆಂದು ಪರಿದು ಪರದಂ ಪುರದೊಳ್ ॥
ಮುನಿಗಳ್ ಚರಿಗೆಗೆ ಬರುತಿರೆ ।
ಮನೆಗುಯ್ದಾರಾಧನೋಕ್ತಿಪೂರ್ವಕ್ರಮದಿಂ ॥ 268

ಅಂತು ಪೂಜಿಸಿ ಪೊಡೆಮಟ್ಟು ತನಗೆ ಪೊನ್ನರಾಸಿಗಳಾಗಿಮೆನೆ;

ಪಾ—1. ದಿಗಂಬರರ್, ಕ ‖ ; ಮುನಿಗಳ್, ಗ ‖

ಭಿಕ್ಷುಗಳ್ ಬೆಕ್ಕಸಂಬಟ್ಟು ಬೆಱಗಾಗಿರ್ದ[1]ವರ ಶಿರಂಗಳಂ[1] ಕಿರಾಟಂ ಲಕುಟದಿಂ ಬಿರಿಯೆ ಪೊಯ್ಯಲೊಡನವರ್ ಪುಯ್ಯಲಿಡಲೊಡಂ ಕೇಳ್ದ ತಳಾಱರ್ ಪರಿತಂದು ಪರದನಂ ಪಿಡಿದು ಪೆಡಗಯ್ಯಂ ಕಟ್ಟಿ ಧರ್ಮಾಧಿಕರಣರಲ್ಲಿಗುಯ್ಯೆ; [೪

[2]ಕರಣಮಿದೇ[2]ಕಾರಣದಿಂ।
ತಿರಿವರನಕೃತಾಪರಾಧಿಗಳನವಿಚಾರಂ ॥
ಪರಿಭವಿಸಿದೆ ಪೇೞೆಂದೊಡೆ।
ಪರದಂ ಧರ್ಮಾಧಿಕರಣದವರ್ಗಿಂತೆಂದಂ ॥269 [೮

ಧನದತ್ತನ ಮನೆಗೆ ನಾಲ್ವರ್ ಸವಣರ್ ಬಂದು ಪೊನ್ನಾದುದಂ ನಾಂ ಪ್ರತ್ಯಕ್ಷಂ ಕಂಡೆಂ; ಎನ್ನ ಮನೆಗೆ ನಾಲ್ವರ್ ಸಾಧುಗಳಪ್ಪ ಸವಣರಂ ಬರಿಸಿ ವಿಧಾನದಿಂದರ್ಚಿಸಿ ಪೂಜಿಸಿ ಬೞಿಕ್ಕೆ ಪೊನ್ನಾಗಿಮೆಂದು ಪೊಡೆಮಟ್ಟೊಡವರೆಂತುಂ ಪೊನ್ನಾಗ[3]ದಿರೆ[3] ಬಡಿದೆನಕಾರಣಂ ಪೊಯ್ದುದಿಲ್ಲೆನೆ; ಸಭೆಯೆಲ್ಲಂ ನಗೆ; ಧರ್ಮಾಧಿಕರಣರಿಂತೆಂದರ್:—ಆವುದುಮಂ ಪ್ರತ್ಯಕ್ಷಂ ಕಂಡುಂ ಕೇಳ್ದುಂ ಮತ್ತಂ ಯುಕ್ತಾಯುಕ್ತದಿಂ ವಿಚಾರಿಸಿ ನೆಗೞಲೆವೇೞ್ಕುಮದೆಂತೆಂದೊಡೆ:— [೧೫

## ೩. ಅಜಿತನ ಕಥೆ.

ವ॥ ಅಮರಾವತಿಯೆಂಬ ಪೊೞಲೊಳ್ ವಿಮಳಮತಿಯೆಂಬ ಪರದಂ ಪಿರಿದುಂ ಪೊನ್ನಂ ಪಡೆದು ದಾನಧರ್ಮಪರೋಪಕಾರಕ್ಕೆಡೆಯುಡುಗದೆ ಕೊಟ್ಟು ಕಡೆಯೊಳ್ ಬಡತನಮುಂ ಮುಪ್ಪುಂ ಬಂದಡಸುವುದುಂ ಅವಸಾನಕಾಲದೊಳಾತಂ ತನ್ನ ಮಗನಪ್ಪ ಅಜಿತನಂ ಕರೆದು — ಎಲೆ ಮಗನೇ, ನಿನಗಾಪ್ತಮಾದ ಪಸದನಮನಮೂಲ್ಯಮಪ್ಪ ವಸ್ತುವನೊಂದು ಪುಸ್ತಕದೊಳ್ ಮಡಗಿಟ್ಟೆನೆಂದು ಪೇೞ್ದು ಲೋಕಾಂ[4]ತರಿತ[4]ನಾದಂ.

ಪಾ—1. ರಿಸಿಗಳಂ. ಗ ॥ 2. ಕರುಣಮಿದೇಂ ಗ ॥
3. ಲೊಲ್ಲದಿರೆ, ಗ ॥ ಬ ॥ 4. ತಿಕ. ಗ ॥

ಅಜಿತಂ ತನ್ನ ತಂದೆಗೆ ಪರಲೋಕಕ್ರಿಯೆಗಳಂ ಮಾಡಿ ಬಳಿಕ್ಕಂ ತಮ್ಮಯ್ಯಂ ಮಡಗಿಟ್ಟ ವಸ್ತುವಂ ನೋೞ್ಪೆನೆಂದು ಕವಳಿಗೆಯಂ ಬಿಟ್ಟು ನೋೞ್ಪನ್ನೆಗಂ; ಪಲವು ಕಪ್ಪಡಂಗಳೊಳ್ ಸುತ್ತಿರ್ಪುದೊಂದೋಲೆಯೊಳ್ ಬರೆದಿರ್ದ ಗಾಹೆಯಂ ಕಂಡು ತಮ್ಮಯ್ಯನಾಪದ್ಧನಮೆಂದು ತನಗೆ ಬೈತಿಟ್ಟ ವಸ್ತುವಿದಕ್ಕುಮೆಂದು ಬಳಿಕ್ಕದಂ ವಾಚಿಸಿ ನೋಡಿ,

ಶ್ಲೋ॥ "ಗುರುಪತ್ನೀವ ಸಾ ಗಮ್ಯಾ ಯಾ ಶ್ರೀಃ ಪೂರ್ವಕ್ರಮಾಗತಾ।
ಸ್ವಭುಜೋಪಾರ್ಜಿತಾ ಯಾ ತು ಸಾ ಹಿ ಸತ್ವವತಾಂ ಪ್ರಿಯಾ॥" ೧೪೦

[ಟೀಕು— ಸಮರ್ಥರಹ ಪುರುಷರ್ಗೆ ಆವುದಾನೊಂದು ಅನ್ವಯಾಗತವಪ್ಪ ಶ್ರೀಯಂ ಭೋಗಿಸಲು ಯೋಗ್ಯವಲ್ಲ; ಅದು ಗುರುವಿನ ಸ್ತ್ರೀಯು ಸಮಾನವಾಗಿಹುದು. ತನ್ನ ಭುಜಬಲದಿಂ ಗಳಿಯಿಸಿದ ಶ್ರೀಯೆ ಭೋಗಿಸಲು ಯೋಗ್ಯವಹಂತಹುದು.]

ಎಂಬುದು ಮಹಾಪುರುಷರ ಚರಿತ್ರಮೆಂದಿರದಾಂ ಪಿತೃವಿತ್ತಕ್ಕಾಸೆವಟ್ಟು ಕಷ್ಟನೆಯಾದೆನೆಂದು ತನ್ನಂ ತಾಂ ನಿಂದಿಸಿ ಮಹಾನೃಪತಿಯ ಸೇವೆಗೆಯ್ವೆನೆಂದು ಕಪ್ಪಡಮಂ ಸೀೞ್ದು ಮನೆಯಂ ಪೊಱಮಟ್ಟು ಕೆಲವಾನುದಿವಸದಿಂ,

ನಯವಿದ್ಯಾವಿದರಿಂ ಕವಿಪ್ರಕರದಿಂ ತರ್ಕಜ್ಞರಿಂ ಶಬ್ದವಿ।
ದ್ಯೆಯೊಳಬ್ಜಾಸನಕಲ್ಪರಪ್ಪ ವಿಳಸದ್ಭೂದೇವರಿಂ ದೇವತಾ॥
ಲಯದಿಂದೊಪ್ಪುವ ಗುಪ್ತವಂಶವಸುಧಾಧೀಶಾವಳೀರಾಜಧಾ।
ನಿಯನುಜ್ಜೈನಿಯನೆಯ್ದಿ ಬಂದನಜಿತಂ ಶುಂಭದ್ಗುಣಭ್ರಾಜಿತಂ ॥ 270

ವ॥ ಅಂತೆಯ್ದಿ ರಾಜಭವನಮಂ ಪೊಕ್ಕು ರಾಜಾಧಿರಾಜನಂ [1]ವಿಭವಾಧರೀಭೂತ[1] ನಳನಹುಷಭರತಭಗೀರಥಹರಿಶ್ಚಂದ್ರಾದಿ ಪುರಾತನಮಹೀಪಾಲಚರಿತ್ರನಂ ಕರಾಳಕರವಾಳಧಾರಾವಿದಾರಿತಮದವದರಾತಿಮಂಡಲೇಶ್ವರಪ್ರಚಂಡಶುಂಡಾಲನಂ ಪ್ರತಾಪಾನುರಾಗಾವನತಸಕಳಸಾಮನ್ತಮ

ಪಾ—1. ವಿಭವಭೂತ. ಗ ॥ ; ವಿಭವಯುತ. ಕ ॥

ಕುಟಮಣಿಮರೀಚಿಮಾಲಾಲಂಕೃತಚಾರುಚರಣಕಮಲನಂ ಅತುಳವಿತರಣವಿನಿರ್ಜಿತಜೀಮೂತವಾಹನದಾನಾಧೀಶ್ವರದಿನಕರತನೂಜನಂ ಸಕಲಜಗಜ್ಜನಸಂಸ್ತೂಯಮಾನಗುಪ್ತಾನ್ವಯಜಲಧರಮಾರ್ಗಗಭಸ್ತಿಮಾಲಿಯುಂ ವಾಮನಜಯಾದಿತ್ಯಪ್ರಮುಖಮುಖಕಮಳವಿನಿರ್ಗತಸೂಕ್ತಿಮುಕ್ತಾವಲೀಮಣಿಕುಂಡಲಮಂಡಿತಕರ್ಣನಂ ಚತುರುದಧಿವಲಯವೇಲಾಲಂಕೃತವಸುಂಧರಾಸುಂದರೀಜೀವಿತೇಶ್ವರನಂ ವಿಬುಧವನಜವನಾದಿತ್ಯನಪ್ಪ ವಿಕ್ರಮಾದಿತ್ಯನಂ ಕಂಡು [೭

ಶ್ಲೋ || “ಅರ್ಥಿನಾಂ ಕೃಪಣಾ ದೃಷ್ಟಿಸ್ತ್ವನ್ಮುಖೇ ಪತಿತಾಸಕೃತ್ |
ತದವಸ್ಥಾ ಪುನರ್ದೇವ ನಾನ್ಯಸ್ಯ ಮುಖಮೀಕ್ಷತೇ ||” ೧೫೧

[ಟೀಕು—ಬೇಡುವರ ದೀನತರವಹ ದೃಷ್ಟಿಯುಂಟಿನ ಮುಖದಲ್ಲಿ ಬಿದ್ದಿದಾದೊಡೆ [1]ಮರಳಿಯದು ಆ ಅವಸ್ಥೆಯಲ್ಲಿ [1]ಮತ್ತೊಬ್ಬನ ಮುಖವಂ ನೋಡದು. ]

[2]ಎಂಬ ಶ್ಲೋಕಮಂ ಪೇಳುತ್ತಿರ್ದಾ[2]ತಂಗೆ ವಿಕ್ರಮಾದಿತ್ಯದೇವಂ—ಮೆಚ್ಚಿದೆಂ, ಬೇಡಿಕೊಳ್ಳೆಂಬುದುಂ ಅಜಿತನಿಂತೆಂದಂ:—

ಜಯ[3]ಲಕ್ಷ್ಮೀಧಾಮ ಧನಾ[3] |
ರ್ಥಿಯೆನಲ್ಲೆನಶೇಷಭುವನವಲ್ಲಭಸೇವಾ || [೧೫
ರ್ಥಿಯೆನಾಂ ಭವತ್ಪದಾಬ್ಜ |
ದ್ವಯಮಂ ಸೇವಿಸುವೆನೆಂಬ [4]ಬಗೆಯಿಂ[4] ಬಂದೆಂ || 271

ಎಂದೊಡರಸಂ ಕರಮೊಳ್ಳಿತ್ತೆಂದು ಸಜ್ಜೆಯ ಕಾಪಿನ ಬೆಸನಂ ಕುಡೆ ಪಡೆದು ನಿಶ್ಚಿಂತಮಿರಲೊಂದು ದೆವಸಮರಸಂ ಬೇಂಟೆವೋದೊಡಜಿತಂ ತನ್ನಮಯ್ಯಂ ಪೇಳ್ದ ಗಾಹೆಯಂ [5]ಕಟ್ಟು[5]ವಂಜರದ ನಡುವಣ ನಾಗವೇದಿಕೆಯೊಳ್ ವಿನೋದದಿಂ ಬರೆದಿಟ್ಟಂ. ಇತ್ತಲ್ ಮಹಾದೇವಿ

ಪಾ—1. ಮರುಳಿಯದು ಖ || 2. ಎಂದುಪಶ್ಲೋಕಿಸಿದಾ. ಖ || 3. ಲಕ್ಷ್ಮೀಧಾಮಧಾನಾ. ಗ || 4. ಭಯದಿಂ, ಗ || 5. ಕಟ್ಟ. ಖ ||

ಯುಂ ರೂಪಾದೇವಿಯುಮೆಂಬಿರ್ವರರಸಿಯರುಂ ವಿನೋದಾರ್ಥದಿಂ ಸೀತೆಯುಂ ರಾಮನುಮಾಗಿ ಕೃತಕನಾಟಕಮನಾಡಿ ಬಱಿಲ್ದು ಕೃತಕ ಪುರುಷಾಕಾರಚಿಹ್ನೆಗಳಂ ಕಳೆಯಲ್ ಮಱೆದು ಅರಸನ ಸಿರಿಮಂಚದೊಳ್ ಗಾಢಾಲಿಂಗನಂಗೈದು ಮಱೆದೊಱಗಿರ್ದರ್. ಅನ್ನೆಗಮರಸನರ್ಧರಾತ್ರಿಸಮಯದೊಳ್ ಬಂದು ಶ್ರಮಶ್ರಾಂತಿಯಿಂ ಮಜ್ಜನಭೋಜನಾದಿಕ್ರಿಯೆಗೆ[1]ಯ್ಯಲಾಱದೆ[1] ಸಜ್ಜೆಯ ಮನೆಯಂ ಪೊಕ್ಕು ಸಿರಿಮಂಚದೊಳ್ ಮಹಾದೇವಿಯರೊಡನೆ ಪಟ್ಟಿರ್ದ ಪುರುಷರೂಪಮಂ ಕಂಡು ಕೋಪಾನಳಶಿಖಾಕಳಾಪದಹ್ಯಮಾನಮಾನಸನಾಗಿ ಪೆಱತೇನುಮಂ ಕಾಣದೆ [2]ಕೀಱ್ವಾ[2]ಳಿನ ಕಯ್ಯೊಳಿರ್ದ ಬಾಳಂ ಕೊಂಡೆತ್ತಿ ಪೊಯ್ವುದುಮಾ[3]ಬಾಳ್ ನಾಗವೇದಿಕೆಯಂ ತಾಂಗಿ ತೆತ್ತಿಸೆ[3] ಮೇಗಂ ನೋಡಿ,

ವರನಾಗವೇದಿಕಾಭ್ಯಂ ।
ತರಲಿಖಿತಂಗಳನತಿಸ್ಫುಟಂಗಳನುದ್ಯ ॥
ದ್ಗುರುತರಕೋಪಸ್ತಂಭಾ ।
ಕ್ಷರಂಗಳೆನಿಪಕ್ಷರಂಗಳಂ ವಿಭು ಕಂಡಂ ॥ 272

॥ ಗಾಹೆ ॥

"ಮಾಹೇಹಿ ಸುವಗ್ಗ[4]ಹಿಯ[4]ಮಾಪತ್ತಿಯಜಣ್ಣದಿಟ್ಟ ಪಚ್ಚಕ್ಖಂ ।
ಪಚ್ಚಕ್ಖಂ ಮಿಯದಿಟ್ಟಂ ಜುತ್ತಾಜುತ್ತಂ ವಿಯಾರೇಹಿ ॥" ೧೫೨

[ಟೀಕು — ಪೇಟಿ ಕೇಳಿದ ಮಾತನೆ ವಿಶ್ವಾಸಿಸಲಾಗದು. ಅಜ್ಞಾನವಹ ದೃಷ್ಟಿಯಿಂ ಕಂಡ ಕಾರ್ಯವನೆ ಬೇಗಂ ಮಾಡಲಾಗದು. ಪ್ರತ್ಯಕ್ಷವಾಗಿ ಕಂಡುದನು ಯಥಾಯುಕ್ತವಾಗಿ ವಿಚಾರಿಸಿ ಮಾಡುವುದು.]

ಎಂದಿರಲ್ ಕಂಡಾಗಾಹೆಯರ್ಥಮನರಸಂ ವಿಚಾರಿಸಿ ಮತ್ತಮಿಂತೆಂದು ಬಗೆದು,

---

ಪಾ—1. ಮೆಯ್ದಾರದೆ. ॥ 2. ಕೀಱ್ವಾ. ಕ ॥ ಗ ॥
3. ಬಾಳಲಗಾವೇದಿಯಂ ತಾಗಿ ಕೀಲಿಸೆ. ಗ ॥ 4. ಹಿ. ಕ ॥ ; ಹಿಂ. ಗ ॥

ಮಱೆದೊಱಗಿದರಂ ಲಿಂಗದ ।
ಮಱೆವೊಕ್ಕವರಂ ನಿರಾಯುಧರನಾಹವದೊಳ್ ॥
ಪೊಱಮಾಱಿದರಂ ತುೞಿಲಾ ।
ಇಱಿದೊಡೆ ನೆಱೆದೋಷಿಯಾಗಿ ಪೋಗನೆ ಜಗದೊಳ್ ॥273

ಅದಱಿಂದಿವಂದಿರನೆತ್ತಿ ಸುಡಿಸಿ ಬೞಿಕ್ಕ ತಕ್ಕುದಂ ಮಾೞ್ಪೆನೆಂದು ಪಿಡಿದಿರ್ದ ಬಾಳೊಳ್ ತೊಡೆಯಂ ಪೊಯ್ದ[1], ತ್ತುವುದುಂ[1] ಅರಸಿಯುರಿರ್ವರುಂ ಭೋಂಕೆನೆೞ್ಚೆತ್ತು ತನ್ನ ಕಾಲ ಮೇಲೆ ಬಿರ್ದೊಡರಸನಿದೇನೆಂದು ಬೆಸಗೊಳ್ವುದುಂ; ರೂಪವತಿಯಿಂತೆಂದಳ್:—ದೇವಾ! ನೀಂ ಬೇಂಟೆವೋಗಿ ತಡವಾದ ಕಾರಣದಿಂ ಪೊೞ್ತು ಪೋಗದೆ ಅೞ್ತಿಯಿಂದಾಂ [2]ರಾಮಚಂದ್ರನಾಗಿಯುಂ ಮಹಾದೇವಿ ಸೀತಾದೇವಿಯಾಗಿಯುಂ ನಾಟಕ[2]ಮನಭಿನಯಿಸಿ ಕರಂ ಬೞಲ್ದು ನೈಪಥ್ಯಮಂ ಕಳೆಯಲ್ ಶಕ್ತಿಯಿಲ್ಲದೆ ನಿದ್ರಾಸಕ್ತರಾದೆವು, ಇದರ್ಕೆ ದೇವರ್ ದಯೆ[3]ಗಿಡಲ್ವೇಡೆಂ[3]ದು ಕಾಲ್ಗೆಱಗುವುದುಮರಸಂ ವಿಸ್ಮಯರಸಾವೇಷ್ಟಿತನಾಗಿಯರಸಿಯರ್ಗೆ ತತ್ಪ್ರಪಂಚಮೆಲ್ಲಮಂ ಪೇೞುತ್ತುಮಿರ್ಪಿನಮನ್ನೆಗಂನೇಸಱ್ ಮೂಡುವುದುಂ; ಸಮಸ್ತಪರಿವಾರಮಂ ಬರಿಸಿ ಸಜ್ಜೆಯ ಮನೆಯ ನಾಗವೇದಿಯೊಳ್ ಸುಭಾಷಿತವನಾರ್ ಬರೆದರ್ ಪೇೞಿಮೆಂಬುದುಂ; ಸಜ್ಜೆಯ ಕಾಪಿನವನೊರ್ವಂ ಪೊಸಮಾಣಿ ಬರೆದನಿದನೆಂದು ಬಿನ್ನಪಂಗೆಯ್ವುದುಮರಸನಾತನಂ ಕರೆದು ಕಟ್ಟುವಂಜರದೊಳ್ ನೀಂ ಬರೆದ ಗಾಹೆಯನೆಲ್ಲಿ ಕಲ್ತೆಯೆಂದೊಡೆಮ್ಮ ತಂದೆ ಮಾಸಿರಿವಂತನಾಗಿಯುಂ ಪೊನ್ನೆಂಬ ಪೆಸರ ಚಿನ್ನಮನಿರಿಸದೆ ದಾನಧರ್ಮಂಗೆಯ್ದು ತನಗ

ಪಾ—1. ಬ್ಬಿಸೆ. ಕ ॥ ಗ ॥ 2. ನೀನು ಮೆಂದು, ನಾನು ರಾಮಸ್ವಾಮಿಯಾಗಿ ನಾನು ಮಹಾದೇವಿ ಸೀತೆಯಾಗಿ ನಾವೀರ್ವರ್ಸ್ತ್ರೀಯರುಂ ಮಹಾನಾಟಕಂ. ಕ ॥ ; ನಾನುಂ ರಾಮಸ್ವಾಮಿಯಾಗಿ ಮಹಾದೇವಿ ಸೀತಾದೇವಿಯಾಗಿ ಮಹಾನಾಟಕಂ. ಗ ॥ 3. ದಯೆಗೆಯ್ಯಲ್ಬೇಕೆಂ. ಕ ॥ ಗ ॥

ವಸಾನಕಾಲಮಪ್ಪುದುಮೆನ್ನಂ ಕರೆದು—ಮಗನೆ, ನಿನಗೆ ಜೀವನೋಪಾಯಮೊಂದನರ್ಘ್ಯಮಪ್ಪ ರತ್ನಮಂ ಪುಸ್ತಕದೊಳ್ [1]ಮಡಗಿಟ್ಟೆ[1]ನೆಂದು ಪರಲೋಕಪ್ರಾಪ್ತನಾದಂ; ಬೞಿಕ್ಕೆ ನಾನಾಕವಳಿಗೆಯುಂ ಬಿಟ್ಟು ನೋಡಿ ಪೆಱತೇನುಮಂ ಕಾಣದೆ ಗಾಹೆಯುಂ ಕಂಡು ಪಾಠಮಂ ಗೆಯ್ದೆನೆಂದು ಬಿನ್ನಪಂಗೆಯ್ದೊಡರಸನಿಂತೆಂದಂ:— ನಿಮ್ಮಯ್ಯನನರ್ಘ್ಯವಸ್ತುವೆಂದು ಪೇೞ್ದುದೊಂದುಂ ಸಂದೆಯಮಿಲ್ಲೆಂತೆಂದೊಡೆನ್ನ ಪ್ರಾಣೇಶ್ವರಿಯುರಿರ್ವರುಂ ಸ್ತ್ರೀಪುರುಷ[2]ರೂಪಧಾರಿಗಳಾಗಿ ನಿದ್ರೆಗೆಯ್ದಿರ್ದ[2]ರನಾಂ ಕಂಡು ಬಾಳಂ ಕಿತ್ತೆತ್ತಿ ಪೊಯ್ಯಲದು ನಾಗವೇದಿಕೆಯುಂ ತಾಗಿ [3]ತಡೆಯೆ[3] ಮೇಗಂ ನೋಡಿ ಬರೆದಿರ್ದ ಸುಭಾಷಿತಮಂ ಕಂಡು ಪರೀಕ್ಷಿಸುವ ಬುದ್ಧಿ ಪುಟ್ಟೆ ಪಟ್ಟಿರ್ದರನೆತ್ತುವುದುಮವರೆೞ್ತು ತತ್ಪ್ರಪಂಚಮೆಲ್ಲಮಂ ಪೇೞೆ ಕೇಳ್ದೀಸುಭಾಷಿತದ ಪ್ರಸಾದದಿಂದೆನಗೆ ಸ್ತ್ರೀವಧೆಯುಂ ಯಶೋಹಾನಿಯುಮಾದುದಿಲ್ಲದಱಿಂ ರತ್ನಮೆಂಬುದು ಪಾಷಾಣವಿಶೇಷಮಪ್ಪುದದರ್ಕೆ ಬೆಲೆಯಿಡಲಕ್ಕುಮೀಸುಭಾಷಿತರತ್ನಕ್ಕೆ ಬೆಲೆಯಿಲ್ಲೆಂದು, [೧೪

ಅಹಿತಮದಭಂಜನಂ ವಿಬು ।
ಧಹಿತಂ ಶ್ರೀಸಾಹಸಾಂಕನಜಿತಂಗಿತ್ತಂ ॥
ಮಹಿಪಂ ಸ್ವಾಂಗಸ್ಪೃಷ್ಟಕ ।
ಸಹಿತಂ ಮಣಿಕನಕವಸ್ತುವಾಹನಚಯಮಂ ॥ 274 [೧೮

(೨ ನೆಯ ಕಥೆಯ ಶೇಷ.)

ಅದಱಿಂ ಪ್ರತ್ಯಕ್ಷಂ ಕಂಡುದುಮಂ ಪರೀಕ್ಷಿಸಲ್ವೇಡಿದುದು. ಧನದತ್ತಂಗನಿಮಿತ್ತಂ ಮುನಿಗಳ್ ಬಂದು ನಿಧಿಗಳಾಗಲರಿಯರೆತ್ತಾನುಮಪ್ಪೊಡಾತನ ಪೂರ್ವಜನ್ಮದ ಸುಕೃತಂಗಳ್ ಮೂರ್ತಿಮತ್ತುಗಳಾಗಿ

ಪಾ—1. ಬರೆದಿಟ್ಟೆ. ಗ ॥ 2. ವೇಷವಂ ಹಾಕಿರ್ದ. ಕ ॥ 3. ದೊಡೆ. ಗ ॥

ಬಂದಾನೆವದೊಳ್ ನಿಧಿಗಳಾಗಿ ಪರಿಣಮಿಸಿದುವಕ್ಕುಂ. ಅದನಾತನಂ ಬೆಸಗೊಳ್ಳದೆ ಅಪರೀಕ್ಷಿತಂ ಮುಮುಕ್ಷುಗಳಂ ಸಾಯೆ ಸದೆಬಡಿದನೀ ದುರಾತ್ಮಂ. ಪ್ರತ್ಯಕ್ಷಂ ದೋಷಮಂ ಮಾಡಿದ ದುಷ್ಟನಿವಂಗೆ ತಕ್ಕುದಂ ಮಾಡಲ್ವೇಳ್ಕುಮೆಂದು ತಮ್ಮೊಳಾಳೋಚಿಸಿಕೊಂಡಿಂತೆಂದರ್:—

ಶ್ಲೋ || "ಗುರುರಾತ್ಮವತಾಂ ಶಾಸ್ತಾ ಶಾಸ್ತಾ ರಾಜಾ ದುರಾತ್ಮನಾಂ |
ಅಂತಃಪ್ರಚ್ಛನ್ನಪಾಪಾನಾಂ ಶಾಸ್ತಾ ವೈವಸ್ವತೋ ಯಮಃ ||" ೧೯೩

[ಟೀಕಾ—ಬುದ್ಧಿಯುಳ್ಳರಂ ಗುರು ಶಿಕ್ಷಿಸುವಂ, ದುರಾತ್ಮರನರಸಂ ಶಿಕ್ಷಿಸುವಂ, ಪಾಪಿಗಳನಂತಕಂ ಶಿಕ್ಷಿಸುವಂ.]

ಎಂದು ಧರ್ಮಾಧಿಕರಣದವರ್ ದೋಷಾನುರೂಪದಂಡಮಂ ನಿರೂಪಿಸಿ ದಂಡಧರಂಗೆ ಪೇೞ್ದರ್.

ಅದಱಿಂ ಮುಂಗುರಿ ಕೂಸಂ ಕೊಂದುದಂ ಪ್ರತ್ಯಕ್ಷಂ ಕಂಡೊಡಮದು ವಧಪ್ರಾಪ್ತನಲ್ಲಮದೆಂತೆನೆ:—

(೪. ವೃದ್ಧ ಗೌತಮಿ.)

ಸಿದ್ಧಾಂತತತ್ತ್ವವೇದಿ ವಿ |
ಶುದ್ಧಸದಾಚಾರೆ ಚಾರುಗುಣಯುತೆ ಸಾಕ್ಷಾ ||
ದ್ಬುದ್ಧಿ ವಿವೇಕಮಹಾ[1]ನಿಧಿ[1] |
ಸದ್ಧರ್ಮಸುಮೂರ್ತಿ ವೃದ್ಧಗೌತಮಿಯೆಂಬಳ್ || 275

[2]ಆಪರಮೇಶ್ವರಿಯ[2] ಪಿರಿಯ ಮಗನನೊಂದು ಉರಗಂ [3]ಕೊಂ[3]ಡೊಡೆ ಅದನೊರ್ವ [4]ನಿಷಾದಂ[4] ಕಂಡು ಪಿಡಿದಡಸಿ ಕಟ್ಟಿ ಗೌತಮಿಯ ಮುಂದಿಕ್ಕಿ ನಿನ್ನ ಮಗನನೀಪನ್ನಗಂ ಕೊಂದುದಿದಂ ಕೊಂದಪೆನೆಂದು ಪಿರಿದಾಗ್ರಹಂಗೆಯ್ವುದುಮವಂಗೆ ಗೌತಮಿಯಿಂತೆಂದಳ್:—ಇದು ಕಾರಣಭೂತವಲ್ಲದೆ ನಿಮಿತ್ತಭೂತಮಲ್ಲ, ಅಂತುಮಲ್ಲದೆ ಕ್ಷುದ್ರಜಂತುವ

ಪಾ—1. ನದಿ, ಗ || 2. ಆವೃದ್ಧಗೌತಮಿಯೆಂಬಳ್. ಕ ||
3. ಕರ್ಚೆ. ಕ || 4. ನಿಶಾಚರಂ, ಕ || ; ನಿಶಾಟಂ, ಗ ||

ಪುದರಿಂ ಸ್ವಭಾವಸಿದ್ಧವಾದುದು; ವಧಪ್ರಾಪ್ತನಲ್ಲೆಂದು ತನ್ನ ಮಗನಂ ಕೊಂದ ಸರ್ಪನಂ ಪ್ರತ್ಯಕ್ಷಂ ಕಂಡುಂ ಕೊಲಲಿತ್ತಳಿಲ್ಲ.

ವ|| ನೀಮಿದಱಿ ನಖಮುಂ ಮುಖಮುಂ ರಕ್ತಮಾಗಿರ್ದುದೆಂಬಿನಿತ ಱಿಂದಳನಪರಾಧಿಯಂ ಪರಮೋಪಕಾರಿಯನೀಮುಂಗುರಿಯಂ ಪರೀಕ್ಷಿಸದೆ ಕೊಂದು ಕಷ್ಟಂಗೆಯ್ದಿರ್; ಇನ್ನು ಪಶ್ಚಾತ್ತಾಪಮುಂ ವಿಪ್ರಲಾಪಮುಂ ಪ್ರಯೋಜನಮಿಲ್ಲ; ಇನ್ನುಸಿರದಿರಿಮೆಂದು ಪಾರ್ವನಂ ಸಂತೈಸಿ ಮತ್ತಮಿಂತೆಂದಳ್:—

ದಶರಥನೆಂಬ ನರೇಂದ್ರಂ |
ವಿಶದಯಶಂ ಗಜಮೆ[1]ಗೆತ್ತು[1] ಋಷಿಪುತ್ರನುಮಂ ||
ಶಿಶುವನಪರೀಕ್ಷಿತಂ ಕೊಂ |
ದು ಶಾಪಮಂ ಭೂಪನಾಗಳಲ್ಲಿಯೆ ಪಡೆದಂ || 276

ಅಂತುಮಲ್ಲದೆಯುಂ,

ಜಸಮಂ ಧರ್ಮಮುಮಂ ಪಾ |
ಲಿಸುವೊಡಮಿಹಪರಮನೊಲ್ವೊಡಂ ತನ್ನಂ ರ ||
ಕ್ಷಿಸುವೊಡಮಾರ್ಯ್ಯೆದು ಪರೀ |
ಕ್ಷಿಸುವುದು ಮನುಜಂ ಸಮಸ್ತಕಾರ್ಯಸ್ಥಿತಿಯಂ || 277

ಇಹದೊಳ್ ದುರ್ಯಶಮಾಗದಂತು ಪರದೊಳ್ ಪಾಪಕ್ಕೆ ಪಕ್ಕಾಗದಂ|
ತು ಹಿತಾರ್ಥಂಗಳನೆಂತು ನೀತಿನಿಪುಣರ್ ಪೇೞ್ದಂತೆ ಸಂತರ್ ಸಮಂ ||
ತುಹಿತಸ್ವಾಂತಗುಣೋಕ್ತಮಾಗೆ ಸುಪರೀಕ್ಷಾಕಾರ್ಯಮಂ ಮಾೞ್ಪುದಾ|
ತ್ಮಹಿತಂ ತಾನಿದು ದುರ್ಗಸಿಂಹನ ಮತಂ ಲೋಕೋತ್ತರಂ ಧಾತ್ರಿಯೊಳ್ || 278

ಪಾ—1. ಸುತ್ತೆ. ಚ ||

ರಕ್ಷಿಪೊಡಿಹಪರಸುಖಮನು ।
ಪೇಕ್ಷಿಸದೆ ಸಮಸ್ತಕಾರ್ಯಮುಂ ಸತ್ಪುರುಷಂ ॥
ದಕ್ಷತೆಯಿನ್ನೈದೆ ನೋಡಿ ಪ ।
ರೀಕ್ಷಿಸುವುದು ದುರ್ಗಸಿಂಹಮತಮುಂ ಹಿತಮುಂ ॥ 278

|| ಗದ್ಯಂ ||

ಇದು ವಿನಮದಮರರಾಜಮೌಳಿಮಾಣಿಕ್ಯಮರೀಚಿಮಂಜರೀಪುಂಜರಂಜಿತ
ಭಗವದ್ಭವಾನೀವಲ್ಲಭಚರಣಸರಸಿರುಹಷಟ್ಚರಣಂ
ಶ್ರೀಮನ್ಮಹಾಸಂಧಿವಿಗ್ರಹಿ ದುರ್ಗಸಿಂಹ ವಿರಚಿತಮಪ್ಪ
ಪಂಚತಂತ್ರದೊಳ್
ಪರೀಕ್ಷಾವ್ಯಾವರ್ಣನಂ

ದ್ವಿತೀಯಂ ತಂತ್ರಂ ಸಮಾಪ್ತಂ

ವಿಶ್ವಾಸ ಪ್ರಕರಣಂ

# ತೃತೀಯತಂತ್ರಂ.

ಶ್ರೀಸುದತಿಗಮಖಿಳಧರಾ ।
ಶ್ರೀಸುದತಿಗಮಧಿ[1]ಪನ[1]ಪ್ಪ ಬಗೆಯುಳ್ಳೊಡೆ ವಿ ॥
ಶ್ವಾಸಮನೆ ಮಾಡಿ ವಸುಧಾ ।
ಧೀಶಂ ಗೆ[2]ಲ್ಗ[2]ಹಿತಜನಮನನುನಯದಿಂದಂ ॥ 280
ಅದಱಿಂ ವಾಕ್ಛ್ರೀಲೀಲಾ ।
[3]ಸದನಂ[3] ವಿಶ್ವಾಸಮೆಂಬ ತಂತ್ರಮನಸುಹೃ ॥
ನ್ಮದಹರಮಂ ಪೇೞ್ಗುಂ [4]ಸುಕ ।
ವಿ[4]ದುರ್ಗಸಿಂಹಂ ನಯಾಗಮಜ್ಞರ ಮತದಿಂ ॥ 281

ಶ್ಲೋ॥ “ನ ವಿಶ್ವಸೇತ್ ಪೂರ್ವವಿರೋಧಿತಸ್ಯ ಶತ್ರೋರ್ಹಿ ಮಿತ್ರತ್ವಮುಪಾಗತಸ್ಯ ।
ದಗ್ಧಾಂ ಗುಹಾಂ ಪಶ್ಯ ಉಲೂಕಪೂರ್ಣಾಂ ಕಾಕಪ್ರಣೀತೇನ ಹುತಾಶನೇನ॥”

[ಟೀಕು—ಪೂರ್ವದಲ್ಲಿ ವಿರೋಧವಂ ಮಾಡಿದಂತಪ್ಪ ಶತ್ರುವನು ವಿಶ್ವಾಸಿಸಲಾಗದು: ಅದು ಹೇಗೆಂದೊಡೆ:—ಗೂಗೆಗಳ್ ತುಂಬಿರ್ದ ಗುಹೆಯನು ಕಾಗೆಗಳ್ ಸುಟ್ಟುವಪ್ಪುದೇ ಕಾರಣವಾಗಿ.]

[5]ಈ[5] ಕಥಾಪ್ರಪಂಚಮೆಂತೆಂದೊಡೆ:—

## ಗೂಗೆಗಳ್ ತುಂಬಿರ್ದ ಗುಹೆಯಂ ಕಾಗೆಗಳ್ ಸುಟ್ಟ ಕಥೆ.

ವ॥ ಅನೇಕಾಕಾರಮಹಾಮಹೀರುಹಷಂಡಮಂಡಿತಮಪ್ಪ ಕಾಂತಾರಾಂತರಾಳದೊಳನೂನವಿಶಾಲಪತ್ರಚ್ಛತ್ರನಿರಾಕೃತದಿವಸಕರಪ್ರಕಾಶಮು[6]ಮಮೃತ[6]ಕಿರಣಬಿಂಬಾಯಮಾ[7]ನಶೀತಳ[7]ಚ್ಛಾಯಾಪರಿಪೀತ

ಪಾ—1. ಕನ. ಗ॥ 2. ಲಲ. ಗ॥ 3. ಸ್ವದಮಂ. ಕ॥ 4. ಸುಖದೆ. ಕ॥
5. ಎಂಬ. ಕ॥ 6. ಮುದ್ಧೃತ. ಕ॥ 7. ನಾಸಿತ. ಕ॥

ಪಥಿಕಜನಶ್ರಮಜನಿತಸ್ವೇದಬಿಂದುಸಂದೋಹಮುಮಪ್ಪ ವಟವಿಟಪಿ ಯೆ ತನಗೆ ರಾಜಧಾನಿಯಾಗೆ,

ಶಮಿತಾರಾತಿಪ್ರಭಾವಂ ಪರಿಜನಸಹಿತಂ ರಾಗದಿಂದಿರ್ಪನತ್ಯು ।
ತ್ತಮಶುದ್ಧಾಮಾತ್ಯವರ್ಗಂವರಚರನಿಚಯಂಗುಪ್ತಮಂತ್ರಂಸುಮಿತ್ರಂ॥
ದ್ಯಮನುದ್ಯತ್ಕಾಕವೃಂದಾರಕಪತಿ ಪೆಸರಿಂ ಮೇಘವರ್ಣಂ ಪಯೋದಾ।
ಗಮ[1]ಶುಂಭನ್ಮೇ[1]ಘವರ್ಣಂ ಖಗಗಣಗಣಿಕಾವ್ರಾತಸಂಗೀತ[2]ವ[2]
ರ್ಣಂ ॥ 282 [೭

ವ॥ ಮತ್ತಮಾಬನದುತ್ತರದಿಗ್ಭಾಗದೊಳೊಂದುಯೋಜನಪ್ರಮಾ ಣಾಂತರದೊಳಂಜನಗಿರಿಯೆಂಬ ಪರ್ವತಮುಂಟು. ಅದಱ ನಿತಂಬಪ್ರ ದೇಶದೊಳ್ ಪಲವುಂ ಗಹ್ವರಂಗಳೊಳವು. ಅಲ್ಲಿ,

ಅರಿಮರ್ದನನೆಂ[3]ಬನುಳೂ ।
ಕರಾಜನಿರ್ಪಂ ಸಮಸ್ತ[3]ಪರಿವಾರಜನಂ ॥
ಬೆರಸನುಪಮಪ್ರತಾಪ[4]ಂ[4] ।
[5]ಗುರುತರಸತ್ವಂ ಮಹಾಗುಹಾಭ್ಯಂತರದೊಳ್[5] ॥ 283 [೧೪

ಅಂತಾತನೊಂದುದಿವಸಂ ಪಲವುಂ ಕಾಗೆಗಳ್ ನೆರೆದು ಕರೆವ ಸರಮನಾಲಿಸಿ ಕೇಳ್ದು ಪೂರ್ವವೈರಮಂ ನೆನೆದೀಕಾಕಬಲಂಗಳನಿಂದು ಕೊಂದಲ್ಲದೆ ಮಾಣೆನೆಂದು ನಿಜಪ್ರಧಾನಸೇನಾಧಿಪರಪ್ಪ ಕೌಶಿಕಬಲಂಗ ಳನೊಂದುಮಾಡಿ ಕೊಂಡು ನಡುವಿರುಳ್ ಪೊಱಮಟ್ಟು ಸಕಲಕಾಕಾ ಧೀಶ್ವರನಪ್ಪ ಮೇಘವರ್ಣನಿರ್ದ ಮಹಾವಟವಿಟಪಿಯಂ ಸುತ್ತಿ ಮುತ್ತಿ ಮಱದೊಱಗಿರ್ದ ಕಾಕಬಲಮೆಲ್ಲಮಂ ಬಱಕೆಯ್ದು ಪೇೞ ಪೆಸರಿಲ್ಲದೆ ಕೊಂದಾಕ್ಷಣದೊಳೆ ನಿಜನಿವಾಸಕ್ಕೆ ಮಗುೞ್ದಂ.

---

ಪಾ—1. ಶುಭ್ರಂ. ಮೇ ಗ ॥ 2. ಕ. ಗ ॥ 3. ಬಲೂಕಂ ಪರರಾಜನೆನಿಪ್ಪ ಸಕಲ. ಕ ॥
4. ಜ. ಗ ॥ 5. ಗಿರಿಸತ್ವಂಮಹಾಗುಹಾಂತರಾಳದೊಳಿರ್ಪಂ. ಕ ॥

ಅನ್ನೆಗಮೊಂದು ವಾಯಸಂ ನಿಜಸ್ವಾಮಿಯಪ್ಪ ಮೇಘವರ್ಣನಲ್ಲಿಗೆ ಬಂದು,

ಬಲಬಲಮ[1]ನುಱಿ[1]ದೆ ಕೌಶಿಕ |
ಬಲಮುದಿರದಿದಿರ್ಚಿ ಕೊಲ್ವ ತೆಱದಿಂದುದ್ಯ ||
ದ್ಬಲಬಲಮನುಱಿದೆ ಕೌಶಿಕ |
ಬಲಮುದಿರದಿದಿರ್ಚಿ ಕೊಂದು ಪೋದತ್ತೀಗಳ್ || 284

ಎಂದು ಬಿನ್ನಪಂಗೆಯ್ವುದುಮಿನಿಸಾನುಂ ಬೇಗದಿಂ

ಕುಮುದವನಶ್ರೀಕಾಂತಿಯು |
ಮಮೃತಕರದ್ಯುತಿಯುಮುಡುಗಣದ್ಯೋತಿಯುಮ ||
ಸ್ತಮಿಸೆ ಜಗನ್ನುತನುದಯಾ |
ದ್ರಿಮಸ್ತಕಸ್ಥಲಮನೇಱಿದಂ ದಿವಸಕರಂ || 285

ಅಂತಾದಿತ್ಯೋದಯಮಾಗಲೊಡಂ ಮೇಘವರ್ಣನೆರ್ದು ಕಾಕಬಲರುಧಿರಾರುಣೀಭೂತಮಾಗಿರ್ದ ಸಮರಾಂಗಣಮುಮನುಲೂಕನಿಕರಸೂಚೀಮುಖಚಂಚುಚರಣಪಕ್ಷಘಾತಕ್ಕದಿರದಿದಿರಾಂತು ಕಾದಿ ಸತ್ತವಾಯಸವೀರನಿಕಾಯಮುಮ[1]ನಲ್ಲಿಯೆ[2] ನೊಂದು ಬಸವೞಿದಿರ್ದ ಬಲಿಭುಗ್ಬಲಪ್ರಧಾನರಂ ಕಂಡು ಬೆಱಗಾಗಿರ್ದ ವಾಯಸಾಧೀಶ್ವರನಲ್ಲಿಗೆ ಕೆಲವು ವಾಯಸಂಗಳ್ ಬಿಱಿತೋಡಿ ಕಾಡೊಳ್ಕುಡಿರ್ದುವೆಲ್ಲಂ ಬಂದು—ದೇವಾ! ನಾವಿರುಳ[3]ನ[3] ಕಾಳೆಗಕ್ಕಲ್ಲೆವು; ಅಂತುಮಲ್ಲದೆ ನಮ್ಮ ಬಲಮುಮಂ ಪಗೆವರ ಬಲಮುಮನಱಿಯದೆ ಪೆಱದೆಗೆದಿರ್ದೆವು; ಇನ್ನಾವುದು ಬೆಸನೆಂದು ಬಿನ್ನಪಂಗೆಯ್ಯೆ— ಮೇಘವರ್ಣನಿಂತೆಂದಂ:— ಇಲ್ಲಿ ನೊಂದವರುಮಂ ವೃದ್ಧರುಮಂ ಸ್ತ್ರೀಬಾಲಕರುಮನುಯ್ದೊಂದು ದುರ್ಗಸ್ಥಾನದೊಳಿರಿಸಿ ಬೞಿಕ್ಕೆ ತಕ್ಕುದಂ ನೆಗೞ್ವಮೆಂದು ತನಗಸ್ವಯಾಗತರುಂ ಚತುರುಪಧಾವಿಶುದ್ಧರುಂ ನಯಶಾಸ್ತ್ರವಿದಗ್ಧರುಮಪ್ಪ

ಪಾ—1. ನಿರ. ಕ || ಗ ||   2. ನೞಿಯೆ. ಖ ||   3. ನ್ನ. ಗ ||

ಉದ್ದೀಪಿ, ಆದೀಪಿ, ಪ್ರದೀಪಿ, ಸಂದೀಪಿ, ಚಿರಂಜೀವಿಯೆಂಬ ಐವರ್ ಮಂತ್ರಿಗಳಂ ಬರಿಸಿ ಮೇಘವರ್ಣಂ ಈಪ್ರಘಟ್ಟನಕ್ಕೇಗೆ[1]ಯ್ವಮೆಂದು ಪೇೞಿ[1] ಮಂತ್ರಿಗಳಿಂತೆಂದರ್:—

ನಿಮ್ಮಡಿ ನಿಮ್ಮುತ್ಸುಕತೆಯಿ ।
ನೆಮ್ಮಂ ಬೆಸಗೊಳ್ವುದುಂ ಕರಂ ರಭಸದೆ ನಾ ॥ [೫
ವುಮ್ಮುನ್ನಮೆ ಬಿನ್ನವಿಸುವು ।
ದುರ್ಮ್ಮಾರ್ಗಮಿದಲ್ತು ನಾಡೆ ನೀತಿವಿರುದ್ಧಂ ॥ 286

ಅದೆಂತೆನೆ: —

ವಾಕ್ಯಂ॥ "ಮಂತ್ರನಿಸ್ರಾವಃ ಕಾರ್ಯಂ ವಿನಾಶಯತಿ; ಸರ್ವದ್ವಾರೇಭ್ಯೋ ಮಂತ್ರೋ ರಕ್ಷಿತವ್ಯಃ ॥" ೧೫೫ [೧೦

ಎಂಬ ನಯಮಂ ಪಿಡಿದರಸುಗಳಾಳೋಚನಕಾಲದೊಳ್ [2]ನಿಸ್ತಂಭ[2]ಮುಂ ನಿರ್ಗವಾಕ್ಷಮುಂ ನಿಶ್ಛಿದ್ರಭಿತ್ತಿಯುಂ ನಿರಾಶ್ರಯಮುಂ ಶುಕಶಾರಿಕಾದಿಶಕುನಿಕುಳವಿಕಳಮುಮಪ್ಪ ಮಂತ್ರಶಾಲೆಯೊಳ್ ಮಂತ್ರಿಗಳುಂ ತಾನುಂ ನಿಶ್ಚಿಂತಮಿರ್ದಾಳೋಚಿಸುವರದಱಿಂದಿಂತಪ್ಪವಸರದೊಳ್ ಮಂತ್ರಣಮುಚಿತಮಲ್ಲೆಂಬುದುಂ; ಮೇಘವರ್ಣಂ ನಿಜಾನುಗತಮಪ್ಪ ವಾಯಸಸಮುದಾಯಮಂ ಪೋಗಲ್ವೇೞ್ದು ಒಱಿಕ್ಕ ಮಂತ್ರಿಮಂಡಲಕ್ಕಿಂತೆಂದಂ:— [೧೫

ಅಗಣಿತಮೆನಿಪ್ಪ [3]ಮುಚ್ಛ್ರಾ[3] ।
ಯ್ಯಗರ್ವಮಂ ನಿಮ್ಮ ಮಂತ್ರಶಕ್ತಿಯನಿನಿಸಂ ॥
ಬಗೆಯದರಿಮರ್ದನಂ ಕಾ । [೨೦
ಗೆಗಳಂ ತವೆ ಕೊಂದನಿಲ್ಲಿಗಾವುದು ಕಜ್ಜಂ ॥ 287

ಟಿ— ೧೫೫. ಮಂತ್ರವು ಹೊಱಪಟ್ಟಲ್ಲಿ ಕಾರ್ಯವು ಕಿಡುವುದು; ಅದುಕಾರಣಮದು ಎಲ್ಲಾ ಕಡೆಯಿಂದಲೂ ಗೋಪ್ಯವಾಗಿ ರಕ್ಷಿಸಲ್ಪಡತಕ್ಕುದು.

ಪಾ—1. ಯ್ವಂ ಪೇೞಿಮೆಂಬುದುಂ. ಗ ॥ ಖ ॥ 2. ನಿರಸ್ತರಭಸ. ಕ ॥ ಗ ॥
3. ಮತ್ಕಾ. ಗ ॥

ಎಂಬುದುಂ; ಮಂತ್ರಿಮಂಡಲಮುಖ್ಯನಪ್ಪ ಉದ್ದೀಪಿಯಿಂತೆಂದಂ:— ನಿಮ್ಮಡಿ,

ವಾಕ್ಯಂ|| "[1]ಬಲವತಾವಷ್ಟಬ್ಧಸ್ಯ[1] ವಿದೇಶಗಮನಂ ತದನುಪ್ರವೇಶೋ ವಾ||" ೧೫೬

ಎಂಬ ನಯಮಂ ಪಿಡಿದು ಕೌಶಿಕಾಧೀಶನೊಳ್ ಪೊಕ್ಕು ಬಾೞ್ವುದುಮಲ್ಲದಾಗಳ್ ವಿದೇಶಗಮನಂಗೆಯ್ವುದುಮಲ್ಲದೆ ನಾಮೀಯವಸ್ಥೆಯೊಳ್ ಪೆಱತು ಕಜ್ಜಮನಾಳೋಚಿಸಿ ನೆಱೆಯಲುಂ ನಿಸ್ತರಿಸಲುಮಱಿಯವೆಂಬುದುಂ; ಕೇಳ್ದು ಪ್ರದೀಪಿಯೆಂಬ ಮಂತ್ರಿಯಿಂತೆಂದಂ:— ಈತಂ ಪೇೞ್ದ ತದನುಪ್ರವೇಶಕ್ಕಂ ವಿದೇಶಗಮನಕ್ಕಂ ದೋಷಮುಂಟದೆಂತೆನೆ:— ತದನುಪ್ರವೇಶಂಗೈದೆವಪ್ಪೊಡೆ ಬದ್ಧರೋಷಿಯುಂ ಯುದ್ಧಾಭಿಲಾಷಿಯುಮಕಾರಣದ್ವೇಷಿಯುಮಪ್ಪ ಪಗೆವನ ಮನೆಯಂ ಬಗೆಗೆಟ್ಟು ಪೊಕ್ಕಂದು ಸಾವಕ್ಕುಂ, ಮೇಣ್ ಸಂಗರಮಕ್ಕುಂ. ವಿದೇಶಗಮನಂಗೆಯ್ದೆವಪ್ಪೊಡೆ ಕೌಶಿಕಂಗಳೆಲ್ಲಿಯುಮೊಳವು, ಅಲ್ಲಿರ್ದುವು ನಮ್ಮ ಬಂದ ಕಾರಣಮಂ ಬೇಗಮಾರೈದು ಪರಿದರಿಮರ್ದನಂಗೆ ಪೇೞ್ದೊಡಾತನೀಯಂದದೊಳಿರುಳ್ ಬಂದು ಮುತ್ತದೆ ಮಾಣನದಱಿಂದಿದುವೆ ನಯಮಲ್ಲ. ನಮ್ಮ ಬಲದೊಳ್ ಭೀತರಲ್ಲದ ದೂತರನಟ್ಟಿ ಕೌಶಿಕಂಗಳ ಬರವನಱಿದಾಗಳೆ ಪರೆದು ಪೋಪಂ. ಅವು ಬಾರದ ಪಕ್ಷಮಿಲ್ಲಿರ್ದು ಸಹಾಯಾದಿಸಾಧನೋಪಾಯಂಗಳಂ ಮಾಡುತ್ತುಂ ದೇಶಕಾಲಂಗಳಂ ನೋಡುತ್ತುಮಿರ್ದು ಬಱಿಕದರ್ಕೆ ತಕ್ಕುದಂ ನೆಗೞ್ವಮೆಂಬುದುಂ ಮೇಘವರ್ಣನಾದೀಪಿಯೆಂಬ ಮಂತ್ರಿಯನಿಂತೆಂದಂ:— ಈಯುಪಾಯಕ್ಕುಪಾಯಮಾವುದುಮಂ ಕಂಡಿರಪ್ಪೊಡೆ ಪೇೞಿಮೆಂಬುದುಮಾತನಿಂತೆಂದಂ:— ಈಮಂತ್ರಿಗಳ್ ಪೇೞ್ದಂತೆ ಅರಿಮರ್ದನನಿನ್ನಪ್ಪೊಡಂ ಸಂತ

ಟಿ— ೧೫೬. ಬಲಿಷ್ಠನಾದ ಶತ್ರುವಿಂ ಪಿಡಿಯಲ್ಪಟ್ಟವನು, ಆ ಶತ್ರುವನೊಳಪೊಕ್ಕುಬಾೞ್ವುದು; ಅಲ್ಲದಾಗಳ್ ವಿದೇಶಗಮನಂಗಯ್ವುದು.

ಪಾ—1. ಬಲವದವಷ್ಟಂಭಸ್ಯ. ಕ ||

ಮಿರ್ದನಪ್ಪೊಡೀನಯಮಪ್ಪುದು, ಇರುಳ್ಗಾಳೆಗದೊಳ್ ಕೌಶಿಕಂಗಳೊಂದಪ್ಪೊಡಂ ಸತ್ತುವುಂ ನೊಂದುವುಮಿಲ್ಲಂ, ಅರಿಮರ್ದನಂ ನಡುವಿರುಳ್ ಬಾರದೆ ಮಾಣಂ, ನಾವಿರುಳ್ ಕಣ್ಗಾಣದ ಕುರುಡರಪ್ಪುದಱಿಂದುಲೂಕಂಗಳ್ ಚಂಚುಚರಣಂಗಳ ಪಕ್ಷಂಗಳ ಘಾತದಿಂ ಶತಚೂರ್ಣಮಾಗಿ ಪೊಯ್ಯಲೋಡಿಪೋಗುವುದಲ್ಲದೆ ಕಾಗಿ ತಳ್ತಿಱಿಯಲಱಿಯೆವದು ಕಾರಣದಿಂ, [೬

ಶ್ಲೋ॥ "ಜಿತೇನ ಲಭ್ಯತೇ ಲಕ್ಷ್ಮೀಃ ಮೃತೇನಾಪಿ ಸುರಾಂಗನಾಃ।
ಕ್ಷಣವಿಧ್ವಂಸಿನಿ ಕಾಯೇ ಕಾ ಚಿಂತಾ ಮರಣೇ ರಣೇ॥" ೧೫೭

[ಟೀಕು—ಕಾಳೆಗದಲ್ಲಿ ಕಾದಿ ಗೆಲ್ದೊಡೆ [1]ಹಿರಿದಪ್ಪ ಲಕ್ಷ್ಮಿಯಹುದು; ಸತ್ತನಾದರೆ[1] ದೇವಸ್ತ್ರೀಯರು ಕೊಂಡುಪೋಪರು; ಕ್ಷಣಭಂಗುರವಪ್ಪ ಶರೀರಕ್ಕೆ [2]ಕಾಳೆಗವಾಗಲಿ ಮರಣವಾಗಲಿ[2] ಚಿಂತಿಸಲಾಗದು.] [೧೧

ಎಂಬೀನಯಮಂ ಪಿಡಿದು ಸಮಸ್ತವಾಯಸನಿಕಾಯಮಂ ನೆರಪಿಕೊಂಡು ದಿವಸಾಂಧನಪ್ಪರಿಮರ್ದನನಂ ನಮ್ಮ ತಂದೆಯಪ್ಪರವಿಂದಮಿತ್ರನ ಬಲದಿಂ ಕಾದಿ ಕೊಂದೆವಪ್ಪೊಡೆ ಸುಖದಿಂ ಬಾೞ್ವೆವೆಂದೊಡಾತನ ಮಾತು ತನ್ನ ಮನಕ್ಕೆ ಬಂದು ಮೇಘವರ್ಣಂ ಸಂದೀಪಿಯೆಂಬ ಮಂತ್ರಿಯುಂ ನಿಮ್ಮಭಿಪ್ರಾಯ[3]ಮಾವುದೆಂದು ಕೇಳ್ವುದು[3] ಮಾತನಿಂತೆಂದಂ:—ಆದೀಪಿ ಪೇೞ್ದಂತೆ ಕಾದುವುದೆ ಕಜ್ಜಮಪ್ಪೊಡೆ ನಮ್ಮ ಬಲದೊಳ್ ಸೇನಾನಾಯಕಾದಿವೀರಾಗ್ರಣಿಗಳೆಲ್ಲಂ ಗೂಗೆಗಳ ಕಯ್ಯೊಳ ಕಾರಣಂ ಸತ್ತರ್; ಕೆಲರ್ ತುಱಿಲಸಂದರಱಿಯೆ ನೊಂದರ್ ವಿತರ್ಕಂ ಕ್ಷಮರಲ್ಲದೆ ನಿಂದರ್; ಇಂತು ನಮ್ಮ ಬಲಂ ಕೀಲ್ಕಳೆದ ಜಂತ್ರದಂತೆ ಕಳಕುಳಮಾಗಿರ್ದಪುದು. ಅಂತುಮಲ್ಲದೆ ಮೌಳಭೃತ್ಯಸುಹೃತ್ಸೇನಾ

ಟಿ—೧೯. ತುಱಿಲಸಂದರ್ = ಶೂರರ್.

ಪಾ—1. ಇಹದಲ್ಲಿ ಸಂಪತ್ತು ಪ್ರಾಪ್ತವಹುದು; ರಣಾಗ್ರದಲ್ಲಿ ಮಡಿನಾನೊಪೆ. ಕ॥
2. ರಣಾಗ್ರವಿಷಯದಲ್ಲಿ. ಕ॥ 3. ಯಮಂ ಪೇೞೆನೆಂಬುದು. ಗ॥

ಟವಿಕಬಲಂ ನಮಗಿಲ್ಲ. ಇಂತಪ್ಪ ದುಸ್ತರಾವಸ್ಥೆಯೊಳ್ ಕಾದುವುದು ಕಜ್ಜಮಲ್ಲ. ಅದೆಂತೆನೆ:—

ಶ್ಲೋ|| " ಪುಷ್ಪೈರಪಿ ನ ಯೋದ್ಧವ್ಯಂ ಕಿಂ ಪುನರ್ನಿಶಿತೈಶ್ಶರೈಃ |
ಯುದ್ಧಮಕ್ಷಯದೋಷಾಢ್ಯಂ ಪ್ರಧಾನಪುರುಷಕ್ಷಯಂ || " ೧೫೮

[ಟೀಕು—ಪುಷ್ಪಂಗಳಿಂದೊಳಗಾಗಿ ಕಾದಲಾಗದು, ತೀಕ್ಷ್ಣವಹ ಶರಂಗಳಿಂದೆಂತೂ ಕಾದಲಾಗದು, ಕಾಳಗವೆಂಬುದು ಕಿಡದ ದೋಷವುಳ್ಳುದು, ಪ್ರಧಾನಪುರುಷರಂ ಕಿಡಿಸುವುದು.]

ಎಂಬೀನೀತಿಯುಂಟು. ಅದಲ್ಲದೆಯುಂ ಪ್ರಯಾಣಶಕುನದೊಳ್ [1]ಉಲಿಯು[1]ನೊಂದಂ ಕಂಡಂತೆ ಕಳಿಯೆ ತಡೆಯದೆ ಗರವೊಡೆದಂತೆ ಮೇಲ್ವಾಯ್ದಿವಪ್ಪೊಡೆ, [2]ತಮ್ಮ ಮೇಲೆ ತಾನೆ ಮರಂಗಡಿದರೆಂಬಂತಕ್ಕುಂ.[2] ಎಂತುಂ ಪೂರ್ವೋಕ್ತಮಿಂತೆಂಬುದಲ್ತೆ—

ಶ್ಲೋ|| " ಕಿಂ ನ ಹಂತಿ ಸುತಂ ಮಿತ್ರಂ ಬಂಧುವರ್ಗಂ ಪ್ರಿಯಾಂ ಪತಿಂ |
ಸೇವ್ಯಮಾನೋ ಹಿ ದಂಡೇನ ಸಂದಿಗ್ಧವಿಜಯೋ ಯುಧಿ || " ೧೫೯

[ಟೀಕು—ಕಾಳಗದಲ್ಲಿ ಗೆಲ್ದಹೆನೆಂಬ ಸಂದೆಗವುಳ್ಳವಂ ತನ್ನ ಪುತ್ರರ್ ಮಿತ್ರರ್ ಬಂಧುಗಳ್ ಧನಸಂಪತ್ತುವೊಡೆಯನುಮಿಂತಿವರೆಲ್ಲರನು ಕಿಡಿಸುವಂ.]

ನಯವಿದನಲ್ಲಂ ಶಕ್ತಿ |
ತ್ರಯರಹಿತಂ ವ್ಯಸನಿ ವಿಗ್ರಹಾಸಕ್ತನನಿ ||
ಶ್ಚಯಬುದ್ಧಿ ವಿರಕ್ತಪ್ರಕೃ |
ತಿಯೆನಿಪ್ಪರಿನೃಪನೊಳಜಿವುದಜಿವುದು ನಯಮಂ || 288

ಸಮಬಲನೊಳಧಿಕಬಲನೊಳ್ |
ಸಮರಕ್ರೀಡಾಕ್ರಿಯಾಸಮರ್ಥನೊಳಧಿಕೋ ||
ದ್ಯಮನೊಳ್ ಮಾಳ್ಪುದು ಸಂಧಿಯ |

ಟಿ—೫. ಉಲಿ=ಶಕುನದ ಪಕ್ಷಿ.

ಪಾ1. ಅಳಿಯ. ಕ || ಗ ||   2. ನಮ್ಮಿಂನಾವೆ ಕಿಡುವಂತಕ್ಕುಂ. ಕ ||

ನವೋಘಮಾತ್ಮೀಯಬುದ್ಧಿಯುಂ ಬಗೆವ ನೃಪಂ || 289

ಮತ್ತಂ ಎಂತುಂ ಸುಭಾಷಿತಮಿಂತೆಂಬುದಲ್ತೆ—

ಶ್ಲೋ|| "ಪ್ರವೃದ್ಧಚಕ್ರೇಣಾಕ್ರಾಂತೋ ರಾಜ್ಞಾ ಬಲವತಾ ಬಲಃ |
ಸಂಧಿನೋ[1]ಪಹಿ[1] ಕುರ್ವೀತ ಕೋಶದಂಡಾತ್ಮಭೂತಯೇ ||" ೧೬೦

[ಟೀಕು—ಹೆಚ್ಚಿದ ರಾಜ್ಯವನಾಳ್ವ ಸಮರ್ಥನಹ ಅರಸಿನೊಡನೆ ಬಲಹೀನನಾಗಿರ್ದ ಅರಸು ತನ್ನ ಸೇನೆ ಭಂಡಾರ ಜೀವರಕ್ಷೆಗೋಸುಗ ಸಂಧಿಯನೆ ಮಾಡಿಕೊಂಬುದು.] [೬

ಅದಱಿಂ, ದೇವಾ! ನಾವಾವುದಾನೊಂದುಪಾಯದೊಳರಿಮರ್ದನನೊಳ್ ಸಂಧಾನಮಂ ಮಾಡಿ ನಿಂದು ಕಾಲಮುಮಂ ಕಜ್ಜಮುಮಂ ಬಗೆದು ಬಱಿಕ್ಕುಜ್ಜುಗಂಗೆಯ್ವಮೆನೆ; ಮೇಘವರ್ಣಂ ಪ್ರದೀಪಿಯ ಮಾತುಗಳ್ಗೆ ಕೋಪಂ ಪ್ರದೀಪಮಾಗೆ ಮನದೊಳ್ ಮುನಿದು ಎಂತುಂ ನೀನಪ್ಪೊಡೆ ಮಹಾಮಾತ್ಯನಾಗಿರ್ದಜ್ಞನಂತೆ ಕಾದಿದೊಡೆ ಸಾವಾದಪುದೆಂದೆನಗೆ ಭಯಂದೋಱಿ ನುಡಿವುದು ನಯಮುಂ ನೀತಿಯುಮಲ್ಲದೆಂತೆನೆ:— [೧೩

ಶ್ಲೋ|| "ಧರ್ಮಃ ಪ್ರಾಗೇವ ಚಿನ್ತ್ಯಸ್ಸಚಿವಮತಿಗತಿರ್ಭಾವನೀಯಾ ಸ್ವಬುದ್ಧ್ಯಾ|
ಜ್ಞೇಯಾ ಲೋಕಸ್ಯ ವೃತ್ತಿರ್ವರಚರನಯನೈರ್ಮಂಡಲಂ ಪ್ರೇಕ್ಷಣೀಯಂ||
ಪ್ರಚ್ಛಾದ್ಯೌ ರಾಗರೋಷೌ ಮೃದುಪರುಷಗುಣೌ ಕಾಲಯೋಗೇನ ಯೋಜ್ಯಾ|
ವಾತ್ಮಾ ಸಂರಕ್ಷಣೀಯೋ ರಣಶಿರಸಿ ಪುನಸ್ಸೋಪಿ ನಾಪೇಕ್ಷಣೀಯಃ||" ೧೬೧

[ಟೀಕು—ಧರ್ಮವು ಮೊದಲಲ್ಲಿ ವಿಚಾರಿಸಲ್ವೇಡಿದ್ದುದು ; ತನ್ನ ಬುದ್ಧಿಯಿಂ ಮಂತ್ರಿಗಳ ಬುದ್ಧಿಯು ಹವಣನಱಿವುದು ; ರಾಗದೋಷಂಗಳಂ ಮುಸುಂಕುವದು ; ಮೃದುಕಠಿನಗುಣಂಗಳಂ ಕಾಲೋಚಿತವಾಗಿ ನಿಯೋಗಿಸುವದು ; ದೇಶಕಾಲಂಗಳನು ಲೇಸಾ

ಪಾ—1. ವಾಸ್ತು. ಖ ||

2. ಶ್ಲೋ || ಧರ್ಮಃ ಪ್ರಾಕ್ಚಿಂತನೀಯಸ್ಸಚಿವಮತಿಗತಿರ್ಭಾವನೀಯಾ ಸ್ವಬುದ್ಧ್ಯಾ |
ಪ್ರಚ್ಛಾದ್ಯೌ ರಾಗದೋಷೌ ಮೃದುಪರುಷಗುಣೌ ಕಾಲಯೋಗ್ಯೇಷು ಯೋಜ್ಯೌ ||
ಜ್ಞೇಯಂ ದೇಶಾನುವೃತ್ತಂ ಪರಚರನಯನೈರ್ಮಂಡಲಂ ಪ್ರೇಕ್ಷಣೀಯಂ |
ರಕ್ಷ್ಯೇಪ್ಯಾತ್ಮಾ ನಮನ್ಯೈ ರಣಶಿರಸಿ ಪುನಸ್ಸೋಪಿ ನಾಪೇಕ್ಷಣೀಯಃ ||"

ಎಂದು ಕ || ಖ || ಪಾಠ.

ಅಱಿವುದು ; ಬುದ್ಧಿವಂತರಪ್ಪ ಚಾರರೆಂಬ ಕಣ್ಗಳಿಂ ಪರಮಂಡಲಮಂ ನೋಡಿಸುವುದು; ಉೞಿದ ಎಲ್ಲಾ ದೆಸೆಗಳಿಂ ತನ್ನಂ ಕಾದು ಕೊಂಬುದು. ]

ಎಂಬುದು ರಾಜನೀತಿಯುಂಟದಱಿಂ ಕ್ಷತ್ರಿಯಂ ಕದನಕ್ಕಳ್ಕಲಾಗದು; ಸಮರಾಂಗಣದೊಳಳ್ಕಿದೆವಪ್ಪೊಡೆ,

ಶ್ಲೋ || "ಪ್ರಾಣಪ್ರಿಣಲೋಭೇನ ಯಃ ಕರೋತಿ ಯಶೋವಧಂ | [೫
ಸ ಪಾಪಃ ಕೀಲಕಾರ್ಥೇನ ದಹನ್ನಿವ ಸುರಾಲಯಂ ||" ೧೬೨

[ಟೀಕು—ಆವನೊರ್ವಂ ಪ್ರಾಣ ವಸ್ತುವೆಂಬಿವಱ ಲೋಭದಿಂ ಕೀರ್ತಿಯಂ ಕಿಡಿಸಿ ಕೊಂಡಿಹನೊ ಆಪಾಪಿಷ್ಠಂ ಕೀಲಿಂಗೆ ದೇವಾಲಯಮಂ ಸುಡುವನೋಪಾದಿ ] [೮

ಎಂಬೀಶ್ಲೋಕಾರ್ಥದಿಂ ರಣಮರಣಭೀತಿಯಿಂದಪಖ್ಯಾತಿಯುಮೋಘಮಕ್ಕುಮೆಂದಿರ್ದಪುದು, ಅದಲ್ಲದೆಯುಂ, ಎನ್ನ ಸಮಸ್ತಬಲಮುಂ ಸತ್ತುಂ ಕೆಟ್ಟುಮಿತಸ್ತತಮಾದ ಕಾರಣದಿಂದೆನಗೆ ತೇಜೋಹಾನಿಯುಂ ಮನೋಗ್ಲಾನಿಯುಮಾಗಿರ್ಪುದದಱಿಂದಾಗೂಗೆಗಳನಿಂದೆ ಕೊಂದು ಕಾಗೆಗಳನವಱ ಬಸಿಱಿಂ ತೆಗೆಯದಂದೆನ್ನ ಮನದೞಲುಂ ಪೋಗದೆಂದು ಶೋಕರಸಮುಂ ಕ್ರೋಧರಸಮುಮೊಡವಳೆಯೆ ನುಡಿದ ಬಲಿಭುಕ್ಪತಿಯಂ ವಾಯಸಬಲಸಂಜೀವಿಯಪ್ಪ ಚಿರಂಜೀವಿ ಮಾರ್ಕೊಂಡು—ದೇವಾ! ನೀವಿಂತತ್ಯಾತುರರುಂ ಕೋಪಾತುರರುಮಾಗಿ ನುಡಿವುದು ನೀತಿಯಲ್ಲದೆಂತೆನೆ:— [೧೩

ಶ್ಲೋ || "ರಾಮಾತ್ಪರಶ್ಶೂರತರೋಸ್ತಿ ಕಶ್ಚಿತ್ ಪರಾಭವಂ ಸ್ತ್ರೀಹರಣಾತ್ತತೋನ್ಯತ್ |
ತಥಾಪಿ ರಾಮೋ ನ [1]ಶುಶೋಷ[1] ವಾರ್ಧಿಂ ಬಬಂಧ ಸೇತುಂ ವಿಜಯಾ[2]ಸಹಿಷ್ಣುಃ[2] ||"

[ಟೀಕು—ರಾಮನಿಂ ಧೀರರುಮಾರುಮಿಲ್ಲ; ಸ್ತ್ರೀಹರಣದಿಂ ಪರಾಭವಮಾವುದುಮಿಲ್ಲ; ಆಹಂಗಾದೊಡಂ ಶ್ರೀರಾಮಂ ಸಮುದ್ರಮಂ ಶೋಷಿಸಿದನಿಲ್ಲ; ಸೈರಣೆಯುಂ ಮಾಡಿ ಸೇತುವಂ ಕಟ್ಟಿ ಲಂಕೆಯುಂ ಕೊಂಡನಲ್ಲದೆ ತ್ವರಿತವ ಮಾಡಿದುದಿಲ್ಲ. ]

ಎಂಬ ನೀತಿವಾಕ್ಯಮುಂಟು. ಅದಱಿಂ, ನಿಮ್ಮಡಿ, ನೀವುಂ ಸಹಿಷ್ಣುವಾಗಿ ಪಗೆಯಂ ಬಗೆಯೊಳೆ ಕಾದಿ ಕೊಲ್ವುದೆಂದು ಬಿನ್ನಪಂಗೆಯ್ವುದುಂ; ಮೇಘವರ್ಣನಿಂತೆಂದಂ:— [೨೫

ಪಾ—1. ವಿವೇಶ. ಕ || ಗ || 2. ಸಪಿಷ್ಣುಃ. ಕ ||

ಶ್ಲೋ || "ಅನ್ಯದಾ ಭೂಷಣಂ ಪುಂಸಾಂ [1]ಕ್ಷಮಾ[1] ಲಜ್ಜೇವ ಯೋಷಿ[2]ತಾಂ[2] |
ಪರಾಕ್ರಮಃ ಪರಿಭವೇ [3]ವೈಯಾತ್ಯಂ ಸುರತೇಷ್ವಿವ[3] ||" ೧೬೪

[ಟೀಕು—ಪುರುಷರ್ಗೆ ಉಳಿದ ವೇಳೆಯಲ್ಲಿ ಕ್ಷಮೆಯೇ ಭೂಷಣಂ, ಪರಿಭವವಾದಲ್ಲಿ ಪರಾಕ್ರಮವಿರಬೇಕು; ಸ್ತ್ರೀಯರ್ಗೆ ಉಳಿದ ವೇಳೆಯಲ್ಲಿ ಲಜ್ಜೆಯೇ ಭೂಷಣಂ, ಸುರತದಲ್ಲಿ ದಿಟ್ಟತನವಿರಬೇಕು.]

ಶ್ಲೋ || "ನಿಂದಂತು ನೀತಿನಿಪುಣಾ ಯದಿ ವಾ ಸ್ತುವಂತು |
ಲಕ್ಷ್ಮೀಸ್ಸಮಾವಿಶತು ಗಚ್ಛತು ವಾ ಯಥೇಷ್ಟಂ ||
ಅದ್ಯೈವ ವಾ ಮರಣಮಸ್ತು ಯುಗಾಂತರೇ ವಾ |
ನ್ಯಾಯ್ಯಾತ್ಪಥಃ ಪ್ರವಿಚಲಂತಿ ಪದಂ ನ ಧೀರಾಃ ||" ೧೬೫

[ಟೀಕು—ನೀತಿಯಂ ಬಲ್ಲವರ್ ತಮ್ಮನಾರಾನುಂ ನಿಂದಿಸಲಿ ಮೇಣ್ ಸ್ತುತಿಸಲಿ ಐಶ್ವರ್ಯವುಂಟಾಗಲಿ ಮೇಣ್ ದರಿದ್ರನಾಗಲಿ, ಆಕ್ಷಣದಲ್ಲಿ ಮರಣವಾಗಲಿ ಮೇಣ್ ಯುಗಪರ್ಯಂತಂ ಬದುಕಲಿ, ವಿಚಕ್ಷಣರ್ ನ್ಯಾಯಮಂ ತಪ್ಪಿ ನಡೆಯರ್.]

ಎಂಬ ನೀತಿಗಳೊಳವಾದೊಡೇಂ?—ನೀಮಪ್ಪೊಡೆ ಶುಕ್ರ ಶಕ್ರ ಗುರು ಪರಾಶರ ಬಾಹುದಂತಿ [4]ನಂದ ಕೌಣಪ[4]ದಂತ ವಿಶಾಲಾಕ್ಷ ಕುಬೇರಾಭೀ[5]ರ[5]ಚಾಣಕ್ಯಾದಿ ಪುರಾಣಾಚಾರ್ಯಕೃತ[6]ನಯಶಾಸ್ತ್ರ[6]ಪ್ರಯೋಗಪ್ರವೀಣರುಂ, ಅಂತುಮಲ್ಲದೆ ದುಷ್ಟಪರಂಪರೆಯಿನಿಂತಪ್ಪ ವಿಷಮತರಮುಮತಿಸಂಕಟಮುಮಪ್ಪವಸರಕ್ಕೆ ಕರ್ತವ್ಯಮಾವುದೆನೆ; ಮಂತ್ರಿಚೂಡಾಮಣಿ ಚಿರಂಜೀವಿಯಿಂತೆಂದಂ:—

ನಯವಿದರಪ್ಪೀನಾಲ್ವ[7]ರ |
ನಯಮನಯಂ ದೇವ ನಿಮ್ಮ [7]ಪೇಳ್ದಿದೆ ಮಂತ್ರಂ ||
ನಿಯತಂ ತ್ವದೀಯಮಂತ್ರಂ |
ನಯಜ್ಞರನುಮತದಿನದುವೆ ದಲ್ ಪಂಚಾಂಗಂ || 290

ಅದೆಂತೆಂದೊಡೆ:—

ಪಾ—1. ತಮೋ. ಕ || 2. ತಃ. ಖ || 3. ವೈಪರೀತ್ಯಂರತೇಷ್ವಪಿ. ಗ ||
4. ನಂದನ ಕೋಪಣ. ಗ || 5. ಯ. ಗ ||
6. ನಯಚಾರಿತ್ರಶಾಸ್ತ್ರ. ಗ || 7. ರುಮಯನಯಯುತದೇವನಿಮಗೆ. ಖ ||

ವಾಕ್ಯಂ॥ [1]"ಸೋಮದೇವನೀತಿ[1]—ಕಾರ್ಯೋದ್ಯೋಗೋಪಾಯ, ಪುರುಷ ದ್ರವ್ಯಸಂಪತ್ತಿ, ದೇಶಕಾಲ[2]ಪರಿ[2]ಜ್ಞಾನ, ವಿಘ್ನಪ್ರತೀಕಾರ, ಕಾರ್ಯಸಿದ್ಧಿಯೆಂದಿಂತು ಮಂತ್ರವೈದು ಪ್ರಕಾರವಾಗಿಹುದು." ೧೬೬

ಎಂಬ ನೀತಿವಾಕ್ಯಮುಂಟಪ್ಪುದಱಿಂ, ರಾಜ್ಯಂಗೆಯ್ವಾತಂಗೆ ಮಂತ್ರಮೆ ಮುಖ್ಯಮದೆಂತೆನೆ:— [೫

ಸಮದಾರಿರಾಜವಿಜಯೋ।
ದ್ಯಮಕ್ಕೆ ಚತುರಂಗಬಲಮದೇವುದೊ ಸನ್ಮಂ॥
ತ್ರಮೆ ಸಾಲ್ಗುಂ ಪುಸಿಗುಮೆ ದೇ।
ವ "ಮಂತ್ರಮೂಲೋ ಹಿ ವಿಜಯ" ಎಂಬೀವಾಕ್ಯಂ॥ 291
ಅದಱಿಂ ಸಮಸ್ತವಸುಧಾ। [೧೦
ಸುದತೀಶಂ ಮಂತ್ರಮುಖ್ಯನಾದಂದುದ್ಯ॥
ನ್ಮದವದರಿರಾಜಮಧುಕರ।
ಕದಂಬಮಂ ನಿಜಪದಾಂಬುಜಕ್ಕೆಱಗಿಸುವಂ॥ 292

ಅಂತುಮಲ್ಲದೆ ಸಮಸ್ತವಸುಧಾವಳಯಮೆಲ್ಲಮಂ ಬಾಯ್ಕೇಳಿಸುವ ಬಲ್ಲಾಳ್ತನದೊಳಂ ವಿಜಿಗೀಷುವೃತ್ತಿಯನೆತ್ತಿಕೊಳ್ವೆನೆಂಬರಸಂ ಪ್ರಭುಮಂತ್ರೋತ್ಸಾಹಶಕ್ತಿತ್ರಯಸಂಪನ್ನನ[3]ಪ್ಪು[3]ದದೆಂತೆನೆ:— [೧೬

ಹರಿನೀಲವಜ್ರಮೌಕ್ತಿಕ।
ಮರಕತಮಾಣಿಕ್ಯಕಾಂಚನಾಂಚಿತವಸ್ತು॥
ತ್ಕರಮುಂ ವರಕರಿಹರಿಭಟ।
ಭರಮುಂ ಪ್ರಭುಶಕ್ತಿ ಭೂತಲೇಶಂಗೆಂದುಂ॥ 293
ಹಿತರರ್ಥಶಾಸ್ತ್ರಕುಶಲರ್।
ಚತುರುಪಧಾಶುದ್ಧರೆನಿಪ ವರಸಚಿವರೊಳ॥ [೨೦

ಟ—೧೪. ಬಾಯ್ಕೇಳಿಸುವ= ಆಜ್ಞಾವಶವರ್ತಿಯಾಗಿ ಮಾಡುವ.

ಪಾ—1. ಖ॥ ಪುಸ್ತಕದಲ್ಲಿ ಮಾತ್ರವಿಲ್ಲ. 2. ಪಿ. ಕ॥ 3. ನಕ್ಕುಮ. ಗ॥

ಸ್ವಿತವಾಗೆ ಮಾಪ್ಪಿ ಕಾರ್ಯ೯ಂ ।
ಪತಿಗೆಂದುಂ ಮಂತ್ರಶಕ್ತಿ ಮನುಮುನಿಮತದಿಂ ॥ 294
ಅಗಣಿತದೋರ್ಬಲದಿಂ ಸಂ ।
ಯುಗದೊಳ್ ಮಾಱಾಂತ ವೈರಿರಾಜನನೇನುಂ ॥
ಬಗೆಯದುಱದಿಱಿವ ವಿಕ್ರಾಂ ।
ತಗುಣಮನುತ್ಸಾಹಶಕ್ತಿಯೆಂಬರ್ ವಿಬುಧರ್ ॥ 295
ಎಸೆವೀಶಕ್ತಿತ್ರಯದೊಳ ।
ಮಸದೃಶಬಲಮಂತ್ರಶಕ್ತಿ ಮಿಗಿಲೆಂದುಂ ಮಂ ॥
ತ್ರಸಹಾಯನಪ್ಪ ಭೂಪತಿ ।
ಗೆ ಸುಸಾಧ್ಯಂ ಬಗೆದ ಕಾರ್ಯಮೆನಿತೊಳವನಿತುಂ॥ 296

ಅದೆಂತೆನೆ:—

ಅಭಿಭವಿಸಿದನುತ್ಸಾಹ ।
ಪ್ರಭುಶಕ್ತಿಸಮೇತನೆನಿಪ ಶುಕ್ರನನಮರ ॥
ಪ್ರಭುಮಂತ್ರಿ ಮಂತ್ರಶಕ್ತಿ ।
ಪ್ರಭಾವದಿಂದದಱಿನಗ್ಗಳಂ ಮಂತ್ರಬಳಂ ॥ 297
ನಿಯತಂ ಸಮ್ಯಙ್ಮಂತ್ರ ।
ಪ್ರಯೋಗಪಟುವೆನಿಪ ಭೂತಳಾಧೀಶ್ವರನ ॥
ಪ್ರಿಯುರಂ ಮರ್ದಿಸಿ ಧರೆಯಂ ।
ಜಯಲಕ್ಷ್ಮೀಧಾಮನಾಗಿ ಪರಿರಕ್ಷಿಸುಗುಂ ॥ 298
ಅಮರಾಹಿತರಿಂ ದುರ್ಮ೯ಂ ।
ತ್ರಮರಕ್ಷಣಮೆನಿಪ ಯಜ್ಞಮಱಿವಂತೞಿಗುಂ ॥
ಸಮುದಾಹಿತರಿಂ ದುರ್ಮ೯ಂ ।
ತ್ರಮರಕ್ಷಣಮೆನಿಪ ನೃಪಬಳಂ ನಿರ್ವ್ಯಾಜಂ ॥ 299

ಅದಱಿಂದರಸುಗೆಯ್ವಾತಂ ಮಂತ್ರಮುಂ ಮಾಲಾಮಂತ್ರಮಾಗ
ದಂತು ನೆಗೞಲೆವೇೞ್ಕುಮದೆಂತೆನೆ:—[1] ಮಂತ್ರಿಮಂಡಲದಾಪ್ತಪ್ರಜದ
ಧೂರ್ತವರ್ಗದ ಮದಪ್ರಲಾಪಸುಪ್ತಪ್ರಲಾಪಿತಂಗಳಿಂದಂ ಶುಕಶಾರಿಕಾ
ದಿತಿರ್ಯಗ್ಯೋನಿಗಳಿಂದಂ ಮಂತ್ರಂ ಭೇದಕ್ಕೆ ಸಲ್ಗುಮಂತಾಗಲೀಯದೆ
ಮಂತ್ರಮಂ ರಕ್ಷಿಸಲ್ವೇೞ್ಕುಮದೆಂತೆನೆ:—[1] [೫

ವಿಪುಳಾರ್ಥಮಂತ್ರಮುಂ ಯಾ ।
ನಪಾತ್ರಮುಂ ಭಿನ್ನಮಾದೊಡಱಿವರ್ ವಸುಧಾ ॥
ಧಿಪಕರ್ಣಧಾರರಿರ್ದರು ।
ಮಪರಿಮಿತಾತ್ಮೀಯಬಲಸಮೇತಂ ಕ್ಷಣದಿಂ ॥300 [೯

ಎನೆ; ಮೇಘವರ್ಣನಿಂತೆಂದಂ:—ಅಂತಪ್ಪೊಡೆ ನೀಂ ಪೇೞ್ದಿಂದ
ದೊಳರಸಂ ತಾನೆ ಮಂತ್ರಿಯಾಗಿ ಚಿಂತಿಸಿ ಮಾೞ್ಪುಗಲ್ವೇಡಿತ್ತೆನೆ; ಮ
ತ್ರಂ ಚಿರಂಜೀವಿಯಿಂತೆಂದಂ:—ನಾಂ ಮಂತ್ರಮನೆ ರಕ್ಷಿಪುದೆಂದೆನಲ್ಲದೆ
ಮಂತ್ರಿಗಳಾಗವೇೞ್ಕೆಂದೆನಲ್ಲೆಂ. ನಿಮ್ಮಡಿ, ನೀವಿಂತು ವಿಪರೀತಗ್ರಹ
ಣಂಗೆಯ್ದು ಶೂನ್ಯವಾದಿಗಳಾಗಿರಲಾಗದು. ಆದೊಡಮೇನರಸುಗೆಯ್ವ
ರುಂ ಕಾಮಕ್ರೋಧಲೋಭಮಾನಮದಹರ್ಷಪ್ರಮೋದಾಲಸ್ಯವಶದಿಂ
ದೆಂತಪ್ಪ ಬುದ್ಧಿವಂತರುಂ ತಮ್ಮಂ ತಾವಱಿಯರ್. ಅದಱಿಂದೆನಿತು
ಸಮರ್ಥನಾದೊಡಂ ಆಪ್ತರಪ್ಪ ಬುದ್ಧಿವಂತರೊಳಂ ಮಂತ್ರಿಗಳೊಳ
ಮಾಲೋಚಿಸಿ ನೆಗೞಲೆವೇೞ್ಕುಮದೆಂತೆನೆ:— [೧೮

ಶ್ಲೋ ॥ "ಅಸಹಾಯಸ್ಸಮರ್ಥೋऽಪಿ ತೇಜಸ್ವೀ ಕಿಂ ಕರಿಷ್ಯತಿ ।
[2]ನಿವಾತಪತಿತೋ ವಹ್ನಿ ಸ್ಸ್ವಯಮೇವ ಪ್ರಶಾಮ್ಯತಿ[2] ॥" ೧೬೨

[ಟೀಕು—ತೇಜಸ್ಸುಳ್ಳ ಸಮರ್ಥನಾದೊಡಂ ಸಹಾಯವಿಲ್ಲದವನೇತಕ್ಕೂ ಪ್ರಯೋ
ಜನವಿಲ್ಲ. ಅದು ಹೇಗೆಂದೊಡೆ —ಗಾಳಿಯಿಲ್ಲದಿಕ್ಕಿದ ಕಿಚ್ಚಿನಹಗೆ.]

ಪಾ—1. ಕ ॥ ಪುಸ್ತಕದಲ್ಲಿಲ್ಲ; ಮಂತ್ರಿಮಂಡಲದಾಸಕ್ತಿಸಲ್ವೇೞ್ಕುಮದೆಂತೆಂದೊಡೆ. ಖ ॥
2. ತುಷೇನಾಪಿ ಪರಿತ್ಯಕ್ತಸ್ತಂಡುಲೋ ನ ಪ್ರರೋಹತಿ. ಖ ॥

ಅಪಗತಸಹಾಯನೆನಿಸಿದ ।
ನೃಪನೆನಿತು ಸಮರ್ಥನಾದೊಡಂ ನಿಜತೇಜೋ ॥
ವಿಪುಳಜ್ವಳನಶಿಖಾವಳಿ ।
ಗೆ ಪಡೆಯಲಾಱಂ ಸುವೃದ್ಧಿಯಂ ಭೂತಳದೊಳ್ ॥ 301 [೩

ಅದಱಿಂದರಸುಗೆಯ್ವಾತಂ ಸಹಾಯಸಂಪನ್ನನುಂ ಪ್ರಭುಮಂತ್ರೋತ್ಸಾಹಶಕ್ತಿಯುಕ್ತನುಮಾಗಿ ನೆಗೞಲೆವೇೞ್ಕುಂ. ಎಂತುಂ ವಿಜಿಗೀಷುವೃತ್ತಿಯನೆತ್ತಿಕೊಂಡು ನೆಗೞ್ವಂದು ಶತ್ರುಗಳ ಸಮಾವಸ್ಥೆಯೋಗಕ್ಷೇಮಮುಮಂ ವಿಚಾರಿಸುವುದದೆಂತೆನೆ:— [೪

ಉದ್ಯೋಗಹೀನನಾಗಲು ।
ಮುದ್ಯನ್ಮಿತ್ರಾತ್ಮದುರ್ಗಬಲರಹಿತನಸ ॥
ದ್ವಿದ್ಯಾಪ್ರಿಯನೆನಿಪವನು ।
ಚ್ಛೇದ್ಯಂ ಶತ್ರುಗೆ ನಿರಂತರಂ ಭೂತಲದೊಳ್ ॥ 302

ಅನುಪಮದುರ್ಗಬಲೋಪೇ ।
ತನಾಗಿಯುಂ ವಿಪುಳಮಂತ್ರವಿಕ್ರಮಸಂಯು ॥
ಕ್ತನುಮಲ್ಲದಿರ್ಪವಂ ಪೀ ।
ಡನೀಯನೀಡಿತನಯಾಗಮಜ್ಞರ ಮತದಿಂ ॥ 303 [೧೫

ದುರ್ಗಗುಣಾನ್ವಿತಮೆನಿಸಿದ ।
ದುರ್ಗದ ಬಲಮುಳ್ಳೊಡಂ ಬಲೋಪೇತಸುಹೃ ॥
ದ್ವರ್ಗಬಲಾನ್ವಿತನಪನಯ ।
ಮಾರ್ಗನೆನಿಪ್ಪವನೆ ಕರ್ಷಣೀಯನವೋಘಂ ॥ 304

ವ॥ ಇಂತಪ್ಪ ಪಗೆವರಂ ನಿರ್ಮೂಲಿಸುವುದು ಛೇದನಮೆಂಬುದಕ್ಕುಂ; ಹಸ್ತ್ಯಶ್ವರಥಪದಾತಿಬಲಕ್ಷಯಮಂ ಮಾೞ್ಪುದು ಪೀಡನಮೆಂಬುದಕ್ಕುಂ; ಮತ್ತಮಿವನಱಿದುಂ ದೇಶಕಾಲಬಲಮನಱಿದುಂ ಪ್ರಯೋಗಿಸುವುದದಂತಿರ್ಕೆ; ನಾವೀಗಳ್ ಕೌಶಿಕಾಧೀಶ್ವರಂಗೆ ಶತ್ರುಗಳಾಗಿರ್ದು,

ವಾಕ್ಯಂ|| " ದುರ್ಗಹೀನೋ ನರಪತಿಃ ಪಾತಾಭ್ರಾ)ವಯಾವೈಸ್ಸವಃ || " ೧೬೪

[ಟೀಕು—ದುರ್ಗಂಗಳಿಲ್ಲದರಸು ಗಾಳಿಯೊಡಗೂಡಿದ ಮೇಘಂಗಳಹಗೆ. ]

ಎಂಬ ನೀತಿಯುಂಟದಱಿಂದಾದುರ್ಗಂಗಳೆಂತಪ್ಪುವೆಂದೊಡೆ:—

ಶ್ಲೋ|| " ದುರ್ಗಂ ಚತುರ್ವಿಧಂ ಪ್ರೋಕ್ತಮಾಪತ್ಸ್ವಾಶ್ರಯಕಾರಣಂ |
ಜಾಲಕಂ ಪಾರ್ವತಂ ಚೈವ ಧಾನ್ವನಂ ವನಜಂ ತಥಾ || " ೧೬೯ [೫

[ಟೀಕು-ಆಪತ್ತಿಂಗಾಶ್ರಯವಾಗಿ ಜಲದುರ್ಗ, ಗಿರಿದುರ್ಗ, ಸ್ಥಳದುರ್ಗ, ವನದುರ್ಗವೆಂದಿಂತು ದುರ್ಗಂಗಳ್ ನಾಲ್ಕು ತೆಱನಕ್ಕುಂ. ]

ಇಂತು ಚತುರ್ವಿಧವಾಗಿಯುಮಪ್ಪವಿಧಮಕ್ಕುಮದೆಂತೆಂದೊಡೆ:—ಉಭಯನದೀಸಂಗಮುಮಪ್ಪ ಮಧ್ಯಪ್ರದೇಶಮಂತರ್ದ್ವೀಪಮೆಂಬುದಕ್ಕುಂ; ಅಗಾಧಮಪ್ಪ ಬೃಹತ್ತಟಾಕಂಗಳುಂ ಕರ್ಕಶಖರದಂಡಸಲಿಲವಿತಾನವಿರಾಜಿತಸರೋವರಪರಿವೃತಮಪ್ಪ ಭೂಪ್ರದೇಶಂ ಮಹಾಸ್ಥಳಮೆಂಬುದಕ್ಕುಮೀಯೆರಡುಂ ಜಲದುರ್ಗಭೇದಂಗಳ್. ಗರುಡಂಗಂ ಅಡರಲ್ಬಾರದ ಸಮುತ್ತುಂಗಶಿಖರಂಗಳ್ ನಾಲ್ಕುಂ ದೆಸೆಯೊಳುವಾಗಿ ಬಾಗಿಲೊಂದೆಯಾಗಿರ್ಪುದು ಗುಹ್ಯಾಖ್ಯಮೆಂಬುದಕ್ಕುಂ; ಆವ ದೆಸೆಯೊಳುಂ ಬಟ್ಟೆಯಿಲ್ಲದೆ [1]ಸಱಿವೀಱ್ದು[1]ಚ್ಚಮಪ್ಪ ಬೆಟ್ಟುಗಳ ನಡುವೆ ಕರಮಸಿದಪ್ಪ ಬಟ್ಟೆಯಾ[2]ಗೇಱುವು[2]ದುಂ ಪ್ರಸ್ತರಮೆಂಬುದಕ್ಕುಂ: ಈಯೆರಡುಂ ಗಿರಿದುರ್ಗದ ಭೇದಂಗಳ್. ಪೊಱಗೆ ನೀರುಂ ಭೂರಿಭೂರುಹಸಂದೋಹಮುಂ ತೃಣಗುಲ್ಮಲತಾಸ್ತೋಮಮುಮಿಲ್ಲದೆ ಬಳಗೆ ತೃಣಕಾಷ್ಠಜಲಸಂಪೂರ್ಣಮಪ್ಪುದು [3]ಉದಕ[3]ಸ್ತಂಭಮೆಂಬುದಕ್ಕುಂ; ಪೊಱಗೆ ಕರಮುಪ್ಪುಮಪೇಯಮುಮಲ್ಪಜಲಮುಮುಳ್ಳುದು ವೈರಿಣಿಯೆಂಬುದಕ್ಕುಂ: ಈಯೆರಡುಂ ಸ್ಥಲದುರ್ಗಭೇದಂಗಳ್. ಜಲಪರಿಪೂರ್ಣಜಲಾಶಯಮುಂ ದು[4]ರ್ದರ[4]ಕರ್ದಮೋಪೇತಾತಿಶೀತಮಪ್ಪುದು ಕ

ಪಾ—1. ಕಸರಿವೇಱ್ದು. ಕ || 2. ಗಿರ್ಪು. ಕ ||
3. ಏರುಥಕ. ಖ || 4. ರ್ಧರ. ಖ ||

ರ್ದವೋದಕಮೆಂಬುದಕ್ಕುಂ; ಅನೇಕತರುನಿಕರಪರಿವೃತಮುಂ ತೃಣಪಟಲಪ್ರಾವೃತಮುಮಪ್ಪುದು ಸ್ತಂಭನಗಹನಮೆಂಬುದಕ್ಕುಂ: ಈಯೆರಡುಂ ವನದುರ್ಗದ ಭೇದಂಗಳ್. ಇಂತಷ್ಟವಿಧಮಪ್ಪ ದುರ್ಗಂಗಳೊಳಂ ನಮ್ಮಾಶ್ರಯಿಸಿದ ದುರ್ಗಕ್ಕೆ ದುರ್ಗಗುಣಮಿಲ್ಲ; ಮಿತ್ರಗುಣಸಂಪನ್ನರಪ್ಪ ಪತತ್ರಿಸ್ತೋಮಂಗಳಲ್ಲವಪ್ಪುದಱಿಂ ಮಿತ್ರಬಲಮಿಲ್ಲ; ನಮ್ಮ ಬಲಮೆಲ್ಲಂ ಕಳಕುಳಮಾದ ಕಾರಣದಿಂ ತಂತ್ರಬಲಮಿಲ್ಲ; ಕೌಶಿಕಂಗಳ್ ಬಂದು ಇರುಳ್ ಕಾದುವುದಱಿಂ ಕಾಲಬಲಮಿಲ್ಲ. ಇಂತೀ ಬಲಂಗಳೊಳೊಂದುಮಿಲ್ಲದ ಕಾರಣದಿಂ ನಿಮ್ಮಡಿಗುತ್ಸಾಹಶಕ್ತಿ ಸಾಧಾರಣಂ. ಅದಱಿಂ ನಾವುಮುಚ್ಛೇದ್ಯಶತ್ರುಗಳಾಗಿರ್ದೆವೆಂದು ನುಡಿದ ಚಿರಂಜೀವಿಯ ಮಾತಂ ಮೇಘವರ್ಣಂ ಕೇಳ್ದು ಮೇಘಗರ್ಜನೆಯಿಂ ಗರ್ಜಿಸಿ ಬೞಿಕ್ಕಿಂತೆಂದಂ:— [೧೨

ಪಿರಿದಾಳಾಪದೊಳೇಂ ಸಂ ।
ಗರದೊಳ್ ಭೀಕರಮೆನಿಪ್ಪ ಮದ್ಭುಜಬಲದಿಂ ॥
ದರಿಮರ್ದನನಂ ತವೆ ಕೊಂ ।
ದರಿಮರ್ದನನೆಂಬ ಪೆಸರನಾಂ ತಳೆದಪ್ಪೆಂ ॥ 305 [೧೩

ಎಂದು ನುಡಿದ ಮೇಘವರ್ಣನ ಮಾತಂ ಚಿರಂಜೀವಿ ಕೇಳ್ದು ಇಂತೆಂದಂ:—ನಿಮ್ಮಡಿ, ನೀಮರಿಮರ್ದನನೊಳ್ ಕಾದಿ ಗೆಲ್ವುದೊಂದುಂ ಸಂದೆಯಮಿಲ್ಲಂ. ಆದೊಡಾಗೂಗೆಗಳ್ ದಿವಸಾಂಧಂಗಳಾಗಿಯುಂ ನಮ್ಮೊಳ್ ಪಗೆಯುಂಟಾಗಿಯುಂ ಘೋರಾಂಧಕಾರದಿಂದತಿಸಂಕೀರ್ಣಮಪ್ಪ ಗುಹಾಗಹ್ವರಂಗಳೊಳ್ ಪೊಕ್ಕಿರ್ಪುವು. ಅದುಕಾರಣದಿಂದಾವ ಕಾಲಂಗಳನುಪಾಯಮಿಲ್ಲದೆ ಕಾದಿ ಕೊಲಲುಂ ಗೆಲಲುಂ ಬಾರದು. ಅಂತುಮಲ್ಲದೆ,

ಮತಿಹೀನರಪ್ಪ ಮನುಜರ್ ।
ಪತಂಗವೃತ್ತಿಯನೆ ಕೊಂಡು ಕೊನೆಯುತ್ತಿರ್ಪರ್ ॥
ಸತತಮದೆಂತುಂ ವಿಬುಧ ।
ಪ್ರತತಿಗನಿಷ್ಟಂ ನಯಾಗಮಕ್ಕೆ ವಿರುದ್ಧಂ ॥306
ತಂತ್ರಾವಾಸನಿದಂಪರ ।
ತಂತ್ರಪುವಿಭೇದವಶ್ಯತಂತ್ರಂ ದಕ್ಷಂ ॥
ಮಂತ್ರಜ್ಞಂ ವಿನಯಾನ್ವಿತ ।
ಮಂತ್ರಿಪ್ರಕರಂ ಸುಮಿತ್ರನಮಳಚರಿತ್ರಂ ॥307
ವ್ಯಸನವಿದೂರಂ ನಯಶಾ ।
ಲಿ ಸತ್ಯವಾಕ್ಯಂ ಕೃತಜ್ಞನಸ್ತಬ್ಧಂ ಕ್ಲೇ ॥
ಶಸಹಿಷ್ಣು ಸುತೇಜನಮಾ ।
ತ್ಯಸುಮಂತ್ರಿಸಮೇತನಖಿಲವಿಜ್ಞಾನವಿದಂ ॥308
ಕುಲಜಂ ಸೋತ್ಸಾಹಂ ಸ್ಥೂ ।
ಲಲಕ್ಷನಭಿಮಾನಿ ಬುದ್ಧಿಮನ್ತಂ ಚತುರಂ ॥
ಬಲಯುಕ್ತಂ ವಾಗ್ಮಿ ಕಲಾ ।
ಕಲಿತಂ ಶರಣಾಗ[1]ತೈಕ[1]ರಕ್ಷಣದಕ್ಷಂ ॥309
ವಿಪುಲತರಕೋಶನಕ್ರೂ ।
ರಪರಿಜನಂ ದೇಶಕಾಲವೇದಿ ದೃಢಂ ನೀ ॥
ತಿಪರಂ ಕ್ಷಮಾನ್ವಿತಂ ಜಿತ ।
ರಿಪುಷಡ್ವರ್ಗಂ ಪ್ರಭೂತನನುಪಮದುರ್ಗಂ ॥310
ಗುರುದೇವದ್ವಿಜಭಕ್ತಂ ।
ತರುಣವಯಸ್ಕಂ ಪರೇಂಗಿತಜ್ಞನುದಾರಂ ॥
ಪರಿವಾರಕಲ್ಪವೃಕ್ಷಂ ।
ಪರದಾರವಿದೂರನಖಿಲಭುವನಾಧಾರಂ ॥311

ಪಾ—1. ತಜ್ಞ. ಕ ॥ ಖ ॥ ಗ ॥

ಪ್ರಣತಾರಾತಿ ಘನುಗುರ್ಣಾ ।
ಕಿಣೀಕೃತೋದ್ಯತ್ಪ್ರಕೋಷ್ಠನನುಪಮಧೈರ್ಯಂ ॥
ರಣಕೇಳೀಲೋಲಂ ವಾ ।
ರಣವಾಜಿರಥಾಶ್ವಭಟಬಲಪ್ರಖ್ಯಾತಂ ॥312
ಎನೆ ನೆಗೞ್ದ* ನೃಪಂ ತನಗಹಿ ।
ತನಾಗೆ ಮೈಮಱೆದು ನೆಗೞ್ವ* ಭೂಪಂ ನಿಜಸೈ ॥
ನ್ಯನಿತಂಬಿನೀಜನಾಕ್ರಂ ।
ದನಮಂ ಕೇಳುತ್ತುಮಿರ್ಪನಿರುಳುಂ ಪಗಲುಂ ॥313

ಅದಱಿಂ ಭೂಭುಜಂ ಸಮುತ್ಸುಕನಾಗಲಾಗದು. ಅದೆಂತೆನೆ:— ಧರ್ಮಪುತ್ರಂ ಜೂದಾಡಿ ಮೇದಿನಿಯಂ ಸೋಲ್ತು ಸಹೋದರರ್ಸಹಿತಮರಣ್ಯಮಂ ಪೊಕ್ಕೊಡೆ ಪುಣ್ಯವಿಹೀನರಾಗಿರ್ದರಂ ದ್ರೌಪದಿ ಕಂಡು ತಾನುಂ ವನವಾಸದಾಯಾಸಕ್ಕೆ ಬೇಸತ್ತು ನಿಜಪತಿಗಿಂತೆಂದಳ್:—ದೇವಾ, ನೀಂ ನಿನ್ನ ನನ್ನಿಯನೆ ಕಾದು ನಿನ್ನನುಜರ್ ಬನ್ನದ ಕೂೞಿನುಂಡರ್ ಪನ್ನೆರಡುವರ್ಷಂ ಬೇಡರಂತಡವಿಯೊಳ್ ನಾರ ಸೀರೆಯನುಟ್ಟು ಬೇರುಮಂ ಬಿಕ್ಕೆಯುಮಂ ತಿಂದು ಕಂದಿ ಕುಂದಿ ಪಂದೆಱು ಮನದಂತಳ್ಳಾಡುತಿರ್ದಪರ್; ಇವರಂ ಕೌರವರ್ಗೆ ತೊಡರ್ದು ಬಿಡು ಪಿಡಿದಿರದಿರೆಂದು ಮೂದಲಿಸಿ ನುಡಿದ ಪಾಂಚಾಲರಾಜತನೂಜೆಗೆ ಧರ್ಮರಾಜತನೂಜನಿಂತೆಂದಂ:—

ಶ್ಲೋ॥ " ಯಃಶೋಧಿಗಂತುಂ ಸುಖಲಿಪ್ಸಯಾ ವಾ ।
ಮನುಷ್ಯಸಂಖ್ಯಾಮತಿವರ್ತಿತುಂ ವಾ ॥
[1]ಮಹೋ[1]ತ್ಸುಕಾನಾಮಭಿಯೋಗಜನ್ಮಾ ।
ಸಮುತ್ಸುಕೇವಾಂಕಮುಪೈತಿ ಲಕ್ಷ್ಮೀಃ ॥ " ೧೩೦

ಪಾ 1. ನಿರು. ಖ ॥

[ಟೀಕು—ಕೀರ್ತಿಯುನ್ನೈದಲೋಸ್ಕರಂ ಮೇಣ್ ಸುಖಂಬಡೆಯುಲೋಸ್ಕರಂ ಮೇಣ್ ಸಾಮಾನ್ಯಜನಂಗಳನತಿಕ್ರಮಿಸಲೋಸ್ಕರಮಾಗಿ ಆಳಿಪಿಲ್ಲದೆ ಉದ್ಯೋಗಂಗೆಯ್ವ ಮನುಷ್ಯರ ತೊಡೆಯ ಮೇಲೆ ಲಕ್ಷ್ಮಿ ನೆಲಸಿಹಳು.]

ಎಂಬೀನೀತಿಯನಜಾತಶತ್ರು ಪೇೞ್ದಂ.

ಅಂತುಮಲ್ಲದೆಯುಂ, [೯

ಸಮರಪ್ರಾರಂಭದೊಳ್ ಕೌಶಿಕಶಕುನಿಗಣಾಧೀಶನೊಳ್ಕಾದಿ ಗೆಲ್ವು ।
ದ್ಯಮಮಿೀಗಳ್ ಕೂಡದೆಂತುಂ ನಮಗೆ ಬಹುತರಾಳಾಪದಿಂ ಬರ್ಪುದೇಂ
ದೇಂ॥ ವ ಮಹಾಶಾಸ್ತ್ರ[1] ಪ್ರಾಜ್ಞರುಂ ಜ್ಞರು[1] ಮೆನಿಪ ಮುನೀಂದ್ರೋತ್ತಮರ್
ಪೇೞ್ದ ನೀತಿ ॥ ಕ್ರಮದಿಂ ಷಾಡ್ಗುಣ್ಯಮಂ ಯೋಜಿಸುವುದೆ ಸುನಯಂ
ಪ್ರಾಪ್ತಕಾಲಾನುರೂಪಂ ॥314 [೧೦

ಎನಲಾಷಾಡ್ಗುಣ್ಯಮೆಂತೆಂದೊಡೆ:— ಸಂಧಿವಿಗ್ರಹಯಾನಾಸನ[2]ಸಂಶ್ರಯ[2]ದ್ವೈಧೀಭಾವಮೆಂದಾಱು ತೆಱನಾಗಿರ್ಕುಂ. ಅಲ್ಲಿ ಬಲವಂತನಪ್ಪ ಪಗೆವಂ ಮೇಲೆತ್ತಿ ಬರೆ ವಸ್ತುವಾಹನಂಗಳನಿತ್ತಾತನಂ ಸಂತೈಸುವುದು ಸಂಧಾನಮೆಂಬುದಕ್ಕುಂ. ವಿಜಿಗೀಷುಗಳಿರ್ವರುಂ ಪರಸ್ಪರಾಹಂಕಾರಂಗೆಯ್ವುದು ವಿಗ್ರಹಮೆಂಬುದಕ್ಕುಂ. ಶಕ್ತಿತ್ರಯಸಂಪನ್ನರಪ್ಪ ವಿಜಿಗೀಷುಗಳಿರ್ಬರುಂ ಮೇಲೆತ್ತಿ ಬರ್ಪುದು ಯಾನಮೆಂಬುದಕ್ಕುಂ. ಅರಿವಿಜಿಗೀಷುಗಳೊರ್ವರೊರ್ವರ ಮೇಲೆ[3]ತ್ತಿಯೊತ್ತ[3]ಲಾಱದೆ ನಿಲ್ವುದು ಆಸನಮೆಂಬುದಕ್ಕುಂ. ನಿಜಬಲಮಿಲ್ಲದೆ ಶತ್ರುವಿಜಿಗೀಷುವಾದೊಡಾಶ್ರಯಿಸುವುದು ಸಂಶ್ರಯಮೆಂಬುದಕ್ಕುಂ. ಬಲವಂತರಪ್ಪ ಶತ್ರುಗ[4]ಳ ನಡುವೆ[4] ದುರ್ಬಲನಪ್ಪ ನೃಪ[5]ನಾ[5] ರಿಪುಗಳಂ ವಾಙ್ಮಾತ್ರದಿನತಿಸಂಧಾನಂಗೆಯ್ದು ತನ್ನ ಮನಮ[6]ನೆನ್ನರು[6] ಮಱಿಯದಂತು ಕಾಕಾಕ್ಷಿಗೋಳಕನ್ಯಾಯದಿಂದಿರ್ಪುದು ದ್ವೈಧೀಭಾವಮೆಂಬುದಕ್ಕುಂ. ಇಂತು ಷಾಡ್ಗುಣ್ಯಾಭಿಪ್ರಾಯ

ಪಾ—1. ತಜ್ಞರು. ಗ ॥ 2. ಸಮಾಶ್ರಯ. ಖ ॥ ಕ ॥ 3. ಯೆತ್ತ. ಗ ॥
4. ಳೊಡನೆ. ಗ ॥ 5. ನಾಯಿರ್ವರ್. ಗ ॥ 6. ನನ್ಯರು. ಗ ॥

ದೊಳೀಗಳನವಸರಕ್ಕೆ ಸಂದೀಪಿ ಪೇಳ್ದಿಂತೆ ಸಂಧಿಯಂ ಮಾಡವೇಱ್ಕುಂ. ಆಸಂಧಿಯಾವುವೆಂದೊಡೆ:—[1]ಸಂಪ್ರದಾನ,[1] ಕಪಾಲ, ಉಪಹಾ[2]ಸನ,[2] ಸಂತಾನ, ಸಂಗತ, ಉಪನ್ಯಾಸ, ಪ್ರತೀಕಾರ, ಸಂಯೋಗ, ಪುರುಷಾಂತರ, ಅದೃಷ್ಟಪುರುಷ, [3]ಅದುಷ್ಟ[3], ಆತ್ಮಾಮಿಷ, ಉಪಗ್ರಹ, ಪರಿಕ್ರಮ, ಅರಿಪರದೂಷಣ, ಸ್ಕಂಧೋಪನಯಮೆಂದು ಷೋಡಶವಿಧಮಕ್ಕುಂ. ಅಲ್ಲಿ ದ್ರವ್ಯವಾಹನಮಂ ಕೊಟ್ಟು ಮನ್ನಿಪುದು ಸಂಪ್ರದಾನಮೆಂಬುದಕ್ಕುಂ; ಸಮಸಂಧಿ ಕಪಾಲಮೆಂಬುದಕ್ಕುಂ; [4]ಸಂಧಾನಂ ಉಪಹಾಸನ[4]ಸಂಧಿಯೆಂಬುದಕ್ಕುಂ; ಕನ್ಯಾದಾನಪೂರ್ವಕಮಪ್ಪ ಸಂಧಿ ಸಂತಾನಮೆಂಬುದಕ್ಕುಂ; ಮಿತ್ರಭಾವದೊಳ್ ನೆಗೞ್ವ ಸಂಧಿ ಸಂಗತಮೆಂಬುದಕ್ಕುಂ; ಭಾವಿಯಪ್ಪೇಕಾರ್ಥಸಿದ್ಧಿಯನುದ್ದೇಶಂಗೆಯ್ದು ನಡೆವುದು ಉಪನ್ಯಾಸಸಂಧಿಯೆಂಬುದಕ್ಕುಂ; ಪರಸ್ಪರೋಪಕಾರಂಗೆಯ್ವುದು ಪ್ರತೀಕಾರಸಂಧಿಯೆಂಬುದಕ್ಕುಂ; ಅರಿವಿಜಿಗೀಷುಗಳೇಕಾರ್ಥಸಿದ್ಧಿಯಂ ಕುಱಿತು ನಡೆವ ಸಂಧಿ ಸಂಯೋಗಮೆಂಬುದಕ್ಕುಂ; ನಿನ್ನ ಸೇನಾನಾಯಕರಿಂದೆನ್ನ ಕಾರ್ಯಮಂ ಸಾಧಿಸಿದೊಡೆ ನುಡಿದ ಪಣಮಂ ಕುಡುವೆನೆಂಬುದು ಪುರುಷಾಂತರಸಂಧಿಯೆಂಬುದಕ್ಕುಂ; ಎನ್ನ ಕಾರ್ಯಮಂ ನಿನ್ನ ಬಲ್ಲ ಮಾೞ್ಕೆಯಿಂ ತೀರ್ಚಿದೊಡೆ ನೀನೆಂದುದುಂ ಮಾೞ್ಪೆನೆಂಬುದು ಅದೃಷ್ಟಪುರುಷಸಂಧಿಯೆಂಬುದಕ್ಕುಂ; ಅರಿವಿಜಿಗೀಷುಗೆ ಭೂಮ್ಯೇಕಪ್ರದೇಶಮಂ ಕೊಟ್ಟು ಮಾೞ್ಪುದು [5]ಅದುಷ್ಟ[5] ಸಂಧಿಯೆಂಬುದಕ್ಕುಂ; ಶತ್ರು ಸಮಸ್ತಬಲಂಬೆರಸು ವಿಜಿಗೀಷುವಂ ಕಾಣ್ಬುದುಂ ಆತ್ಮಾಮಿಷಸಂಧಿಯೆಂಬುದಕ್ಕುಂ; ಸ್ವರಸ್ವಮಂ ತೆತ್ತು ಪ್ರಾಣರಕ್ಷಣಂಗೆಯ್ವುದು ಉಪಗ್ರಹಸಂಧಿಯೆಂಬುದಕ್ಕುಂ; ಭಂಡಾರಮನಕ್ಕೆ ಅದಱೊಳರ್ಧಮನಕ್ಕೆ ಕೊಟ್ಟು ದೇಶಪ್ರವೃತ್ತಿಯಂ ರಕ್ಷಿಸುವ ಸಂಧಿ ಪರಿ

ಪಾ—1. ಗ || ಪ್ರತಿಯಲ್ಲಿಲ್ಲ. 2. ಠ. ಕ || ಗ ||
4. ಸಂಪ್ರದಾನಮುಪಹಾರ. ಗ || 3. 5. ಅದೃಷ್ಟ. ಕ || ಖ ||

ಕ್ರಮಸಂಧಿಯೆಂಬುದಕ್ಕುಂ; ಸಾರಭೂಮಿಯುಂ ಕುಡುವುದು ಅರಿಪರದೂಷಣಸಂಧಿಯೆಂಬುದಕ್ಕುಂ. ನುಡಿದ ದ್ರವ್ಯಮಂ ಕಂದಾಯದೊಳ್ ಕುಡುವುದು ಸ್ಕಂಧೋಪನಯಸಂಧಿಯೆಂಬುದಕ್ಕುಂ. ಇಂತೀಪೇೞ್ದ ಪದಿನಾಱುಂ ಸಂಧಿ ವಾಚಸ್ಪತಿನೀತಿಯಲ್ಲಿರ್ಕುಂ; ಸೋಮದೇವನೀತಿಯಲ್ಲಿರ್ಕುಂ. ಇವಱಲ್ಲಿ ನಾವಾವ ಸಂಧಿಯುಂ ಪೊಣರ್ಚುವೊಡಮರಿಮರ್ದನನೊಡಂಬಡುವನಲ್ಲ. ಅದೆಂತೆನೆ:—

ಜ್ಞಾತಿಬಹಿಷ್ಕೃತಂ ವ್ಯಸನಿ ದೈವಪರಂ ಶಿಶು ದೀರ್ಘರೋಷಿ ಸ ।
ತ್ಯೇತರ[1]ನ[1]ಸ್ಥಿರಂ ಸುರಗುರುದ್ವಿಜವೈರಿ ಬಹುದ್ವಿಷಂ ಭಯೋ ॥
ಪೇತನಧಾರ್ಮಿಕಂ ವಿಕಳತಂತ್ರನನಿಶ್ಚಿತಮಂತ್ರನಾಗಳುಂ ।
ಭೀತಪರಿಗ್ರಹಂ ಕೃಪಣನಾತ್ಮಬಲವ್ಯಸನಾತಿ[2]ವಿಹ್ವಲಂ[2] ॥315

ವಸುಹೀನಂ [3]ದುಶ್ಶಿಕ್ಷಂ ।
ವ್ಯಸನಯುತಂ[3] ದೇಶಕಾಲಬಲರಹಿತಂ ಭೂ ॥
ವಿಸೆ ದೈವಹೀನನವಿನೀ ।
ತಸ್ಯೈನ್ಯನನ್ಯಾ[4]ಯಿಯೆ[4]ನಿಪ ನರಪನೊಳೆಂದುಂ ॥316

ವಿಜಿಗೀಷುಗಳಪ್ಪ ಮಹೀ ।
ಭುಜರೆಂದುಂ ಸಂಧಿಮಾಡರದಱಿಂ ಬಲಿಭು ॥
ಗ್ವ್ರಜಮುಖ್ಯ ಕೇಳುಲೂಕ ।
ವ್ರಜವರನೊಳ್ ನಮಗೆ ಸಂಧಿಯಾಗದಮೋಘಂ ॥317

ಅದಱಿಂ ಕೌಶಿಕಂಗಳ್ಗಂ ನಮಗಂ ದುರ್ಧರಮಪ್ಪ ವೈರಮುಂಟಾಗಿಯುಂ ನಾವೆಲ್ಲರುಂ ರಾತ್ರ್ಯಂಧರುಮವರೆಲ್ಲರುಂ ದಿವಾಂಧರುಮಪ್ಪುದಱಿಂ ಸಂಧಾನಮೆಂತುಮಾಗಲಱಿಯದೆಂದು ನುಡಿದ ಚಿರಂಜೀವಿಯ ಮಾತಂ ಕೇಳ್ದು ಮೇಘವರ್ಣನಿಂತೆಂದಂ:—

ಪಾ—1. ಸ್ವ. ಗ ॥ 2. ವಿಗ್ರಹಂ. ಗ ॥ 3. ದುರ್ವಾಕ್ಯಂ ಪುಸಿನುಡಿವಂ. ಗ ॥ 4. ಯನೆ. ಗ ॥

ಆಸ್ತಾಂತಾವ[1]ಸ್ಮಂತ್ರ[1] ।
ಪ್ರಸ್ತಾವನವಾರ್ಯ್ಯ ನಮುಗವಾಕೌಶಿಕಪ ॥
[2]ತ್ರಿ[2]ಸ್ತ್ರೀಮವಲ್ಲಭಂಗಂ ।
ಪ್ರಸ್ತುತಮತಿವೈರವಾದ ತೆಱನೇಂ ಮೊದಲೊಳ್ ॥318

ಎನೆ; ಚಿರಂಜೀವಿಯಿಂತೆಂದಂ—

ಶ್ಲೋ॥ “ಸಾಪತ್ನ್ಯಂ ವಸ್ತುಜಂ ಸ್ತ್ರೀಜಂ ವಾಗ್ಭೂತಮಪರಾಧಜಂ ।
ವೈರಪ್ರಭೇದನಿಪುಣೈಃ ವೈರಂ ಪಂಚವಿಧಂ ಸ್ಮೃತಂ ॥” ೧೭೧

[ಟೀಕು—ಇರ್ವರ್ ಪೆಂಡಿರ ದೆಸೆಯಿಂದಾದುದು, ವಸ್ತುವಿನ ದೆಸೆಯಿಂದಾದುದು, ಸ್ತ್ರೀಯರ ದೆಸೆಯಿಂದಾದುದು, ವಾಗ್ದೋಷದಿಂದಾದುದು ಅಪರಾಧದಿಂದಾದುದು ಯೆಂದಿಂತು ವೈರವೈದು ತೆಱನಾಗಿಹುದು.]

ಅದಱೊಳಗೆ,

[3]ನಮುಗಂ ಕೌಶಿಕಲಕ್ಷ್ಮೀ ।
ರಮಣಂಗಂ ವಚನದೋಷದಿಂ ಕಾಕವಿಹಂ ॥
ಗಮಚಕ್ರವರ್ತಿ ಶತ್ರು ।
ತ್ವಮಾಯ್ತು ವಿಹಗಪ್ರಧಾನರೆಲ್ಲರುಮಱಿಯಲ್ ॥319

ಅದುಕಾರಣದಿಂ,

ಮೊದಲೊಳ್ ವೈರಂ ವಾಗ್ದೋ ।
ಷದಿನಾದುದು ಕೌಶಿಕಾಧಿಪತಿಗಂ ನಮಗಂ ॥
ತೊದಳಲ್ಲುಪೇಕ್ಷಿಸಿರೆ ಬಳೆ ।
ದುದು ಬಱಿಕೀತೆಱದೆ ಸಕಲಕಾಕಾಧೀಶಾ ॥320

ಎನೆ; ಮೇಘವರ್ಣಂ ವಾಗ್ದೋಷವಾವಕಾರಣದಿನಾದುದೆನೆ; ಚಿರಂಜೀವಿ ಪೇೞ್ಗುಂ:—ಏನಾನುಮೊಂದು ನೆವದೊಳ್ ಸಕಲಶಕುನಿಕುಲಪ್ರಧಾನರೆಲ್ಲಂ ನೆರೆದು ತಮ್ಮೊಳಿಂತೆಂದರ್:—

ಪಾ—1. ತ್ಸಮಂತ್ರ. ಗ ॥ 2. ತ್ರಿ. ಗ ॥ 3. ಕ ॥ ಪ್ರತಿಯಲ್ಲಿ 320 ಅನಂತರ 319 ಇದೆ.

ವಿನತಾನಂದನನೆಂದುಮಿಂದುಧವಳಶ್ರೀಮತ್ಪಯೋವಾರ್ಧಿಯೊಳ್ ।
ವಿನತಾನಂದನನಂ ಮುಕುಂದನನಮೋಘತ್ರಾ[1]ಯಿ[1]ಯಂ ಭಕ್ತಿಯಿಂ ॥
ದಿನಸುಂ ಸೇವಿಸುತಿರ್ಪನಾರ್ಗಮುಱಿದೆಯ್ದಲ್ ನಮ್ಮ ಕಜ್ಜಂಗಳಂ ।
ನೆನೆಯಂ ನಮ್ಮೊಳಗೊರ್ವನಂ ಗುಣಗಣೈಕಾಧಾರನಂ ಧೀರನಂ ॥321

ಪ್ರವರವಿಹಂಗಮಕುಲಚ । [೫
ಕ್ರವರ್ತಿ ಪಟ್ಟಕ್ಕೆ ಯೋಗ್ಯನಂ ಮಾಡಿ ಮಹೋ ॥
ತ್ಸವದಿಂ ಮಾಡುವುದಭಿಷೇ ।
ಕಮನುತ್ತಮಭಗಣವಿನುತಲಗ್ನೋದಯದೊಳ್ ॥322

ವ॥ ಎಂದು ಪತತ್ರಿಪ್ರಧಾನರೆಲ್ಲಮಾಳೋಚಿಸಿ ಕೌಶಿಕವಿಹಂಗಮಕ್ಕೆ ವಿಹಂಗಮಕುಲಚಕ್ರವರ್ತಿತ್ವಮಂ ಮಾಳ್ಪೆಮೆಂದು ನಿಶ್ಚಯಿಸಿ ಪಟ್ಟಬದ್ಧೋತ್ಸವಯೋಗ್ಯಂಗಳಪ್ಪ ಮಂಗಳದ್ರವ್ಯಂಗಳಂ ತನ್ನಿ[2]ಮೆಂದು ಪೇೞ[2]ಲೊಡಂ ; [೧೨

ವರದಾಸಿಂಧುಸರಸ್ವತೀರವಿಸುತಾಗೋದಾವರೀನರ್ಮದಾ ।
ಸರಯೂಭೋಗವತೀಕವೇರತನಯಾತಾಪೀಪಯೋಷ್ಣೀಸರಿ ॥
ದ್ವರಗಂಗಾಸಲಿಲಂಗಳಂ ಹಿಮಕರಸ್ವಚ್ಛಂಗಳಂ ತಂದರಾ ।
ದರದಿಂ ಹೇಮಘಟಂಗಳಂ ಕೆಲಬರುದ್ಯತ್ಪತ್ರಿಗೋತ್ರೋತ್ತಮರ್ ॥323

ವಿನುತಶ್ವೇತಾತಪತ್ರಾವಳಿಯರುಣಮಣಿಪ್ರಸ್ಫುಟೋತ್ತುಂಗಸಿಂಹಾ।
ಸನಮಂ ಗಂಗಾತರಂಗೋಪಮಚಮರರುಹಸ್ತೋಮಮಂ ಶಂಖಮಂ
ಪ್ರಾಂ॥ ಜನಮಂ ನಾನಾಪ್ರಕಾರಧ್ವಜಸಮುದಯಮಂ ತೂರ್ಯಸಂದೋ
ಹಮಂ ಚಂ। ದನಮಂ ಪತ್ರಿಪ್ರಧಾನರ್ ಕೆಲರಧಿಕತರಾನಂದದಿಂ ತಂ
ದರಾಗಳ್ ॥324 [೨೧

ಕುಂಕುಮಪಂಕಮಂ ದಧಿಯನುಜ್ಜ್ವಳದರ್ಪಣಮಂ ನವೀನದೂ।
ರ್ವಾಂಕುರಮಂಹಿಮಾಂಶುಧವಳಾಂಬರಮಂಮಧುವಂಮನೋಹರಾ॥

ಪಾ—1. ಸಿ. ಗ    ಮೆನ. ಗ ॥

ಳಂಕರಣಂಗಳಂ ವರಸಿತಾಕ್ಷತಮುಂ ರಮಣೀಯಮಪ್ಪ ಮು ||
ತ್ರಂ ಕರಿದಾನಮುಂ ನೆರಪಿದರ್ ಕೆಲಬರ್ವಿಹಗಾಧಿನಾಯಕರ್ ||325
ಕಮನೀಯಗಂಧಬಂಧುರ |
ನಮೇರುಮಂದಾರಪಾರಿಜಾತಾದಿಸುರ ||
ದ್ರುಮಕುಸುಮದಾಮಮುಮಂ ಶಕು |
ನಿಮುಖ್ಯರಾದರದೆ ತಂದರಾಗಳ್ ಕೆಲಬರ್ ||326 [೬

ಇಂತು ರಾಜ್ಯಾಭಿಷೇಕಯೋಗ್ಯಂಗಳಪ್ಪ ನಾನಾಪ್ರಕಾರಮಂಗಳ ದ್ರವ್ಯಂಗಳಂ ನೆಱಪಿ ಕೌಶಿಕವಿಹಂಗಮಕ್ಕೆ ಪಟ್ಟಂಗಟ್ಟಲಿರ್ದವಸರದೊಳ್ ರಾಮರಾಜ್ಯಾಭಿಷೇಕಮಂಟಪಕ್ಕೆ [1]ಕೈಕೆ[1] ಬರ್ಪಂತುಲೂಕರಾಜ್ಯಾಭಿಷೇಕಮಂಟಪಮಾಗಿರ್ದ ವಿಶಾಲಮಪ್ಪ ಆಲದ ಮರದ ಮೇಲೆ ಕಾಗೆ ಬಂದು ಪಾಯ್ದುಂ ದುಸ್ಸ್ವರದಿಂ ಕರೆವುದುಮದಂ ಕೇಳ್ದಂಡಜಪ್ರಧಾನರೋರೊರ್ವರ ಮೊಗಮಂ ನೋಡಿ, ನಮ್ಮ ಮಾಳ್ಪ ಕಜ್ಜಮಪ್ಪೊಡೆ ಮಹಾಪ್ರಾರಂಭಮದಱಿಂ ಶಕುನನಿಮಿತ್ತಂಗಳಂ ನೋಡಿ ಮಾಡಲ್ವೇೞ್ಕುಂ, ಈವಾಯಸಸ್ವರಂ ದುಸ್ಸ್ವರಮಾಗಿರ್ದುದಿದುವುಂ ಪತತ್ರಿಗೋತ್ರಮಪ್ಪುದಱಿಂದಿದರ್ಕಱಿಪಲೆವೇೞ್ಕುಮೆಂದು ಸಮೀಪಕ್ಕೆ ಕರೆದು ಕೌಶಿಕಪಟ್ಟಬದ್ಧಮಂ ಸುವಿಸ್ತರಂ ಪೇೞೆ ಕೇಳ್ದು ವಾಯಸಂ ಶಕುನಿಸಮೂಹಕ್ಕಿಂತೆಂದುದು:— [೧೭

ಶುಭಲಕ್ಷಣಂಗೆ ಸತತಂ |
ಪ್ರಭುಮಂತ್ರೋತ್ಸಾಹಶಕ್ತಿಯುಕ್ತಂಗೆ ಖಗ ||
ಪ್ರಭುತೆಯನೀವುದು ಮಾಡುವು |
ದಭಿಷೇಕಮನಲ್ಲದಂದು ಮಾಣ್ಬುದಮೋಘಂ ||327 [೨೧

ಅಂತುಮಲ್ಲದೆ; ಸುರಾಸುರಭೂಸುರಚೂಡಾಮಣಿಮರೀಚಿಮಾಲಾಲಂಕೃತಚಾರುಚರಣನೆನಿಪ್ಪ ವನಜನಾಭಂಗೆ ವಾಹನಮಾಗಿರ್ದ

ಪಾ—1. ಕೈಕಯಿ. ಕ || ಖ ||

ತಾರ್ಕ್ಷ್ಯಾನ್ವಯದ ಪಕ್ಷಿನಿಕಾಯಮುಂ, ಸಕಳಜಗಜ್ಜನವಂದ್ಯನೆನಿಪ ವನಜಾಸನಂಗೆ ವಾಹನಮಾಗಿರ್ದ ರಾಜಹಂಸಾನ್ವಯದ ಹಂಸಸಮಾಜಮುಂ, ದೇವಾದಿದೇವನಪ್ಪ ಮಹಾದೇವನ ತನೂಭವನುಂ ತಾರಕವಿದಾರಕನುಮಾಗಿರ್ಪ ಕುಮಾರಂಗೆ ವಾಹನಮಾಗಿರ್ದ ಮಯೂರವಂಶದ ಮಯೂರಮಂಡಲಮುಂ, ರಘುಕುಲತಿಲಕನಪ್ಪ ರಾಮನ ಮನೋನಯನವಲ್ಲಭೆಯನುಯ್ದ ರಾವಣಂಗೆ ಭಂಗಂಮಾಡಿದ ಜಟಾಯುವಂಶದ ಪಕ್ಷಿಪ್ರಧಾನರುಂ, ಲೋಕೈಕನೇತ್ರನುಂ ಶತಪತ್ರಮಿತ್ರನುಮಪ್ಪ ಆದಿತ್ಯಂ ತಮಗೆ ಪರಮಮಿತ್ರನೆಂಬಹಂಕಾರದ ಚಕ್ರವಾಕಚಕ್ರಮುಂ, ಸುರಾಸುರನಿಕಾಯಮೆಕ್ಕೆಕ್ಕೆಯಿಂ ಕಡೆವ ಪಾಲ್ಗಡಲೊಳಗೊಗೆದ ಸಿರಿಯೊಡನುದಯಿಸಿದ ಅಮೃತಕಳಾಧರನೆನಿಪ್ಪ ಚಂದ್ರನ ಕಿರಣಾಮೃತಮನೀಂಟಿ ತಣಿದಿರ್ಪ ಚಾರುಚಕೋರಾನ್ವಯದ ಪತಂಗಪುಂಗವರುಂ, ಶ್ರವಣಮಾತ್ರದಿಂ ನಾನಾವಿಧದೋದುಗಳನೋದಬಲ್ಲ ಶುಕಶಾರಿಕಾಸಂಕುಳಮುಂ, ಮಕರಕೇತನಮಹೀವಲ್ಲಭಮಹಾಪ್ರತೀಹಾರಪದವೀವಿರಾಜಮಾನಮೆನಿಪ್ಪ ಕೋಕಿಲಕುಲಮುಂ, ದರ್ಶನಮಾತ್ರದಿಂ ಶುಭದಂಗಳೆನಿಪ್ಪ ಭಾರದ್ವಾಜರಾಜಿಗಳುಂ, [1]ಸಲಕ್ಷಣಸೌಂದರ್ಯಸ್ತ್ರೀಜನನೇತ್ರಚಾಂಚಲ್ಯೋಪಮೆಗೆ ಬಣ್ಣಿಸಲ್ ಯೋಗ್ಯಮಪ್ಪ[1] ಖಂಜನಪುಂಜಮುಂ, ರಾಜಕುಮಾ[2]ರರಾರೋಗಿಸುವಮೃತಾಹಾರಪರೀಕ್ಷಾಯೋಗ್ಯಂಗಳೆನಿಪ್ಪ[2] ಜೀವಂಜೀವಕಸಮೂಹಮುಂ, ಮಹಾಸಮುದ್ರಕ್ಕು[3]ಪದ್ರವಂ[3]ಮಾಡಿದ ರೌದ್ರಾಟೋಪಪ್ರಕೋಪಮಪ್ಪ ಟಿಟ್ಟಿಭಪ್ರಕರಮುಂ, ಸಕಲಶಕುನಿಗಣಂಗಳೊಳಗೆ ಸತ್ತ್ವದೊಳಂ ಸಾಹಸದೊಳಮಧಿಕಮಪ್ಪ ಭೇರುಂಡಮಂಡಳಿಯುಂ, ಅಂಡಜಕುಲಪ್ರಸೂತಂಗಳಾಗಿಯುಂ ಮಾರ್ತಣ್ಡತನೂಜರೆನಿಪ್ಪ ಮಹಿಮೆಗಾಸ್ಪದ[4]ಮಾ[4]ಗಿ

ಪಾ—1. ಸಕಲಚಕ್ರವರ್ತಿಯೋಗ್ಯಂಗಳಪ್ಪ. ಗ ||
2. ರಾಲೋಕನಕ್ಕಾಹ್ಲಾದಮಂ ಪುಟ್ಟಿಸುವ. ಕ || ;ರೋಲಗಿಸುವ ......ಗ ||
3. ಪಸಮುದ್ರಂ. ಗ ||      4. ರಾ. ಕ ||

ದೀರ್ಘಾಯುಗಳೆನಿಪ್ಪ ವಾಯಸಸಮುದಾಯಮುಂ, ಖಾಂಡವವನಮ ನ[1]ಗ್ನಿಯನೂಡಿದ ಪಾಂಡವಂಗುಪಕರಿಸಿ[1] ಪಾಂಡವೋಪಕಾರಿಗಳಾಗಿಯುಂ ಮೇದಿನಿಯ ಜನಕ್ಕೆ ಶುಭಾ[2]ಶುಭಾದಿಕಾರ್ಯಂಗಳಂ[2] ಸೂಚಿಸುತ್ತಿರ್ಪ ಪೋದಗೆಗಳುಂ, ಕಿರಾತಂಗೆ ತನ್ನಸುವನಿತ್ತು ಜಸಂಬಡೆದ ಕಪೋತವಂಶದ ಕಪೋತ[3]ವ್ರಾತಮುಮಿರ್ದಂತೆ[3] [೫

ದಿವಸಾಂಧಂಗವಲಕ್ಷಣಂಗೆ ಸತತಂ ಕ್ರೂರಂಗೆ ವಿಪ್ರಾನ್ವಯಾ।
ಧವನಪ್ಪಂಗತಿದುರ್ಮುಖಂಗೆಸೆವ ಸತ್ಯತ್ಯಾಗಶೌರ್ಯೋಚಿತ॥
ವ್ಯವಸಾಯೇತರನಪ್ಪವಂಗೆ ಧಿಷಣರ್ ನಿಮ್ಮಂದಿಗರ್ ತೊಟ್ಟನಿಂ।
ತವಿಚಾರಕ್ರಮದಿಂದವಾವುದೆ ಖಗೋದ್ಯಚ್ಚಕ್ರವರ್ತಿತ್ವಮಂ॥328

ಅವಿವೇಕಂ ಕ್ಷುದ್ರನೆನಿ। [೧೦
ಪ್ಪವನರಸಾದಂದು ಭೂತಳಕ್ಕೆಲ್ಲಮುಪ॥
ದ್ರವಮಕ್ಕುಮೆಂ[4]ಬರೆಲ್ಲಂ[4]।
ಪ್ರವರನಯಾಗಮವಿದಗ್ಧರಪ್ಪ ಮುನೀಶರ್॥329

ಅದಲ್ಲದೆಯುಂ;

ಶ್ಲೋ॥ "ಕ್ಷುದ್ರಮರ್ಥಪತಿಂ ಪ್ರಾಪ್ಯ ನ ತದ್ವಿವದತಾಂ ಸುಖಂ॥" ೧೭೨
[ಟೀಕು—ಕ್ಷುದ್ರನಹ ಅರ್ಥಪತಿಯು ಕೂಡೆ ಪ್ರಸಂಗವ ಮಾಡುವಂಗೆ ಸೌಖ್ಯವಿಲ್ಲ.]

ಎಂಬ ಕಥೆಯಂತಕ್ಕುಮೆನೆ—ಶಕುನಿಸಮೂಹಮದೆಂತೆಂದು ಬೆಸಗೊಳೆ—ವಾಯಸಂ ಪೇಳ್ಗುಂ:— [೧೪

೧. ಕಪಿಂಜರನುಂ, ಮೊಲನುಂ, ಪುಲಿಯುಂ.

ದಕ್ಷಿಣದೇಶದೊಳೊಂದು ಮಹಾಟವಿಯಿರ್ಪುದು. ಅದರೊಳೊಂದು ಮಾವಿರ್ಪುದು. ಆಮಹಾವೃಕ್ಷದ ಕೆಲದಲ್ಲಿರ್ದ ಮಲ್ಲಿಕಾವಲ್ಲರಿಯೆ ತನಗರಮನೆಯಾಗೆ ಚತುರಕನೆಂಬುದೊಂದು ಕಪಿಂಜರನಿ

ಪಾ—1. ನಗ್ನಿಗೆಮಾಡಿದ ಗ॥ 2. ವಿಕಾರ್ಯಂಗಳಪ್ಪುದಂ. ಗ॥
3. ಪಕ್ಷಿಗಂ ಪಟ್ಟಂಗಟ್ಟದೆ ಅಪಿಚಾರದಿಂ. ಗ॥ 4. ರೆಂತುಂ. ಗ॥

ಕರ್ಣಂ. ಅದರ್ಕಮೆನಗಂ ಮಿತ್ರತ್ವಂ ಸಲುತ್ತಿರಲೊಂದುದಿನಂ ಕಪಿಂಜರನಾಹಾರಾರ್ಥಂ ವಿಹರಿಸಲ್ಪೋಗಿ ತಡೆವುದುಂ; ಅಲ್ಲಿಗೆ ಕಲಹಪ್ರಿಯನೆಂಬುದೊಂದು ಮೊಲಂ ಬಂದಾಪಕ್ಕಿಯ ಮನೆಯಂ ಪೊಕ್ಕಿರ್ಪುದುಂ; ಕಿಱಿದಾನುಂ ಬೇಗಕ್ಕೆ ಕಪಿಂಜರಂ ಬಂದು ಕಂಡೆನ್ನ ಮನೆಯಂ ನೀನೇಕೆ ಪೊಕ್ಕೆ ಪೊಱಮಡೆನಲೊಡಂ; ಎನ್ನ ಕೆಳೆಯನ ಕಜ್ಜದ ಕೇಡನಾಂ ಕಂಡದರ್ಕೆ ಮಧ್ಯಸ್ಥನಾಗಿ ನೀವಿರ್ವರು ಮಿಲ್ಲಿರ್ದು ಬವರಂಗೆಯಲ್ವೇಡ, ತಕ್ಕರ ಸಮೀಪಕ್ಕೆ ಪೋಗಿ ವಿಚಾರಂಗೆಯ್ದು ಅವರ್ ಪೇೞ್ದಂತೆ ಕೇಳ್ವೆಮೆನೆ; ಶಶಕಪಿಂಜರಂಗಳಂತೆಗೆಯ್ವೆವೆಂದು ಪೋಪುದುಮೀಚೋದ್ಯಮಂ ನೋೞ್ಪೆನೆಂದಾನುಮವಱ ಪಿಂತಪಿಂತನೆ ಪೋದೆಂ. ಅನ್ನೆಗಮವು ಕಿಱಿದಂತರಮಂ ಪೋಗಿ ವಿಶಾಲಕರ್ಣನೆಂಬ ಶಾರ್ದೂಲಂ ಜಂಘಾಬಲಮಿಲ್ಲದೆ ತೊೞಲಲಾಱದೆ ಇನ್ನಾಹಾರಮನೆಂತು ಪಡೆವೆನೆಂದು ಚಿಂತಿಸಿ, [೧೦

ವಾಕ್ಯಂ|| "ಅನಾಥಂ ಲಿಂಗಮುದ್ದಿಷ್ಟಂ ನ [1]ಮೋಕ್ಷಾಯ[1] ವಿಧೀಯತೇ ||" ೧೬೩

[ಟೀಕು—ಗುರುವಿಲ್ಲದಂಥ ಲಿಂಗಲಾಂಛನವು ಮೋಕ್ಷವ ಮಾಡದು.]

ಎಂಬುದು ಶಾಸ್ತ್ರಾರ್ಥಮುಂಟು. ಆನುಮೀತೀರ್ಥದ ಸಮೀಪದೊಳ್ ತಾಪಸರೂಪಧಾರಿಯಾಗಿರ್ದು ಸಾರೆ [2]ಬಂದುದೇನಾನುಂ[2] ಪ್ರಾಣಿಗಳಂ ತಿಂದು ಕಾಲಮಂ ಕೞಿವೆನೆಂದು ತಪೋರೂಪ[3]ಮಂ ಕೈಕೊಂಡಿರ್ದ ಶಾರ್ದೂಲಮಂ[3] ಕಂಡು [4]ಕಲಹಪ್ರಿಯ[4]ನಿಂತೆಂದುದು:—ನಾಮೀದಿವ್ಯತಾಪಸನ ಮುಂದೆ ವಿಚಾರಂಗೆಯ್ವಂ ಬಾಯೆಂಬುದುಂ; ಕಪಿಂಜರನದಱೊಡನಿಂತೆಂದಂ:—"ಎನಿತು ಪುಲಿ ನಿಯಮಸ್ಥನಾದೊಡಂ ಶ್ರಾವಕನ[5]ಲ್ಲಂ." ಎಂಬ ನಾಣ್ಣುಡಿಯುಂಟು.[5] ಅದಱಿಂ ನಾಮಿದಱ ಸಮೀಪಕ್ಕೆ ಪೋದೊಡೆ ಬಾಣಸಿನ ಮನೆಯನಱಿಸಿ ಮೊಲಂ ಪೊಕ್ಕಂತಕ್ಕುಮೆಂದೆರಡುಂ ನುಡಿವುದುಮದನಾವ್ಯಾಘ್ರತಾಪಸಂ ಕೇಳ್ದೆಂತುಂ ನಂಬುವಂತೆ

ಪಾ—1. ಮೋಕ್ಷೋ. ಗ || 2. ಬಂದ. ಗ || 3. ನಾಗಿರ್ದಪುಲಿಯಂ. ಗ ||
4. ಶಶ. ಗ || 5. ನಲ್ಲೆಂಬುದೆಲ್ಲಿಯುಮಿಲ್ಲೆಂಬುದುಂ. ಗ ||

ಮಾಟ್ಪಿನೆಂದೊಂದೆ ಕಾಲೊಳ್ನಿಂದಾದಿತ್ಯಂ ಎತ್ತಲ್ ಪೋದನತ್ತಲೆ ಮುಖವಾಗಿರ್ಪುದಂ ಕಂಡು ಚತುರಕನಿಂತೆಂದಂ:—ಈಬಕವೇಷಿ ನಮ್ಮಂ ಕಂಡು ವಿಕೃತವೇಷದಿಂ ನಿಂದಪನಿವನಂ ನಂಬಲ್ಬಾರದು. ಅಂತೆನೆ:—

ಶ್ಲೋ || "[1]ಬಾಲಚಾಂಬಿತನಾರೀ ಚ[1] ತೃಣಚೋರಶ್ಚ ಬ್ರಾಹ್ಮಣಃ ||"

ಎಂಬ ಕಥೆಯುಂತಕ್ಕುಮೆನೆ— ಶಶಕನದೆಂತೆನೆ — ಕಪಿಂಜರಂ ಪೇಳ್ದಿಂ:— [೬

೨. ನಾರಾಯಣಭಟ್ಟನ ಕಥೆ.

ಬೆಳೆದೊಜಗಿದ ಕಟಿವೆಯು ಕ |
ಯ್ಗಳನೊಪ್ಪುವ ತಿಳಗೊಳಂಗಳಿಂ ರಮ್ಯವನಾ ||
ವಳಿಯಿಂ ಸೊಗಯಿಸುವುದು ಭೂ | [೧೦
ತಳಮಂಡನಮೆನಿಸಿ ಮಳಯವಿಷಯಂ ಜಗದೊಳ್ || 330

ಆವಿಷಯದೊಳ್ ನಂಬಿನಾರಾಯಣಮೆಂಬ ಅಗ್ರಹಾರಮುಂಟು. ಅದಜೊಳ್ ನಾರಾಯಣಭಟ್ಟನೆಂಬನೊರ್ವ ಪಾರ್ವಂ ತೀರ್ಥಯಾತ್ರಾಪರನಾಗಿ ಗಂಗಾಸ್ನಾನಮುಮಂ ಕುರುಕ್ಷೇತ್ರದೊಳ್ ದಾನಮುಮಂ ಮಾಡುವೆನೆಂದು ವೇಣುದಂಡದೊಳ್ ನೇರಾಣಿಯ ಪೊನ್ನಂ ತೀವಿ ಪೆಜಿರಜಿಯದಂತಾಗಿ ಮಾಡಿಕೊಂಡಾರ್ಗಂ ಪೇಟದರ್ಧರಾತ್ರಿಯೊಳ್ ಮನೆಯಂ ಪೊಜಮಟ್ಟುತ್ತರಾಭಿಮುಖವಾಗಿ ಬರ್ಪನ್ನಂ, ಮತ್ತೊರ್ವಂ ಧೂರ್ತಶಿಖಾಮಣಿಯೆಂಬ ಪಾರ್ವಂ ಕಂಡೀತನ ಕೈಯೊಳೇನಾನುಂ ದ್ರವ್ಯಮಾಗದಿರದೆಂದು—ಭಟ್ಟರೇ! ನೀವೆತ್ತಲ್ ಪೋಪಿರೆನೆ; ಗಂಗಾಸ್ನಾನಂಗೆಯ್ಯಲ್ ಪೋದಪ್ಪೆನೆಂದೊಡಾನುಂ ಬಂದಪ್ಪೆನೆಂದೊಡಾಪಾರ್ವಂ ನೆರಂಬಡೆದೆನೆಂದು ಕರಮೊಳ್ಳಿತ್ತೆಂದು ಬನ್ನಿಮೆಂದು ಇರ್ವರುಮನೇಕದೇಶಂಗಳಂ [2]ಕಳೆದು ಚಂಪಾನಗರಮ[2]ನೆಯ್ದೆವಂದಾಪೊಟಿಲಂ ಪೊಕ್ಕುಮೊ

ಟ—೧೫. ನೇರಾಣಿ = ಅಪರಂಜಿಯ ಚಿನ್ನ. ೧೭. ನೆರಂ = ಸಹಾಯ.

ಪಾ—1. ಬಾಲಾ...ನಾಂ. ಕ || ಗ || 2. ಕಳೆದಣಜಾಪುರವ. ಕ || ಗ ||

ರ್ವಪಾರ್ವನ ಮನೆಗೆ ಬಂದು [1]ಸಂಧ್ಯಾವಂದನಂ[1]ಗೆಯ್ದುಂಡು ಕುಳ್ಳಿರ್ದುದುಮಾಗೃಹಸ್ಥನ ಪೆಂಡತಿ ಮುಖದೊಳ್ [2]ಸೆಱಂಗ[2] ನಿಕ್ಕಿಕೊಂಡು ಮಗಂಗೆ ಮೊಲೆಯೂಡುವುದಂ ಕಂಡು ದೇಶಾಂತರಿಗರಿದೇನೆಂದು ಬೆಸಗೊಂಡೊಡಾಮನೆಯ ಪಾರ್ವಂ[3] ನಿಂತೆಂದಂ:—ಎನ್ನ ಪೆಂಡತಿ ಪತಿವ್ರತೆ, ಪರಪುರುಷರ ಮುಖಾವಲೋಕನಂಗೆಯ್ಯಳದು ಕಾರಣದಿಂದೀಶಿಶು ಗಂಡುಗೂಸಪ್ಪುದಱಿಂ ನೋಡಿದೊಡೆ ದೋಷಮೆಂದು ತನ್ನ ಮುಖಮಂ ಮುಚ್ಚಿಕೊಂಡು ಮೊಲೆಯೂಡಿದಪಳೆಂದು ಪೇೞ್ದುದುಂ[3] ನಾರಾಯಣಭಟ್ಟಂ [4]ವಿಸ್ಮಯಂ[4]ಬಟ್ಟಂದಿನ ದಿವಸ[5] ಮಿಾಚೋದ್ಯಮನಿಲ್ಲಿರ್ದು[5] ನೋೞ್ಪೆನೆಂದಿರ್ಪನಮಾಮನೆಯ ಪಾರ್ವನರಮನೆಗೆ ಪೋಗಿ ಪಿರಿದು ಪೊೞ್ತು ತಡೆದಿರಲಾಜೋಡೆ ತನ್ನ ಮನೆಯ ಪಸುಗಾವ ಗೋವನಂ ಪಿಡಿದು ಸುರತಕ್ರೀಡೆಯಾಡುವುದಂ ನಾರಾಯಣಭಟ್ಟಂ ಕಂಡಾಪಾರ್ಬಯ ಡಂಭತನಕ್ಕೆ ಬೆಱಗಾಗಿ ಮಱುದಿನಮರ್ಧರಾತ್ರಿಯೊಳೆರ್ದು ಪಯಣಂಬೋಗಿ ನಿಶಾವಸಾನಸಮಯಮಪ್ಪಾಗಳ್, [೧೩

ಮದವದ್ವನ್ಯಗಜೇಂದ್ರದಾನಮಲಿನೋದ್ಯದ್ಭೃಂಗಸಂಘಾತಸಂ ।
ಪದೆಯಂ ಬಾಲಮೃಣಾಳ[6]ಜಾಲಕಲಸತ್ಸ್ವಾದು[6]ಪ್ರಪುಷ್ಪೋತ್ಕರ ॥
ಚ್ಛದೆಯಂ ತೀರನವೀನಚೂತಕುಸುಮವ್ರಾತಾ[7]ಸವೋನ್ಮತ್ತ[7]ಷ ।
ಟ್ಪದೆಯಂ ನರ್ಮದೆಯಂ ಮಹಾಪ್ರದೆಯನಾವಿಪ್ರಂ ಸಮಂತೆಯ್ದಿದಂ ॥

ವ॥ ಅಂತೆಯ್ದಿ ಮಂದಾಮಹಾನದಿಯೊಳ್ ಸ್ನಾನಂಗೆಯ್ಯಲೆಂದು ಭಟ್ಟಂ ನಿಲ್ವುದುಮಾಧೂರ್ತಶಿಖಾಮಣಿ ನಾರಾಯಣಭಟ್ಟಂಗೆ ನಂಬುಗೆಯನೆಂತು ಮಾೞ್ಪೆನೆಂದು ಚಿಂತಿಸುವ ಸಮಯದೊಳ್ ಪತ್ತಿ ಬಂದುದೊಂದು ಪುಲ್ಲಂ ಕಂಡು ಭಟ್ಟರ್ಗೆ ತೋಱಿ—ನೋಡಿರೆ! ಪಾಪಕರ್ಮನೆಂ, ಪರ

ಪಾ—1. ಪ್ರಥ್ಯಾನಂ. ಗ ॥ 2. ಸೀರೆಯ. ಕ ॥ ಖ ॥
3. ನೀಳ್ ಪತಿವ್ರತೆ, ಕೂಸು ಗಂಡಾನುದಱಿಂ ತನ್ನ ಮುಖಮಂ ಮಱಿಸಿಮಾಡಿಕೊಂಡು ಮೊಲೆಯೂಡುವಳೆಂದು ಪೇೞಿತಿ. ಗ ॥ 4. ಚೋದ್ಯ.
5. ಮಿಲ್ಲದುರ್. ಗ ॥ 6. ಜಾಳವಿಹರದ್ಧಂಸ. ಕ ॥ 7. ಸದೋನ್ನಂತ. ಗ ॥

ದ್ರವ್ಯಾಪಹರಣಂಗೆಯ್ದೆನೆನ್ನಂತು ನಿಕೃಷ್ಟನಾವನುಮಿಲ್ಲೆನೆ; ಭಟ್ಟರೆಂದರಿದಂ ನೀವಱಿತು ತಂದುದಿಲ್ಲಿದೊಂದು ಪುಲ್ ತಲೆಯೊಳ್ ಪತ್ತಿ ಬಂದುದರ್ಕೇನುಂ ದೋಷಮಿಲ್ಲೆಂದೊಡಾಧೂರ್ತಂ ಮತ್ತಮಿಂತೆಂದಂ:—

ಈಪು[1]ಲ್ಲದೆಂತು[1] ಬಂದೊಡ ।
ಮೇಪಡೆವೂತೆನಗೆ ದೋಷಮಕ್ಕುಮಘೋಷಂ ॥ [೫
ಪಾಪಕ್ಕಂಜುವೆನದಱಿಂ ।
ದೀಪುಲ್ಲಂ ಮತ್ತಮಲ್ಲಿ ಬಿಸುಟಾಂ ಬರ್ಪೆಂ ॥332

ಎಂದು ನೀವೀಮುಂದಣೂರೊಳೊಂ[2]ದು[2]ದಿವಸಮಿರಿಮೆಂದಾಪುಲ್ಲಂ ಪಿಡಿದು ಮಗುೞ್ದು ಕಿಱಿದಂತರಂ ಬಂದು ಪುಲ್ಲನಲ್ಲಿಯೆ ಬಿಸುಟು ಕಿಱಿದು ಪೊೞ್ತುಗಳೆದು ಮಗುೞ್ದಿರುಳರೆಜಾವಮಾದಾಗಳ್ ಭಟ್ಟರಿರ್ದೆಡೆಯನಱಸುತ್ತುಂ ಬಂದು ಕಂಡು—ಪಥಶ್ರಮದೊಳಂ ಕ್ಷುಧೆಯೊಳಂಕರಂ ಬೞಲ್ದೆನೆನೆ; ನಾರಾಯಣಭಟ್ಟನಿಂತೆಂದಂ:—ನೀವಿಂತಿರ್ದೊಡೆ ಪೊತ್ತು ಪೋದಪುದು, ಬೞಿಕ್ಕೆ ಭೈಕ್ಷಮನಿಕ್ಕುವರಿಲ್ಲ, ಈಗಳೆ ಪೋಗಿಮೆನೆ; ಧೂರ್ತನೆಂದನೀಪೊೞ್ತು ಪೋದೊಡೆ ನಾಯ್ಗಳ್ ತಿಂಗುಮೆಂತು ಪೋಪೆನೆನೆ; ಭಟ್ಟನಾದುಷ್ಟನಂ ಶಿಷ್ಟನೆಂದೆ ಬಗೆದು ತನ್ನ ಕೈಯ ಪೊನ್ನ ಕೋಲಂ ಪಿಡಿದು ಪೋಗಿ ಕಿಡಿಸದೆ ಕೊಂಡು ಬೇಗಂ ಬಾ ಪೋಗೆಂಬುದುಮಂತೆಗೆಯ್ವೆನೆಂದಾಧೂರ್ತಶಿಖಾಮಣಿ ಸ್ವಾರ್ಥಸಿದ್ಧಿಯಂ ಮಾಡಿಕೊಂಡು ಸ್ವೇಚ್ಛೆಯೊಳೋಡಿ ಪೋದಂ. ಆಭಟ್ಟನಾತಂ ಬಂದಪನೆಂದಿರುಳೆಲ್ಲಂ ಜಾಗರಮಿರ್ದು ನೇಸರ್ ಮೂಡೆ ನಾಡೆಯುಂ ಪೊೞ್ತಿರ್ದು ಎಂತುಂ ಬರವಂ ಕಾಣದೆ ಚಿಂತಾಕ್ರಾಂತನಾಗಿ ಕಿಱಿದು[3]ಬೇ[3]ಗಮನಿರ್ದು, [೧೧

ವಾಕ್ಯಂ॥ ‘‘ಶ್ರೇಯಾಂಸಿ ಬಹುವಿಘ್ನಾನಿ ॥’’ ೧೭೪

ಟ—೧೭೪. ನಲ್ಮೆಗೆ ತಡೆಗಳು ಹೇರಳವಾಗಿಹುವು.

ಪಾ—1. ಲ್ಲಿದೆಂತು. ಕ ॥ ಗ ॥ 2. ದಿನ. ಕ ॥ ಗ ॥ 3. ಬ್ಬೆ. ಕ ॥ ಗ ॥

ಎಂಬುದುಂಟೆಂದರ್ಥದಱಿಲಂ ಪತ್ತುವಿಟ್ಟು ಮತ್ತಂ ಸತ್ತ್ವಾವಲಂಬಿಯಾಗಿ ಪೋಗಿ ತೀರ್ಥಸ್ನಾನಾರ್ಥಂ ಬರ್ಪಿನವೊಂದು ಮಹಾರಣ್ಯದ ಪುಣ್ಯತೀರ್ಥದ ತಡಿಯೊಳೊಂದು ಮಹಾಕಾಯನಪ್ಪ ಬಕಂ ಶಕುನಿಗಳ್ಗೆ ಧರ್ಮವ್ಯಾಖ್ಯಾನಂಗೆಯ್ವುದಂ ಮತ್ಸ್ಯಂಗಳ್ ಮೊದಲಾಗಿ ಜಲಚರಂಗಳುಂ ವಿವಿಧವಿಹಂಗಂಗಳುಂ ಕೇಳ್ವುದಂ ಕಂಡು ಭಟ್ಟನೀಚೋದ್ಯಮಂ ನೋೞ್ಪೆನೆಂದು ಅದಱ ಕೆಲದೊಳ್ ಪರ್ವಿ ಕೊರ್ವಿ ಸುವ್ರ್ವಗೊಂಡ ಮಾಧವಿಯ ಪೊದಱೊಳಡಂಗಿರ್ದು ನೋೞ್ಪುದುಂ; ಕಿಱಿದುಂ ಬೇಗಕ್ಕೆ ಆಬಕಂ ವ್ಯಾಖ್ಯಾನಮಂ ಮಾಣ್ದು—ಇನ್ನಾಂ ನಿಯಮಂಗೆಯ್ದಪೆಂ, ನೀವೆಲ್ಲಂ ಪೋಗಿಮೆನೆ; ಪಕ್ಷಿಗಳೆಲ್ಲಂ ಬರ್ಮಯೆ ಪಾಱಿ ಪೋದುವು. ಜಲಚರಂಗಳೊಂದೊಂದೆ ಪೋಪಾಗಳ್ ಪಿಂದುಱಿದ ಮತ್ಸ್ಯಮನೊಂದೊಂದಂ ಪಿಡಿದು ತಿಂದುದಂ ಭಟ್ಟಂ ಕಂಡು ಚೋದ್ಯಂಬಟ್ಟು ಅಲ್ಲಿಂ ತಳರ್ದು ಕೆಲವಾನುಂ ದಿವಸಕುಜ್ಜಯಿನಿಯನೆಯ್ದುವುದುಮಾಪೊೞಲ್ವೊಱಲೊಳೊಂದು ನಂದನವನದೊಳಗೊರ್ವಂ ತಾಪಸರೂಪಧಾರಿಯಾಗಿ ತಪನತಾಪಕ್ಕೆ ಮೊಗಮನೊಡ್ಡಿ ನಾಲ್ಕುಂ ದೆಸೆಯೊಳಂ ಕಿಚ್ಚನೊಟ್ಟಿ ನಡುವೆ ನಿಂದಿರ್ದನಂ ಕಂಡು,

ಇದು ಕೌತುಕಮಾಗಲೆವೇ। [೧೩
ೞ್ಪುದು ನೋಡುವೆನಿದುಮನೆಂದು ತದ್ವಿಪ್ರಂ ನಿ॥
ಲ್ವುದುಮಪರಗಿರಿಯನೆಯ್ದಿದ।
ನದಿತಿಪ್ರಿಯಪುತ್ರನಜ್ಜಮಿತ್ರಂ ಮಿತ್ರಂ ॥333

ಅಂತಾದಿತ್ಯನಪಗಿರಿಯನೈದುವುದುಂ; ಕವಿದ ಕತ್ತಲೆಯೊಳಾಕೃತಕತಾಪಸಂ ತಪಮಂ ಸಂಹರಿಸಿ ನಿಲ್ವುದುಂ; ಮತ್ತಮೊರ್ವನುತ್ತರಸಾಧಕನಾತಂಗುಡಲುಂ ತುಡಲುಂ ಪೊದೆಯಲುಂ ತಂದು ಕೊಟ್ಟು

ಟಿ—೭. ಸುವ್ರ್ವ=ಹುಲುಸು.

ಕನ್ನದ ಮುಟ್ಟುಗಳಂ ತಂದೆನೆಂದು ಪೇೞ್ವುದುಂ; ಕರಂ ಲೇಸಾಯ್ತು ನಡೆಯೆಂದಿರ್ದರುಂ ಪೋಗಿ ರಾಜಭವನಮಂ ಪೊಕ್ಕು ಕನ್ನಮನಿಕ್ಕಿ ಭಂಡಾರಮಂ ಕಳ್ದು ಪೊಱಮಡುವಾಗಳ್; ಕಾಪಿನವರ್ಕಂಡು ಕಳಕುಳಂಗೆಯ್ಯೆ; ತಳಾಱರ್ ಕೇಳ್ದು ಪರಿತಂದು ಬಟ್ಟೆಗಳೆಲ್ಲಮಂ ಕಟ್ಟಿಮೆಂದು ಪೇೞ್ವುದುಮಾಕಳ್ಳರ್ ಕೇಳ್ದು ಪೊನ್ನ ಪೊಱಿಯೊಳೆ ಪೋಗಲಿಂಬಿಲ್ಲದೆ ನಂದನವನಕ್ಕೆ ಬಂದು ತನ್ನ ತಂದ ಪೊನ್ನ [1]ಪುಡಿಕೆಯು[1]ಮನುಱಿಯುಮಂ ಬಳಪಮುಮಂ ಅಲ್ಲಿ ಪಟ್ಟಿರ್ದ ಭಟ್ಟನ ಮುಂದೆ ತಂದಿಕ್ಕಿ ತನ್ನ ಮುನ್ನಿನ ತಪೋರೂಪದೊಳಿರ್ದಂ. ಅನ್ನೆಗಂ ತಳಾಱರ್ ಪರಿತಂದು— ನಿಮ್ಮಡಿ, ನಿಮ್ಮತ್ತಲ್ ಪೆಱರ್ ಮಾನಸರ್ ಬಂದರೊಳರೆ ಪೇೞಿಮೆನೆ; ತಸ್ಕರತಾಪಸನಾಮರದಡಿಯೊಳೊರ್ಬಂ [2]ಬಂದಿರ್ಪ[2]ನೆಂದು ಸನ್ನೆ[3]ಯಿಂ[3] ಪೇೞ್ವುದುಮವರ್ ಪರಿತಂದು ನೋಡಿ ಪಟ್ಟಿರ್ದ ಭಟ್ಟನ ಮುಂದಿರ್ದ ಭಂಡಾರದ ಪುಡಿಕೆಗಳುಮಂ ಕನ್ನದ ಮುಟ್ಟುಗಳುಮಂ ಕಂಡವಂ ಕೊಂಡಾಪಾರ್ವನ ತಲೆಯೊಳಿಟ್ಟರಸಂಗೆ ತಂದೊಪ್ಪಿಸುವುದುಮರಸನಾಭಟ್ಟನಂ ನೆಟ್ಟನೆ ಕಳ್ಳನೆಂದೆ ಬಗೆದೀದುಷ್ಟಂಗೆ ತಕ್ಕುದಂ ಮಾಡಿಮೆನೆ; ನಾರಾಯಣಭಟ್ಟನಿಂತೆಂದಂ:— [೧೯

ಶ್ಲೋ|| [4]" ಬಾಲಚಾಂಬಿತನಾರೀ ಚ ತೃಣಚೋರಶ್ಚ ಬ್ರಾಹ್ಮಣಃ |
ಧರ್ಮಂ ಕರೋತಿ ಶಕುನಿಃ ತಾಪಸೋ ನಾಸ್ತಿ[4] ಸಂಶಯಃ || " ೧೩೯

ಎಂದೊಡರಸನದೆಂತೆಂದು ಬೆಸಗೊಳೆ; ತತ್ಪ್ರಪಂಚಮನರಸಂಗೆ ಭಟ್ಟಂ ಸವಿಸ್ತರಂ ಪೇೞ್ವುದುಮರಸನಾಕೃತಕತಪೋಧಾರಿಯ ಗುಹೆಯಂ ಶೋಧಿಸೆ ಮುನ್ನ ತನ್ನ ಪೊಬಿಲೊಳ್ ಪೋದ ಪಲವು ವಸ್ತುಗಳಂ ಸನ್ಯಂಗವೆರಸಿ ಕಂಡಾತಸ್ಕರತಪಸ್ವಿಗೆ ತಕ್ಕುದಂ ಮಾಡಿ ನಾರಾಯಣಭಟ್ಟಂಗೆ ಪಿರಿದಪ್ಪರ್ಥಮಂ ಕೊಟ್ಟು ಕಳುಪಿದಂ, [೨೦

ಟಿ—೧೫. ಸನ್ಯಂಗ= (?)

ಪಾ—1. ಪೊಟ್ಟೆಯು, ಕ || ; ಮೊಟ್ಟೆಯು. ಗ || 2. ಜಿಟ್ಟಿರ್ದ. ಗ || 3. ಯಂ. ಗ ||
4. ಬಾಲಾ... ಣಾಂ ತೃ... ಸ್ಯ ಬ್ರಾಹ್ಮಣಃ | ಧರ್ಮಂ... ವಕ್ತಿ ೦ (ವಕ್ತೀಚ)... ನಾತ್ರ. ಗ ||

(೧. ನೆಯ ಕಥೆಯು ಶೇಷ.)

ಅದುಕಾರಣದಿಂ,

ಶ್ಲೋ॥ "ಅತ್ಯಾಚಾರಮನಾಚಾರಮತಿನಿಂದ್ಯಮತಿಸ್ತುತಿಃ ।
ಅತಿಶೌಚಮಶೌಚಂ ವಾ ಷಡ್ವಿಧಂ ಧೂರ್ತಲಕ್ಷಣಂ ॥" ೧೭೬ [೬

ಎಂಬುದು ನೀತಿಯುಂಟು. ಈಪುಲಿಯುಮತ್ಯಾಚಾರಮಾಗಿರ್ದುದು: ಇದಱ ಬಲೆಯೊಳ್ ಸಿಲ್ಕಲ್ವೇಡ; ಪೆಱತೊಂದೆಡೆಗೆ ಪೋಪಂ ನಡೆಯೆನೆ; ಮೊಲನಿಂತೆಂದುದು:— ಇಂತಪ್ಪುಪಶಮಮನುಳ್ಳ ತಪಸ್ವಿನಮಗೆ ತಪ್ಪಲಱಿಯಂ, ಕಱಿಯೆ ಗಳಪದಿರ್ ನಡೆಯೆನೆ; ಕಪಿಂಜರನದರ್ಕಂಜಿ—ನಿನಗಾದುಪಹತಿಯೆನಗಾದಪುದು ನಡೆಯೆಂದೆರಡುಂ ಆಕಪಟತಾಪಸರೂಪಧಾರಿಯಪ್ಪ ದ್ವೀಪಿಯ ಸಮೀಪಕ್ಕೆ ಬಂದು ಪೊಡೆವಟ್ಟು—ನಿಮ್ಮಡಿ, ನಿಮ್ಮಲ್ಲಿ ವಿಚಾರಂಗೆಯ್ಯಲ್ ಬಂದೆವೆಮ್ಮಂ ವಿಚಾರಿಸಲ್ವೇಳ್ಕುಮೆಂದಾಗ್ರಹಂಗೆಯ್ದೊಡೆ; ಎನ್ನ ನಿತ್ಯನಿಯಮಕ್ಕೆ ವಿಘ್ನಂಮಾಡದೆ ಪೆಱತೊಂದೆಡೆಗೆ ಪೋಗಿಮೆಂಬುದುಮವರ್ಕೆ ನಂಬುಗೆಪುಟ್ಟಿ—ನಿಮ್ಮಡಿ, ನೀವೆ ವಿಚಾರಿಸಲ್ವೇೞ್ಕುಮೆನೆ; ದ್ವೀಪಿಯುದರ್ಕೊಡಂಬಟ್ಟು ಸಾವಧಾನವಾಗಿ ನಿಂದಿಂತೆಂದುದು:—ಇಂದಿಂಗೊಂದು ತಿಂಗಳುಪವಾಸಂಗೆಯ್ದ್ದನದು ಕಾರಣದಿಂ ಧಾತುಕ್ಷಯಮಾಗಿ ಕಿವಿ ಕೆತ್ತುಕೇಳಲ್ ಬಂದಪ್ಪುದಿಲ್ಲ, ಕರ್ಣೋಪಾಂತಮಂ ಸಾರ್ದು ಪಿರಿಯಸರದಿಂ ಪೇೞಿಮೆಂದೊಡೆ; ಆಪ್ರಾಣಿಗಳೆರಡುಂ ಶ್ರವಣಸಮೀಪಸ್ಥಂಗಳಾಗಿ ತಮ್ಮ ಬಂದ ವೃತ್ತಾಂತಮೆಲ್ಲಮುಮಂ ಪೇೞ್ದು ಕೇಳ್ದನೇಕಪ್ರಕಾರದಿಂ ವಿಚಾರಿಸುತ್ತುಮಿರೆ; ಶಶಕಪಿಂಜರಂಗಳೆರಡುಂ ಜವಂಗೆಟ್ಟು ಮೆಯ್ಮಱೆದಿರ್ದುದನಱಿದು ಪಿಡಿದು ತಿಂದುದು.

ಅದಱಿಂ, [೨೭

ಶ್ಲೋ॥ "ಕ್ಷುದ್ರಮರ್ಥಪತಿಂ ಪ್ರಾಪ್ಯ ನ ತದ್ವಿವದತಾಂ ಸುಖಂ ।
ಉಭಾವೇವ ಕ್ಷಯಂ ಯಾತೌ ಯಥಾ ಶಶಕಪಿಂಜರೌ ॥" ೧೭೭

[ಟೀಕು—ಕ್ಷುದ್ರನಪ್ಪರ್ಥಪತಿಯನೆಯ್ದಿ ಕೂಡಿದವರ್ಗೆ ಸುಖವಿಲ್ಲ ; ಅದು ಹೇಗೆಂದೊಡೆ ಮೊಲನುಂ ಕಪಿಂಜರನೆಂಬ ಪಕ್ಕಿಯುಂ ಕೇಡನ್ನೆದಿದ ಹಾಂಗೆ. ]

ಎಂದಾಕಾಗೆ ಗೂಗೆಗೇಗೆಯ್ದುಂ ರಾಜ್ಯಮಾಗದಂತೆ ಎನಿತಾನುಮುಪಕಥೆಗಳಂ ಪೇೞ್ದೊಡೆ ಕೇಳ್ದು, [೪

ಶಕುನಿಗಣಮೆಲ್ಲಮಭಿಷೇ।
ಕಕಾರ್ಯಮಂ ಮಾಣ್ದು ಪರೆದು ಪೋದುವು ನಿಜನೀ॥
ಡಕುಳಕ್ಕೆ ಕಾಗೆ ವಕ್ರಿಸೆ।
ಸಕಳಪ್ರಾರಂಭಕಾರ್ಯಮಂ ಮಾಣದರಾರ್ ॥ 334 [೮

ಅಂತಾಶಕುನಿಸಮುದಾಯಂ ಪರೆದು ಪೋಪುದಂ ಕಂಡು ಕೋಪಾರುಣೀಭೂತಲೋಚನನುಳೂಕರಾಜಂ ಕಾಕಂಗೆ ಮುಳಿದಿಂತೆಂದಂ:— ಏನೆಲವೋ! ನಿಮಗಂ ನಮಗಂ ಮುನ್ನಾದ ಪಗೆಯೊಂದುಮಿಲ್ಲಮೆನಗಾದ ರಾಜ್ಯಮಂ ಕಿಡಿಸಿದುದಲ್ಲದೆನ್ನುಮಂ ಕೆಡೆ ನುಡಿದೆ; ನಿನ್ನನೊರ್ವನಂ ಕೊಂದೆನಪ್ಪೊಡೆ ಮುಂದಪ್ಪ ಪಗೆಗಳ್ಕೆ ಕೊಂದಂತಕ್ಕುಮದಱಿಂದಿಲ್ಲಿ ನಿನ್ನಂ ಕೊಲ್ಲೆನೆಂದು ಮತ್ತಮಿಂತೆಂದಂ:— [೧೪

ಕುರುಕುಲಮಂ ಬಕಾರಿ ಭುಜಗವ್ರಜಮಂ ಭುಜಗಾರಿ ದಾನವೇ।
ಶ್ವರಕುಲಮಂ ಮುರಾರಿ ಭುಜವಿಕ್ರಮದಿಂ ತವೆ ಕೊಂದ ಮಾೞ್ಕೆಯಿಂ॥
ದುರುತರಬಾಹುವಿಕ್ರಮದೆ ನಾಂ ತವೆ ಕೊಲ್ಲದೆ ಮಾಣೆ [1]ನುಗ್ರ[1]ಸಂ।
ಗರಮುಖದಲ್ಲಿ ಕಾಕಬಳಮಂ ಕುಸುಮಾಯುಧವೈರಿ ಕಾವೊಡಂ॥

ಎಂದುಳೂಕಾಧಿರಾಜನತಿಪ್ರತಿಜ್ಞೆಗೆಯ್ದು ನಿಜ[2]ನಿವಾಸ[2]ಕ್ಕೆಪೋದಂ. ಇತ್ತಲಾವಾಯಸಂ ಕೌಶಿಕಾಧೀಶ್ವರನ ಮಾತಿಂಗೆ ಭೀತನಾಗಿ ತನ್ನೊಳಿಂತೆಂದುದು:— [೨೧

ಶ್ಲೋ॥ "ಹೇ ಜಿಹ್ವೇ ಮಧುರೇ ಸ್ನಿಗ್ಧೇ ಮಧುರಂ ಕಿಂ ನ ಭಾಷಸೇ।
ಮಧುರಂ ವದ ಕಲ್ಯಾಣಿ ಲೋಕೋ ಹಿ ಮಧುರಪ್ರಿಯಃ ॥" ೧೩೮

ಪಾ—1. ನಿಂದು. ಗ॥ 2. ನೀಡ. ಗ॥

[ಟೀಕು—ಎಲೆ ನಯುವಹಂತಹ ನಾಲಗೆಯಿಂ ನಿಷ್ಠುರವನೆಂದುಂ ನುಡಿಯದಿರು; ಮಧುರವನೆ ನುಡಿ; ಮಧುರವೆಂಬುದು ಸರ್ವಜನಪ್ರಿಯುವಾಗಿಹುದು.]

ಎಂದು ಮತ್ತಮಿಂತೆಂದುದು:—

ಜಯುಮಂ ಕೀರ್ತಿಯನಭಿವೃ।
ದ್ಧಿಯನೊಳ್ಪಂ ಕಾರ್ಯಸಿದ್ಧಿಯಂ ಸತ್ಫಲಮಂ॥ [೫
ಬಯುಸುವ ಮನುಜಂ ಸತತಂ।
ಪ್ರಿಯುವನೆ ನುಡಿವುದು ವಿಪಕ್ಷಮಾಗಿರ್ಪವರೊಳ್॥ 335

ಎಂಬ [1]ನೀತಿಯುಂ[1] ಬಿಸುಟ್ಟು ಮಾತಱಿಯದೆ ನುಡಿದು ಎನ್ನ ಜಾತಿಗಮುತ್ಪಾತಕೇತುವಾದೆನೆಂದು ತನ್ನಂ ತಾನೆ ನಿಂದಿಸಿ ಕೊಂಡು ವಾಯಸಂ ಪೋದುದು. ಅಂದಿಂದಿತ್ತ ಕೌಶಿಕಂಗಳ್ಗಂ ನಮಗಂ ಪಗೆಯಾದುದೆಂದು ಚಿರಂಜೀವಿ ಪೇೞ್ವ; ಮೇಘವರ್ಣನಿಂತೆಂದಂ:—ವಾಙ್ಮಾತ್ರದಿಂ [2]ಬಂದ[2] ವೈರಮನೆತ್ತಿಕೊಂಡು ಯುದ್ಧಂಗೆಯ್ದು ಕೊಂದಿಕ್ಕಿದರೆಂಬ ಕಥೆಗಳನೆಂದುಂ ಕೇಳ್ದಱಿಯೆನೆನೆ; ಮತ್ತಂ ಚಿರಂಜೀವಿಯಿಂತೆಂದಂ:—

ಕೇಳ್[3]ಹಿತ[3]ದಿತಿಜವಲ್ಲಭ।
[4]ಲೀ[4]ಳಂ ವಿಕ್ರಮನಿರಸ್ತಕಾಳಂ ದಿವಿಜಾ॥ [೧೫
ಭೀಳಂ ಮಥಿತಾಖಿಳದಿ।
ಕ್ಪಾಳಂ ಶಿಶುಪಾಳನೆಂಬನೊರ್ವಂ ದನುಜಂ॥ 336

ವ॥ ಅಂತಾತಂ ವಾಗ್ದೋಷದಿಂ ನಿಶ್ಶೇಷಜೀವಿತನಾದ ಕಥೆಯುಂ ನಿಮ್ಮಡಿ [5]ಕೇಳ್ದಱಿಯಿರಕ್ಕುಮೆಂದು ಪೇೞಲ್ ತಗುಳ್ದಂ[5]:—

೨. ಶಿಶುಪಾಲನ ಕಥೆ.

ಧರ್ಮಪುತ್ರನಪ್ಪ ಯುಧಿಷ್ಠಿರಂ ಧರ್ಮಾರ್ಥಿಯುಂ ಯಶೋರ್ಥಿಯುಮಾಗಿ ರಾಜಸೂಯಯಾಗಂಮಾಡಲುದ್ಯೋಗಂಗೆಯ್ದು ನಾರಾಯ

ಪಾ—1. ವಾತಂ. ಗ॥ 2. ಬದ್ಧ. ಗ॥ 3. ಸುತ. ಖ॥
4. ಕಾ. ಕ ಗ॥ 5. ಕೇಳಿಮಿಂತೆಂದಂ. ಗ॥

ಣಾದಿಗಳುಮಪ್ಪ ಯಾದವರುಮಂ ದುರ್ಯೋಧನಂ ಮೊದಲಾದನೇಕ ದೇಶಾಧೀಶ್ವರರುಮಪ್ಪ ರಾಜತನೂಜರುಮಂ ಶಿಶುಪಾಲಂ ಮೊದಲಾದ ದನುಜಸಮಾಜಮುಮಂ, ವ್ಯಾಸ ಕಶ್ಯಪ ವಿಶ್ವಾಮಿತ್ರ ವಾಲ್ಮೀಕಿ ವಸಿಷ್ಠಾಗಸ್ತ್ಯ ಪರಾಶರಾದಿ ಮಹಾಮುನಿ ಸಮೂಹಮುಮಂ ಬಱಿಯನಟ್ಟಿ ಬರಿಸಿ ಯಾಗಂಗೆಯ್ದು ತದನಂತರಂ ಭೀಮಾಗ್ರಜನ್ಮನಗ್ರಪೂಜೆಗಗ್ರೇಸರ ರಾರ್ ಪೇೞಿಮೆಂಬುದುಂ; ಗಾಂಗೇಯಂ ಗಂಭೀರಧ್ವನಿಯಿನಿಂತೆಂದಂ:—

(ಮಲ್ಲಿಕಾಮಾಲೆ.)

ಉಗ್ರಸಂಗರರಂಗದೊಳ್ ಬಲ[1]ವನ್ನಿ[1]ಶಾಚರಮುಖ್ಯವೀ । [೪
ರಾಗ್ರಗಣ್ಯರನಿಕ್ಕಿ ಭೂಚರಖೇಚರಾಖಿಲಲೋಕಪಾ ॥
ಲಾಗ್ರಗಾಮರಪೀಡೆಯಂ ಕಳೆದಿರ್ದ ವಿಷ್ಣುಗೆ ಭಕ್ತಿಯಿಂ ।
ದಗ್ರಪೂಜೆಯನೀವುದಬ್ಧಿಪರೀತಭೂತಳವಲ್ಲಭಾ ॥337

ವ॥ ಎಂದು ನುಡಿದ ಮಂದಾಕಿನೀನಂದನನ ಮಾತಿಂಗೆ ಯಮನಂದನ ನಾನಂದಮನಸ್ಕನಾಗಿ ದೇವಕೀನಂದನಂಗಗ್ರಪೂಜೆಯನೆತ್ತುವಾಗಳ್ ದಾನವಕುಲಚಕ್ರವರ್ತಿಯುಮಧರೀಕೃತದಿಕ್ಪಾಲನುಮಾಸನ್ನಕಾಲನು ಮಪ್ಪ ಶಿಶುಪಾಲಂ ಕಂಡು ಕಡುಮುಳಿದು ಯುಧಿಷ್ಠಿರಂಗೆ ನಿಷ್ಠುರನಾಗಿ ಗಾಂಗೇಯನಂ ನೋಯೆ ನುಡಿದು ಮಾಣದೆ ಬಾಣಾಸುರಕರಾಂತಕನು ಮಂ ಬಾಯ್ಗೆ ವಂದಂತೆ ಭಂ[2]ಗಿ[2]ಸಿ ಪೆಂಡಿರಂ ಬಯ್ವಂತೆ ಬಯ್ವುದು ಮನಂತನಂತಕನಂತೆ ಮುಳಿದು ದಿವಿಜಾಂತಕನಂ ಕೃತಾಂತಭವನಮಂ ಪುಗಿಸಿದಂ. [೧೯

ಅದಲ್ಲದೆಯುಮನೂನಬಳರಪ್ಪ ದಾನವಮಾನವರೆನಿಬರಾನುಂ ವಾಕ್ಪಾರುಷ್ಯದಿಂ ಕೆಟ್ಟರೆಂದು ಚಿರಂಜೀವಿ ಪೇೞ್ದುದಂ ಕೇಳ್ದು ಮೇಘವರ್ಣಂ—ನೀವಿಲ್ಲದುದನೇಕೆ ಪೇೞ್ವಿರಿದೆಲ್ಲಮನಾನಱಿದೆಂ; ಇನ್ನಾಕೌ

ಪಾ—1. ಮಂ ನಿ, ಗ ॥ 2. ಡ, ಕ ॥

ಶಿಕಾಧೀಶ್ವರನಂ ಸಾಧಿಸುವುಪಾಯಮಂ, ಅನ್ನೆವರಂ ನಮಗೆ ನಿಶ್ಚಿಂತಮಪ್ಪೆಡೆಯುಮಂ ಚಿಂತಿಸಿಮೆನೆ; ಚಿರಂಜೀವಿಯಿಂತೆಂದಂ:—

ಅರಿ ಬಲವಂತಂ ಮತಿಯೊಳ್ ।
ಪಿರಿಯಂ ಸಾಧಿಸುವೊಡಱಿಯೆನೆಂಬವಸರದೊಳ್ ॥
ಪಿರಿದಾಳಾಪದೊಳೇನಪ ।
ಸರಣಮೆ ಶರಣಂ ನಯಾಗಮಜ್ಞರ ಮತದಿಂ ॥ 338

ಎನೆ; ಮೇಘವರ್ಣನಂತಪ್ಪೊಡೆ ನಾವಪಸರಣಂಗೆಯ್ವುಮೆನೆ; ಚಿರಂಜೀವಿಯಿಂತೆಂದಂ:—

ಚಾರುಮಯೂರಮಂ ಸಮದಚಾತಕವಾರಮನುದ್ಧಕೇತ[1]ಕಾ[1] ।
ಧಾರಮನತ್ಯುದಾತ್ತಸುರ[2]ಗೋ[2]ಪಮನುದ್ಯದಶೇಷನೀಪಮಂ ॥
ಭೂರಿಸುರೇಂದ್ರಚಾಪಮನಪಾಸ್ತಧರಾಧರತಾಪಮಂ ಗತಾಂ ।
ಭೋರುಹಜಾಳಮಂ ಜಳದಕಾಳಮನಸ್ತ್ರಲ[3]ಸನ್ಮರಾಳಮಂ[3] ॥ 339

ವಾನರಬಲಸಹಿತಂ ತೇ ।
ಜೋನಿಧಿ ದಶರಥತನೂಭವಂ ವಿಶದಯಶ ॥
ಶ್ರೀನಿಲಯಂ ವಿಜಿತಾರಿನೃ ।
ಪಾನೀಕಂ ಋಶ್ಯಮೂಕನಗದೊಳ್ ಕಳೆದಂ ॥ 340

ಅದಱಿಂ ನಿಮ್ಮಡಿ ನೀವುಮಾಪರ್ವತಕ್ಕೆ ಸಕಲಕಾಕಬಲಂಬೆರಸು ಬಿಜಯಂಗೆಯ್ವುದುಮಾನೆನ್ನ ಬಲ್ಲ ಮಾರ್ಗದಿಂದರಿಮರ್ದನನ ಬೀಡಂ ಪೊಕ್ಕು ಸಮಸ್ತಕಾರ್ಯಮುಮನಱಿದು ಬಂದ ಬೞಿಕ್ಕೆ ತಕ್ಕುದನಾಳೋಚಿಸಿ ನೆಗೞ್ವಮೆನೆ; ಮೇಘವರ್ಣಂ ನೀವೆಂಬುದೆಲ್ಲಮಪ್ಪುದು, ದೂತಕಾರ್ಯಕ್ಕೆ ನೀವೇ ಪೋದಲ್ಲಿ ಕಾರ್ಯಸಿದ್ಧಿಯಪ್ಪುದೊಂದೆಸೆಯೊಳರ್ಕೆ, ನೀಮುಂ ಕ್ಷೇಮದಿಂ ಬರ್ಪುದುಂ ಸಂದೆಯಮಪ್ಪುದದಱಿಂ

ಪಾ—1. ನಾ. ಕ ॥ 2. ಚಾ. ಗ ॥ 3. ಸಂತರಾಳಮಂ. ಕ ॥

ಪೆಱರನಟ್ಟುವೆನೆ ; ಚಿರಂಜೀವಿ—ನಿಮ್ಮಡಿ ಸ್ವಾಮಿತನಕ್ಕೆ ತಕ್ಕುದಂ ಬೆಸಸಿದಿರ್. ಆದೊಡಮೆನ್ನಿಂದಪ್ಪೊಡೆ ಸಂಕಟಮುಮಧ್ವಾನಮುಮಪ್ಪ ಕಜ್ಜಂಗಳಂ ಕೇವಲಂ ದೂತಮಾತ್ರಸಪ್ರಾಪ್ತಂ ಸಾಧಿಸಲುಂ ಭೇದಿಸಲುಂ ನಿರುತಮಱಿಯಂ, ಅದಱಿಂ ಸತ್ವಮುಂ ದೃಢಮುಂ ಶೌರ್ಯಮುಂ ಧೈರ್ಯಮುಂ ಸ್ನೇಹಮುಂ ಮೋಹಮುಂ ಸಾಹಸಮುಂ ಸ್ಥೈರಣೆಯುಮುಳ್ಳರನಟ್ಟಲ್ವೇಱ್ಕು[1]ಮದೆಂತೆನೆ[1]:—ಚಿರಂತನಕಾರ್ಯಂಗಳೊಳಂ ಹನೂಮಂತನಂತಪ್ಪನಂ ದಶಾಸ್ಯಾಂತಕಂ ದೂತನಾಗಿ ಕಳಪಿದಂ; ಮುರಾಂತಕನಂತಪ್ಪನಂ ಯುಧಿಷ್ಠಿರಂ ದೂತಕಾರ್ಯಕ್ಕಟ್ಟಿದಂ. ಅದುಕಾರಣದಿ[2]ನಿಂ[2]ತಪ್ಪ ವಿಷಮಕಾರ್ಯಮೆನ್ನಿಂದಲ್ಲದೆ ತೀರಲಱಿಯದು. ನೀವಿಂ[3]ತೆ[3]ನ್ನ ದೆಸೆಗೆ ಚಿಂತಿಸದೆ ನಿಶ್ಚಿಂತರಾಗಿ ಪೋಗಿ.ಮೆಂದೊಡಂತೆಗೆಯ್ವೆನೆಂದು ಸಮಸ್ತ[4]ವಾಯಸ[4]ಬಲಂಬೆರಸು, [೧೧

ಸಮುದಾನೇಕಪಮಂ ಮಹಾಭಯದಮಂ ಪ್ರೋದ್ದಾಮಜಂಬೂಕದಂ।
ಬಮನಭ್ರಂಕಷಕೂಟಮಂ ತಪನಕಾಂತಾಶ್ಮ[5]ಪ್ರಭಾಪಾ[5]ಸ್ತಸಂ ‖
ತಮಸಸ್ತೋಮಮನೂರ್ಜಿತಂ ಜಿತಲಸನ್ಮೈನಾಕಮಂ ಋಶ್ಯಮೂ।
ಕಮನಾನಂದದಿನೆಯ್ದಿದಂ ಸಕಲಕಾಕಾನೀಕಲಕ್ಷ್ಮೀಶ್ವರಂ ‖ 341 [೧೫

ಧ್ವಾಂಕ್ಷಬಲಂಬೆರಸರಿಜಯ।
ಕಾಂಕ್ಷೆಯಿನಾತ್ಮೀಯಮಂತ್ರಿ ಪೇಟ್ದಂದದಿನಿ ‖
ರ್ದಂ ಕ್ಷೇಮದಿಂ ಪ್ರಚಂಡಬ।
ಲಂ ಕ್ಷಿತಿಭೃತ್ತಟದೊಳಖಿಳಕಾಕಾಧೀಶಂ ‖342 [೧೯

ಅನ್ನೆಗಮಿತ್ತಲ್ ಚಿರಂಜೀವಿ ಮುನ್ನಮೆ ಕೌಶಿಕಬಲಚರಣನಖಚಂಚುಪಕ್ಷಘಾತದಿಂ ಸಂಪೂರ್ಣವಾಗಿ ಕಾದಿ ಸತ್ತ ವಾಯಸಂಗಳ ರಕ್ತಕರ್ದಮಮಂ ತನ್ನ ಮೇಲೊಟ್ಟಿಕೊಂಡು ಮೂರ್ಛಾಗತನಂತಾಗಿ

ಪಾ—1. ಮೆನೆ. ಗ ‖ 2. ನ. ಗ ‖ 3. ನೆ. ಕ ‖ ಗ ‖
4. ಕಾಕ. ಗ ‖ 5. ಪ್ರಭಪಾ. ಗ ‖

ಮೇಘವರ್ಣನ ರಾಜ್ಯಲಕ್ಷ್ಮೀವಿಲಾಸಭವನಮೆನಿಪ್ಪ ವಿಶಾಲವಟವಿಟಪಿಯ ಕೆಳಗೆ ಬಿಟ್ಟಿರ್ದಂ. ಅನ್ನೆಗಮಿತ್ತಲ್,

ಅರುಣೀಭೂತವಿಯತ್ತಳಂ ನವವಿಯೋಗೋದ್ವೇಗಸಂತಾಪಿತಾಂ।
ಗರಥಾಂಗಂ ಮುಕುಳೀಕೃತಾಂಬುಜವನಂ ಮಂದೀ[1]ಕೃತಾಶೀತರ॥
ಶ್ಮಿ ರಥಾಶ್ವಾಸ್ಯಸುಪೀತನೀರಧಿಜಲವ್ರಾತಂ[1] ದಿನಾಂತಂ ಮನೋ। [೫
ಹರವಾಗಿರ್ದುದು ವಾಸಯಷ್ಟಿಗತಶುಂಭತ್ತಾಮ್ರಚೂಡವ್ರಜಂ॥ 343

ಅಂತೆಸೆವ ದಿವಸಾವಸಾನಸಮಯದೊಳ್ ದಿವಸಕರಂ ಪರಲೋಕಪ್ರಕಾಶ[2]ನಾರ್ಥಂ[2]ಪೋಪುದುಂ; ಕವಿದ ಕಟ್ಟಿರುಳೆಯುಂ ಕಂಡರಿಮರ್ದನಂ ಮಂತ್ರಿಮಂಡಲಮುಮನುಲೂಕವ್ರಜಮುಮಂ ಬರಿಸಿ ಬಱಿಕ್ಕಿಂತೆಂದಂ:— ನಿನ್ನೆ ಸಮ್ಮ ಕಾದಿದ ಕೊಳುಗುಳದೊಳೇನಾನುಮುೞಿದ ಕಾಕಬಲಮುಮನಿಂದು ನಿರವಶೇಷವಾಗಿ ಕೊಂದು ಬರ್ಪಂ ಬನ್ನಿಮೆಂದು ಪೋಗಿಮುಟ್ಟಿ ಬಂದು ವಾಯುಸನಿವಾಸಮಪ್ಪ ವಟವಿಟಪಿಯಂ ಸುತ್ತಿ ಮುತ್ತಿ ಕಾಕಬಲಮಂ ಕಾಣದುಲೂಕಂಗಳ್ ಬೊಬ್ಬಿಱಿದಾರ್ದು ನಿಜನಿವಾಸಕ್ಕೆ ಪೋಗಲಿರ್ದವಸರಮಂ ಚಿರಂಜೀವಿಯಱಿದು,

ಶ್ಲೋ॥ [3]"ಅನಾರಂಭೋ ಮನುಷ್ಯಾಣಾಂ ಪ್ರಥಮಂ ಬುದ್ಧಿಲಕ್ಷಣಂ। [೧೫
ಆರಬ್ಧಸ್ಯಾಂತಗಮನಂ ದ್ವಿತೀಯಂ ಬುದ್ಧಿಲಕ್ಷಣಂ॥" ೧೭೯

ಎಂಬ ನೀತಿಯುಂಟು.[3] ಅದಱಿಂದೆನ್ನಿರವನಱಿಪುವೆನೆಂದು ಭಿನ್ನಸ್ವರದಿಂ ಸರಂಗೆಯ್ವುದುಮುಳೂಕಂಗಳ್ ಕೇಳ್ದು ಕಾಕರುತಮಪ್ಪುದೆಂದರಿಮರ್ದನಂಗಱಿಪುವುದುಮಾತಂ ಬಂದು ನೋಡಿ ರಕ್ತಸಿಕ್ತಶರೀರ

ಟ—೧೭೯. ಕೆಲಸವಂ ತೊಡಗದಿಹುದೆ ಮನುಷ್ಯರ ಬುದ್ಧಿಗೆ ಮೊದಲ ಕುಱುಹು; ಕೆಲಸವಂ ತೊಡಗಿದ ಬಱಿಕ ಅದಂ ಕೊನೆಮುಟ್ಟಿಸುವುದೆ ಎರಡನೇಯ ಕುಱುಹು.

ಪಾ—1. ಕೃತಾಶ್ವಾಸಸಮಾತ್ತನೀರಧಿಕರವ್ರಾತಂ. ಗ॥; ಕರಾಸ್ಥಿತರಶ್ಮಿರಥಾಸ್ವಾಸ್ಥ್ಯಸಮಾತ್ತನೀರಧಿಕರವ್ರಾತಂ. ಕ॥ 2. ಕರ್ತಂ. ಗ॥ 3. ನಾನಿನ್ನುಮಿರದಿರ್ದನಾದೊಡೆ, ವಾಕ್ಯಂ॥ "ಪ್ರಾರಬ್ಧಸ್ಯಾಂತಗಮನಮನಾರಂಭೋವಾ॥" ಮೊದಲುಗೊಳ್ಳದಿರುಹ ಮೇಣ್ಯೆಂಬುದಳುಂ. ಕ॥; ಅನಾರಂಭೋವಾ; ಗ॥

ನಾಗಿ ಮುಕ್ತಜೀವನಾಗಿರ್ದ ಚಿರಂಜೀವಿಯುಂ ಕಂಡು ನೀನಾರ್ಗೆನೆಂಬ ಪೆಸರಾತನೆಂದು ಕೌಶಿಕಾಧೀಶ್ವರಂ ಬೆಸಗೊಳೆ ಚಿರಂಜೀವಿಯಿಂತೆಂದಂ:—

ಅಸಮಪರಾಕ್ರಮ! ಪೆಱತೇಂ।
ಪೆಸರೊಳ್ ಚಿರಜೀವಿಯೆಂ ಜಗದ್ವಿಶ್ರುತವಾ॥
ಯಸಚಕ್ರವರ್ತಿಮಂತ್ರಿ।
ಪ್ರಸರಾಗ್ರೇಸರನೆನಖಿಳನಯಕೋವಿದನೆಂ॥ 344 [೬

ಎಂಬುದಂ ನಿನ್ನಂತಪ್ಪ ಮಂತ್ರಿಯುಂ ಕಾಕಂಗಳೇಕೆ ಬಿಸುಟು ಪೋದುವೆನೆ; ಚಿರಂಜೀವಿ ಪೇೞ್ಗುಂ:— ನಿಮ್ಮಡಿ, ನೀಂ ನಿನ್ನೆ ಬಂದೆಮ್ಮ ಬಲಮೆಲ್ಲಮಂ ಕೊಂದು ನಿಮ್ಮ ಬೀಡಿಂಗೆ ಬಿಜಯಂಗೆಯ್ವುದುಮೆಮ್ಮರಸಂ ಮಂತ್ರಿಗಳಂ ಬರಿಸಿ ಪೇೞಿಮಿನ್ನೇಗೆಯ್ವುಮೆನೆ; ಮಂತ್ರಿಗಳ್ ನಾವಿಂದೆ ಸಕಲವಾಯಸಬಲಮೆಲ್ಲಮನೊಂದುಮಾಡಿ ಕೂಡಿಕೊಂಡರಿಮರ್ದನನೊಳ್ ಕಾದುವಮೆಂದೊಡಾ[1]ನವಂದಿ[1]ರಂ ಮಾರ್ಕೊಂಡು ಮತ್ತಮಿಂತೆಂದೆಂ:— ಬಂದಾನುಮೊಂದು ಕಾಲದೊಳ್ ನಮ್ಮ ವಂಶದ ಕಾಗೆ ಕೌಶಿಕಂಗಳೊಳ್ ಪಗೆಗೊಂಡ ಕಾರಣದಿನುಳೂಕಂಗಳ್ ಕೊಂದುವಲ್ಲದೆ ಪೆಱತೊಂದು ಕಾರಣಮಿಲ್ಲ; ನಾಮವರೊಳ್ ಪಗೆಯನೆತ್ತಿಕೊಂಡು ನಿತ್ತಱಿಸಲಱಿಯೆವದಱಿಂ ಸತ್ತು ಸೈರಿಸಿದರೆಂಬುತ್ತಮಿಕೆಯಂ ಮಾಡಿಕೊಂಡು ಕೌಶಿಕಶಿಖಾಮಣಿಯಂ ಕಂಡು ಬಾೞ್ವುದೆಂತುಂ ನಯಂ. ಅಲ್ಲದೆಯುಂ ಪೂರ್ವೋಕ್ತಮಿಂತೆಂಬುದಲ್ತೆ:— [೧೭

ಶ್ಲೋ॥ "ಬಲೀಯಸಾ ಹೀನಬಲೋ ವಿರೋಧಂ। ನ ಭೂತಿಕಾಮೋ ಮನಸಾಪಿ ಕುರ್ಯಾತ್॥ [2]ತಥಾ ಚ ಕುರ್ವನ್ ನವಿಶೇತ್ಪತಂಗೋ।
ದೀಪಾಂತರಂ ಪ್ರಾಪ್ಯ ಯಥಾ ವಿನಶ್ಯೇತ್॥[2]" ೧೯೦

[ಟೀಕು—ಬಲ್ಲಿದನೊಡನೆ ಬಡವಂ ಸ್ಪರ್ಧೆಯುಂ ಮಾಡಲಾಗದು, ಮಾಡಿದೊಡುರಿಯೊಳಗೆ ಪತಂಗದ ಪುೞು ಬಿರ್ದಹಗಹುದು.] †

---

ಪಾ— 1. ನೆನ್ನವರಂ. ಗ॥ 2. ಏವಂ ನಚೇತ್ತಬರ್ಹಿಯಥಾರ್ಥದತೀರ್ಭಾನುಪ್ರದೀಪೋಪಿಪತಂಗವರ್ತಯಃ. ಗ॥

† "ಸಾರಭ್ಯ"...ಖ॥ ಇಲ್ಲಿ ಖ॥ ಪ್ರತಿಯಲ್ಲಿ ನಾಲ್ಕು ಪಜ್ತ್ತಿಯಷ್ಟು ಸ್ಥಳ ಬಿಟ್ಟು ಮುಂದಕ್ಕೆ "ಎಂದೆನಿತಾನುಂ" ಎಂದಿದೆ.

ಎಂದೆನಿತಾನುಂ ತೆಱದಿಂ ಪೇೞಲೆನ್ನ ಮಂತ್ರಮೆ ರೋಷಗ್ರಹಾವೇಶದಂತಾಗೆ ಕೆರಳ್ದು ಕೋಪಾನಳಬಹಳಶಿಖಾಸ್ತೋಮಧೂಮಚ್ಛಾಯಾಪಟಳಪರಿವೃತನಾಗಿ ದಾವಾನಳಶಿಖಿಶಿಖಾನಿಕರಪರಿಷಿಕ್ತನೀಳಾಚಳವರ್ಣಂ ಮೇಘವರ್ಣಂ ಮುಳಿದೀಬೂತು ಪಗೆಯೊಳೊಡಂಬಟ್ಟು ಬಂದನಾಗಲ್ವೇೞ್ಕುಮಿವಂಗಂ ತಕ್ಕುದಂ ಮಾಡಿಮೆನೆ; ಸಕಳಕಾಕಬಳಮೆನ್ನಂ ಮುಸುಱಿ ನಿಶಿತಾಶನಿಪ್ರತಿಮನಿಜಚಂಚೂಚರಣಪಕ್ಷಾಘಾತದಿಂದೆನಗಿನಿತವಸ್ಥೆಯಂ ಮಾಡಿ ಪೋದುವೆಂಬುದುಂ; ಅರಿಮರ್ದನನದೆಲ್ಲಮಂ ಕೇಳ್ದಿಂತೆಂದಂ:—ನಿನ್ನ ಪೇೞ್ದ ಬುದ್ಧಿ ಹಿತಮುಂ ಉಚಿತಮುಮಪ್ಪುದಾಗಿಯುಮಲ್ಲದೊಡೇನಾಯ್ತು [1]ನಿನಗಲ್ಲದ[1] ಪರಿಭವಮಂ ಮಾಡಿದ ಪ್ರಭು ಪ್ರಭುಗುಣಕಲ್ಲದುದಂ ನೆಗೞ್ದನೆನೆ; ಮತ್ತಂ ಚಿರಂಜೀವಿಯಿಂತೆಂದಂ:— [೧೧

ವಿನಯವಿಹೀನನಾತ್ಮಹಿತಕಾರ್ಯವಿದೂರನಕಾರಣಪ್ರಕೋ।
ಪನನತಿಮೂರ್ಖನರ್ಥಪರನಸ್ಥಿರನಿಷ್ಟಸುಹೃದ್ವಿರೋಧಿ ದು॥
ರ್ಜನಪರಿವಾರನೆಂಬವನಿಸಂಗೆ ಹಿತೋಚಿತಮಪ್ಪ ಕಾರ್ಯಮಂ।
ಘನತರಭಕ್ತಿಯಿಂ ನುಡಿದವಂ ಕಿಡುಗುಂ ಪರಮಾರ್ಥವೆಲ್ಲಿಯುಂ॥

ಅಂತುಮಲ್ಲದೆಯುಂ,

ವಾಕ್ಯಂ॥ "ಶ್ರೇಯೋ ಮೂರ್ಖಸ್ಯ ನ ಬ್ರೂಯಾತ್ ॥"

ಎಂಬ ಕಥೆಗಾನುದಾಹರಣಮಾದೆನೆಂದೊಡರಿಮರ್ದನನದೆಂತೆಂದು ಬೆಸಗೊಳ್ವುದುಂ; ಚಿರಂಜೀವಿಯಿಂತೆಂದಂ:— [೧೯

### ೪. ಬುದ್ಧಿ ಹೇೞ್ದ ಪಕ್ಕಿಯಂ ಕಪಿಯು ಕೊಂದ ಕಥೆ.

ನವಕಾಶ್ಮೀರಪರಾಗರಾಗರುಚಿರಂ [2]ವಿಧ್ವಸ್ತ[2]ನೀರೇಜಷಂ।
ಡವಿಳಾಸಂ ಶಿಶಿರಾಂಬುಶೀಕರ[3]ತೃಣ[3]ಶ್ರೀಭಾಸುರಂ ಚಾರುಕೈ॥
ರವಹಾರಂ ವರಸಿಂಧುವಾರಮಬಲಾಪೀನಸ್ತನಕ್ಷುಣ್ಣಸಾ। [೨೭
ರವಿಟಾಘಂ ಗುರುಶೀತಕಾಲವೆಸೆದತ್ತೆತ್ತಂ ಮಹೀಭಾಗದೊಳ್॥

ಪಾ—1. ನಿನಗಲ್ಲದನಾಗಿಯುಂ. ॥ 2. ವಿಸ್ರಬ್ಧ. ಗ॥ 3. ಕಣ. ಗ॥

ವ|| ಅಂತೆಸೆವ ಶಿಶಿರಸಮಯದೊಳ್ ಆತ್ಮಹಿತೋಪದೇಶಾಗ್ರಹ ವಿಕಳಮಪ್ಪುದೊಂದು ಗೋಲಾಂಗೂಲಂ ಶೀತಕ್ಕಳ್ಕಿ ಸಿಡಿಮಿಡಿಗೊಳುತ್ತಿರ್ದು ಮಿಂಚುಂಬುಳುವಂ ಕಂಡುಮಿದು ಕೆಂಡಮೆಂದು ಬಗೆದದಱ ಮೇಲೆ ಪುಲ್ಲಂ ಪುಳ್ಳಿಯುಮನಿಕ್ಕಿ ನೊಕ್ಕಳಮೂದುವುದುಂ; ಸೂಚೀಮುಖನೆಂಬ ಪಕ್ಕಿ ಕಂಡು ಸಮೀಪಕ್ಕೆ ಬಂದೆಲೆ ಬಲೀಮುಖಾ! ನಿನ್ನ ಮೊಗಮುಂ ತಲೆಯುಂ ಬಾತು ಪೋದಪುದು ಕಿಚ್ಚಲ್ಲ ಮಿಂಚುಂಬುಳು ನೀನಿದನೂದಿ ದೆಸೆಗೆಡವೇಡೆಂದು ಪಿರಿದುಂ ಪೊಱ್ತು ಬಾರಿಸುತಿರ್ಪುದುಮದಱ ಪೆಂಡತಿಯಿಂತೆಂದಳೆಲೆ ಮರುಳೆ! ನೀನೀಮರ್ಕಟಂಗೆ ಬುದ್ಧಿಯಂ ಪೇೞಲ್ವೇಡೇಕೆಂದೊಡೆನ್ನ ಕೆಳೆಯಪ್ಪ ಸೂಚೀಮುಖಿಯುಮೊಂದು ಮರ್ಕಟಂ ಮೞೆಗಳ್ಕಿ ಕಳವಳಿಸುತ್ತಿರೆ ಕರುಣಿಸಿಯಿಂತೆಂದಳ್:—

ಶ್ಲೋ || "ದ್ವಿಹಸ್ತೋಽಸ್ತಿ ದ್ವಿಪಾದೋಽಸ್ತಿ ದೃಶ್ಯತೇ ಪುರುಷಾಕೃತಿಃ|
ಶೀತವಾತಪರಿಭ್ರಷ್ಟೋ ನಿಲಯಂ ನ ಕರೋತಿ ಕಿಂ ||" ೧೯೧

[ಟೀಕು—ಎರಡುಕೈ ಯೆರಡು ಕಾಲ್ಗಳುಂಟು ; ಪುರುಷಾಕಾರಂ ಕಾಣಬರುತ್ತಿದೆ; ಚಳಿಗಾಳಿಯಿಂ ಸಿಡಿಮಿಡಿಗೊಳುತಿರ್ದು ಮನೆಯನೇಕೆ ಮಾಡದು ?]

ಎಂದು ಪಲವುಂ ಸೂೞ್ ಬುದ್ಧಿಯಂ ಪೇೞುತ್ತಿರ್ಪುದುಮಾಕಪಿ ಕುಪಿತನಾಗಿ,

ಶ್ಲೋ || "ಸೂಚೀಮುಖೀ ದುರಾಚಾರೇ ಮೂರ್ಖೇ ಪಂಡಿತಮಾನಿನೀ |
ಅಸಮರ್ಥೋ ಗೃಹಾರಂಭೇ ಸಮರ್ಥೋ ಗೃಹಭಂಜನೇ ||" ೧೯೨

[ಟೀಕು—ಎಲೆ ದುರಾಚಾರೆಯಾದ ಮೂರ್ಖೆಯಾದ ಪಂಡಿತಸ್ತ್ರೀಯಾದ ಸೂಚೀಮುಖಿ ಸಮರ್ಥನಲ್ಲದಯಿರ್ದಂತಂ ಮನೆಯ ಮಾಡುವನು ; ಸಮರ್ಥನಾಗಿರ್ದಂತಂ ಮುಱಿದು ಬಿಸುಡುವನು ]

ಎಂದಾಪಕ್ಕಿಯ ಗೂಡಂ ಕೋಡಂ ಮುಱಿದೀಡಾಡಿತ್ತು. ಅದಱಿಂ ನಿನಗಿದಱ [1]ತೋಟಿ[1] ಬೇಡ. ಎಂತುಂ,

[2]ವಾಕ್ಯಂ || "ಅವಿನೀತನರಾಣಾಂ[2] ಹಿತವಾಕ್ಯಂ ನ ಭಾಷಯೇತ್ ||" ೧೯೩

ಟಿ—೧೮೩. ಅವಿನೀತರಾದ ಮನುಷ್ಯರ್ಗೆ ಹಿತವಂ ಪೇೞಲಾಗದು.

ಪಾ—1. ಕಾಟ. ಗ ||  2. ಶ್ಲೋ || ಅಂಗಿರಸ್ಯನರಾಣಾಂ. ಗ ||

ಎಂಬುದು ನೀತಿಯುಂಟೆಂದಾಪಕ್ಕಿಯು ಪೆಂಡತಿ ನಾಡೆಯುಂ ಪೇಳ್ದೊಡೆ, ಮಾಣದೆ ಸೂಚೀಮುಖಂ ಶಾಖಾಚರನನತ್ಯಾಗ್ರಹದಿಂ ಬಾರಿಸೆ, ಕೋಪಗ್ರಹಗ್ರಸ್ತನಾಗಿ ಕಲುಷಕಂಪಿತಕಟಂ ಮರ್ಕಟನಾಪಕ್ಕಿಯುಂ ಪಿಡಿದು ಕೊಂದಿಕ್ಕಿತ್ತು.

ಅದಱಿಂ,

ಶ್ಲೋ ॥ "ಶ್ರೇಯೋ ಮೂರ್ಖಸ್ಯ ನ ಬ್ರೂಯಾತ್ ಸಹವಾಸಂ ಚ ವರ್ಜಯೇತ್ ।
ಪಶ್ಯ ವಾನರಮೂರ್ಖೇನ ವನೇ ಸೂಚೀಮುಖೋ ಹತಃ ॥" ೧೮೪

[ಟೀಕು—ಮೂರ್ಖಂಗೆ ಹಿತವಂ ನುಡಿಯಲಾಗದು; ಆತನ ಕೂಡೆಯುಮಿರಲಾಗದು. ಅದೆಂತೆನೆ:-ವಾನರಮೂರ್ಖಂಗೆ ಬುದ್ಧಿಯಂ ಹೇೞ್ದ ಸೂಚೀಮುಖಂ ವನದಲ್ಲಿ ಕೊಲಲ್ಪಟ್ಟಿತು.]

ಅಂತುಮಲ್ಲದೆಯುಂ,

ಶ್ಲೋ ॥ "ಶಕ್ಯೋ ವಾರಯಿತುಂ ಜಲೇನ ದಹನಶ್ಛತ್ರೇಣ ಸೂರ್ಯ[1]ಪ್ರಭಾ[1] ।
ವ್ಯಾಧಿರ್ಭೈಷಜ್ಯಕೃತೌಷಧೇನ ವಿವಿಧೈರ್ಮಂತ್ರಪ್ರಯೋಗೈರ್ವಿಷಂ ॥
ನಾಗೇಂದ್ರೋ ನಿಶಿತಾಂಕುಶೇನ ಸಮದೋ ದಂಡೇನ ಗೋಗರ್ದಭೌ ।
ಸರ್ವಸ್ಯೌಷಧಮಸ್ತಿ ಶಾಸ್ತ್ರವಿಹಿತಂ ಮೂರ್ಖಸ್ಯ ನಾಸ್ತ್ಯೌಷಧಂ ॥" ೧೮೫

[ಟೀಕು—ಉದಕದಿಂದಗ್ನಿಯಂ, ಸತ್ತಿಗೆಯಿಂ ಬಿಸಿಲಂ, ಔಷಧದಿಂ ವ್ಯಾಧಿಯಂ, ಮಂತ್ರಪ್ರಯೋಗದಿಂ ವಿಷಮಂ, ಅಂಕುಸದಿಂದಾನೆಯುಂ, ದಡಿಯಿಂದೆತ್ತು ಕತ್ತೆಗಳಂ, ನಿಲಿಸಲ್ ಬಹುದು; ಮತ್ತೆ, ಎಲ್ಲವಕ್ಕಂ ಶಾಸ್ತ್ರವಿಹಿತಮಪ್ಪೌಷಧಮುಂಟು ಮೂರ್ಖಂಗೌಷಧವಿಲ್ಲ]

ಎಂಬುದುಂ; ಅದೆಲ್ಲಮಂ ಕೇಳ್ದರಿಮರ್ದನಂ ತನ್ನನ್ವಯಾಗತಮಂತ್ರಿಗಳಪ್ಪ ರಕ್ತಾಕ್ಷ, ಕ್ರೂರಾಕ್ಷ, ಜಿಂಹಾಕ್ಷ, ದೃಪದಾಕ್ಷರೆಂಬ ನಾಲ್ವರ್ಮುಖ್ಯಮಂತ್ರಿಗಳಂ ಸಮೀಪಕ್ಕೆ ಕರೆದು—ಪೇೞಿಮೀ ಚಿರಂಜೀವಿಗೇಗೆಯಲ್ವೇಕ್ಕುದೆನೆ; ನಯಾಗಮದಕ್ಷಂ ರಕ್ತಾಕ್ಷನಿಂತೆಂದಂ:—

ಬಡವೆಯನಿತ್ತುಂ ಸಂತತ।
ಮೊಡನುಂಡುಂ ಕೂಸುಗೊಟ್ಟುಮೆಂದುದನೆಂದುಂ ॥

ಪಾ—1. ತಪೋ. ಗ ॥

ಕಡುಗೂರ್ತುರ್ಮಹಿತಬಲವಂ ।
ಕಿಡಿಸುವುದುಚಿತಂ ನೃಪಂಗೆ ಮನುಮುನಿಮತದಿಂ ॥ 344

ಅದಲ್ಲದೆಯುಂ, ಪೂರ್ವೋಕ್ತಮಿಂತೆಂಬುದಲ್ತೆ:—

ಶ್ಲೋ ॥ "ಹೀನಶ್ಶತ್ರುರ್ನಿಹಂತವ್ಯೋ ಯಾವನ್ನ ಬಲವಾನ್ ಭವೇತ್ ।
ಸಂಜಾತಬಲಪೌಷ್ಕಲ್ಯಃ ಪಶ್ಚಾದ್ಭವತಿ ದುರ್ಜಯಃ ॥" ೧೯೬

[ಟೀಕು—ಶತ್ರು ದುರ್ಬಲನಾಗಿರ್ದಲ್ಲಿಯೇ ಕಿಡಿಸಲ್ವೇಱ್ಕುಂ; ಬಲಾಧಿಕನಾದ ಬೞಿಕ ಕಿಡಿಸಲ್ಬಾರದು.]

ಅದಱಿನೀತನಂ ಯಮನಿಕೇತನಕ್ಕಟ್ಟುವುದೆ ನಯಮೆನೆ; ಕ್ರೂರಾಕ್ಷನಂ ಕರೆದು—ನಿನ್ನಭಿಪ್ರಾಯಮಾವುದು ಪೇೞೆನೆ; ಅವನೀತನಂ ಕೊಲ್ವುದೆ ನೀತಿಯೆನೆ; ಜಿಂಹಾಕ್ಷನಂ ಬೆಸಗೊಳಲಾತನಿಂತೆಂದನೀ ಮಂತ್ರಿಗಳ್ ಪೇೞ್ದಿಂತೆ ಕದನದೊಳದಿರ್ಚಿದರಂ ಕೊಂದೊಡೊಂದುಂ ದೋಷಮಿಲ್ಲ; ಅದಲ್ಲದೆಯುಂ,

ಪುತ್ರೋಱಿದನಂ ಕೈದುವ ।
ನಿತ್ತನನೇರ್ಪೆತ್ತನಂ ರಣಾಂಗಣದೊಳ್ ಬೆ ।
ನ್ನಿತ್ತನನಿಱಿಯರಮೋಘಂ ।
ಮತ್ತೆನಿಸದೆ ತುಱಿಲಸಂದ ಜನಮಂ ಜಗದೊಳ್ ॥ 345

ಪುಲ್ಲಂ ಕರ್ಚಿದನಂ ತ ।
ಳ್ವಲ್ಲದೆ ಮಱೆವೊಕ್ಕನಂ ಮಹಾಬ್ರಾಹ್ಮಣನಂ ॥
ಕೊಲ್ಲರ್ ಪಾಪಕ್ಕಂಜುವ ।
ರೆಲ್ಲಂ ಸ್ತ್ರೀಬಾಲವೃದ್ಧಜನಮಂ ಜಗದೊಳ್ ॥ 346

ಅದಲ್ಲದೆಯುಂ, ಶ್ರೀರಾಮನಂ ಗುಣಂಗೊಂಡನೆಂಬಿನಿತಱೊಳೆ ರಾವಣಂ ವಿಭೀಷಣನನೆಂತು ಪರಿಹರಿಸಿದನಂತೆ ನಿಮ್ಮಡಿಯ ಗುಣಪ್ರಶಂಸೆಗೆಯ್ದನಿತಱೊಳೆ ವಾಯಸಂಗಳಿದರ್ಕಿನಿತವಸ್ಥೆಯನೆಯ್ದಿಸಿದುವದಱಿಂದಿದು ನಮ್ಮ ಕೈಯೊಳ್ ವಧಪ್ರಾಪ್ತನಲ್ಲಮಲ್ಲದೆಯುಂ, ಪೂರ್ವೋಕ್ತಮಿಂತೆಂಬುದಲ್ತೆ:—

ಶ್ಲೋ || “ಶ್ರೂಯತೇ ಹಿ ಕಪೋತೇನ ಶತ್ರುಶ್ಶರಣಮಾಗತಃ ||”

ಎಂಬ ಕಥೆಯಂ ಕೇಳ್ದಱಿಯಿರೆಂದೊಡರಿಮರ್ದನನದೆಂತೆನೆ — ನಯಶಾಸ್ತ್ರದಕ್ಷಂ ಜಿಂಹಾಕ್ಷಂ ಪೇೞ್ಗುಂ:—

೫. ಕಪೋತಂ ಕಿರಾತಂಗೆ ತನ್ನಸುವನಿತ್ತ ಕಥೆ.

ವ|| ಒರ್ವ ಶಬರಶಿಬಿರಾಧಿನಾಯಕಂ ಬೇಂಟೆವೋಗಿ ಪಕ್ಕಿಗಳನೆಲ್ಲಿಯುಂ ಪಡೆಯದೆ ಅಡವಿಯೊಳಿರ್ಪನ್ನೆಗಮಕಾಲಜಲಧರನಿರ್ಮುಕ್ತಘೋರಾಂಬುಧಾರಾಪಾತದಿಂ ನಾಂದತಿಪ್ರಚಂಡಪವನಹತಿಯಿಂದಾಕಂಪಿತಶರೀರನಾಗಿ ಬರುತ್ತುಂ, [೫

ವಿವಿಧಪ್ರಕಾರಶಾಖಾ।
ನಿವಹಮನುದ್ಯದ್ವಿಚಿತ್ರಪತ್ರಮನುದ್ಧಾ ॥
ಮವಟಕ್ಷಮಾಜಮಂ ಶಬ।
ರವಲ್ಲಭಂ ಮೆಲ್ಲಮೆಲ್ಲನೆಯ್ದಿದನಾಗಳ್ ॥347 [೧೨

ಅಂತೆಯ್ದಿ ವಂದು ಬೆಱ್[1]ತು ಬಿಬ್ಬ[1]ಱಗಾದ ಕೈಯಂ ಕಾಲುಮನುಡುಗಿ ಕುನುಂಗಿ ಕುಳ್ಳಿರ್ದ ಕಿರಾತನನಾಮರದೊಳಿರ್ಪ ಕಪೋತಶಿಖಾಮಣಿ ಕಂಡು ಕರುಣಾರಸಾರ್ದ್ರಹೃದಯನಾಗಿ ಸಮೀಪದೊಳಿರ್ದ ತಾಪಸಾಶ್ರಮಕ್ಕಾಗಳೆಪೋಗಿ ಚಂಚೂಪುಟದಿನೊಂದು ಕೊಳ್ಳಿಯಂ ಕರ್ಚಿತಂದು ಪುಳಿಂದನ ಮುಂದಿಟ್ಟು ಪುಲ್ಲಂ ಪುಳ್ಳಿಯುಮಂ ತಂದಿಕ್ಕಿ ಕಿಚ್ಚನುರಿಪೆ ಸರ್ವಾಂಗಮಂ ಕಾಸಿಕೊಂಡು ಸಚೇತನನಾಗಿ ಬಾಹ್ಯಾಂತರಾಗ್ನಿಗಳೊಡಲನೊಡನೊಡನೆ ಸುಡೆ ಸೈರಿಸಲಾಱದಿಂತೆಂದಂ:— ಎನಗಿನಿತುಮುಪಚಾರಂಗೆಯ್ದ ದೈವವೇ! ನೀನೆನ್ನ ಕ್ಷುದ್ಬಾಧೆಯಂ ಮಾಣಿಸಿ ಪ್ರಾಣಮಂ ರಕ್ಷಿಸಲ್ವೇೞ್ಕುಮೆನೆ; ಕಪೋತಾಧಿರಾಜನಿನ್ನೇಗೆಯ್ವೆನೆಂದು,

ಅನಿಮಿತ್ತಂ ಗರುಡಂಗೆ ತನ್ನಸುವನಿತ್ತ[2]ನ್ತಾದಿ[2] ಜೀಮೂತವಾ।
ಹನವಿದ್ಯಾಧರಚಕ್ರವರ್ತಿತಿಳಕಂ ಶ್ರೀಲೀಲನಂ ಶಂಖಚೂ ॥

ಪಾ—1. ತುಬ್ಬಿ ಬೆ. ಗ ॥ 2. ಸ್ತಾಂ. ಕ ॥ ಖ ॥

ಡನನುತ್ಸಾಹದೆ ಕಾದು ನಾಗನಿವಹಕ್ಕಾನಂದಮಂ ಮಾಡಿ ಜೀ ।
ಯೆನೆ ವಾರಾಶಿಪರೀತಧಾತ್ರಿ ತಳೆದಂ ಲೋಕೋತ್ತರಂ ಕೀರ್ತಿಯಂ ॥

ಅದಱಿಂದೀಶರೀರಂ ಪರೋಪಕಾರಾರ್ಥಮಾಗಲ್ವೇಟ್ಕುಮೀತನುಂ ಪ್ರಾರ್ಥಿಸಿದನೆನಗಂ ಪೆಱತುಪಾಯಮಿಲ್ಲಮೀಶಬರಂಗೆನ್ನ ಶರೀರಮನೆ ಕುಡುವೆನೆಂದು ಕಪೋತಕುಲೋತ್ತಮಂ ಪರೋಪಕಾರಾರ್ಥಕ್ಕೆ ಚಿತ್ತಮಂ ಕೈಕೊಂಡು, [೬

ದಶಮುಖನ ರೌದ್ರಕೋಪಾ ।
ಗ್ನಿಶಿಖಾಳಿಗಿದಿರ್ಚಿದಾಜಟಾಯುವ ತೆಱದಿಂ ॥
ವಿಶದಮತಿ ವಿಸ್ಫುರದ್ದಹ ।
ನಶಿಖಾಳಿಗಿದಿರ್ಚಿದಂ ಕಪೋತಾಧೀಶಂ ॥ 348

ಅಂತಾಕಿರ್ಚಿನೊಳ್ ಪಾಯ್ದು ಸತ್ತ ಕಪೋತನಂ ಕಂಡು ಕಿರಾತಂ ತನ್ನುದರದಹನತಾಪಶಮನಮಂ ಮಾಡಿದಂ.

ಅದಱಿಂ

ಶ್ಲೋ ॥ "ಶ್ರೂಯತೇ ಹಿ ಕಪೋತೇನ ಶತ್ರುಶ್ಶರಣಮಾಗತಃ । [೧೪
ಜೀಮೂತೇನ ಯಥಾನ್ಯಾಯಂ ಸ್ವಮಾಂಸೈರಪಿ ತರ್ಪಿತಃ" ॥ ೧೯೩

ಅಂತು ಕಪೋತಂ ಶರಣಾಗತನೆಂಬನಿತಱೊಳೆ ಕಿರಾತಂಗೆ ಮೊದಲಾಗಿ ತನ್ನಸುವನಿತ್ತುದು. ಈತನುಂ ನಿಮ್ಮಡಿಯ ಗುಣಕೀರ್ತನಮೆ ಕಾರಣಮಾಗಿ ಕಾಗೆಯ ಕೈಯೊಳ್ ಪರಾಭವಂಬೆತ್ತನಂತುಮಲ್ಲದೆ ತನ್ನಾಳ್ದನ ದೆಸೆಯೊಳ್ ಭೀತನುಮಪಮಾನಿತನುಮಾಗಿರ್ದನದಱಿಂದೀತನಂ ಕಾವುದೆ ನೀತಿಯುಂ ಧರ್ಮಮುಮೆಂಬುದುಂ; ಕೇಳ್ದರಿಮರ್ದನಂ ದೃಪದಾಕ್ಷನೆಂಬ ಮಂತ್ರಿಯ ಮೊಗಮಂ ನೋಡಿ ನಿಮ್ಮ ಕಂಡ [1]ನಯಮಾವುದು ಪೇೞಿಮೆನಲಾತನಿಂತೆಂದಂ[1]:—ಜಿಂಹಾಕ್ಷನೆಂದಂತೀವಾಯಸಂ ವಧ[2]ಪ್ರಾಪ್ತ[2]ನಲ್ಲನದಲ್ಲದೆಯುಂ,

ಟಿ—೧೯೩. ಮಱೆಹೊಕ್ಕ ಶತ್ರುವಂ ಕಪೋತಂ ಸ್ವಶರೀರಮಾಂಸದಿಂದಲೆ ಆರಾಧಿಸಿತು. ಅದೆಹಗೆಂದೊಡೆ—ಜೀಮೂತವಾಹನಂ ಸ್ವಮಾಂಸದಿಂ ಗರುಡನನಾರಾಧಿಸಿದಹಗೆ.

ಪಾ—1. ಕತೆಯುಂಟೆನೆಯಾತಂ. ಗ ॥ 2. ಯೋಗ್ಯ. ಗ ॥

ಶ್ಲೋ || "ಶತ್ರೋರಪಿ ಹಿತಂ ಶ್ರೇಯೋ [1]ವಿವದೇತೇ[1] ಪರಸ್ಪರಂ" ||

ಎಂಬುದೊಂದು ಕಥೆಯುಂಟೆನೆ— ಕೌಶಿಕಾಧೀಶ್ವರನದೆಂತೆನೆ—ದೃಪದಾಕ್ಷಂ ಪೇೞ್ಗುಂ:—

೬. ಬ್ರಹ್ಮರಾಕ್ಷಸನುಂ, ತಸ್ಕರನುಂ.

[2]ಉಜ್ಜಯಿನಿ[2]ಯೆಂಬ ಪೊೞಲೊಳ್ ಸುಬ್ರಹ್ಮಣ್ಯನೆಂಬ ಬ್ರಾಹ್ಮಣರ್ನಿರ್ಪಂ. ಆತಂಗೆರಡಾವನಾರಾನುಂ ದಾನಂಗೊಟ್ಟೊಡವಂ ಕಳಲೆಂದೊರ್ಬ ಕಳ್ಳಂ ಬರುತ್ತಿರ್ದೆಡೆಯೊಳೊಂದು ನಿಡಿದಪ್ಪ ರೂಪಂ ಕಂಡು ನೀನಾರ್ಗೆಂದು ಬೆಸಗೊಂಡೊಡೆ, ಆಂ ಬ್ರಹ್ಮರಾಕ್ಷಸಂ, ನೀನಾರೆಂದು ಕೇಳ್ದೊಡಾಂ ಕಳ್ಳನೆಂದೊಡೆಲ್ಲಿಗೆ ಪೋದಪ್ಪೆಯೆಂದು ಬೆಸಗೊಳ್ವುದುಂ; ಸುಬ್ರಹ್ಮಣ್ಯಭಟ್ಟಂಗೆರಡಾವುಳ್ಳನಂ ಕಳಲ್ಪೋದಪ್ಪೆನೆಂಬುದುಂ; ನಾನಾ ಬ್ರಾಹ್ಮಣನಂ ಪಿಡಿಯಲೆಂದು ಪೋಗಲಿರ್ದೆನದಱಿಂದೊಡನೆ ಪೋಪಂ ನಡೆಯೆಂದಿರ್ಬರುಂ ಬ್ರಾಹ್ಮಣನ ಮನೆಯನೆಯ್ದೆವಂದು ಕಳ್ಳನಿಂತೆಂದಂ; ನಾನಾಪಶುವನುಯ್ವನ್ನೆವರಂ ನೀನುಸಿರದಿರೆನೆ; ರಕ್ಕಸನಿಂತೆಂದಂ:— ನೀನಾಪಶುವಂ[3]ಬಿಡುವ ಪೊಡೆವ ಕಳಕಳಮುಂ[3] ಕೇಳ್ದು ಪಾರ್ವನೆೞ್ಚತ್ತೊಡೆನ್ನ ಕಾರ್ಯಂ ಕಿಡುಗುಂ; ಮುನ್ನಂ ನಾಂ ಪಿಡಿದಪೆಂ; ಬೞಿಕ್ಕ ನೀಂ ಪಶುವಂ ಕೊಂಡು ಪೋಗೆಂದೊಡೆ—ಕಳ್ಳನೆಂದನಂತಪ್ಪೊಡೆ ಬ್ರಹ್ಮರಾಕ್ಷಸಂ ಪಿಡಿಯಲ್ಬಂದಿರ್ದಪಂ, ಜೇಗಮೇೞೆಂದು ಪೇೞ್ದಪೆಂ ನೋಡೆನೆ; ಬ್ರಹ್ಮರಾಕ್ಷಸಂ—[4]ನಿನ್ನಿಂದೆ[4] ಮುನ್ನಮೆ ನಾಂ ಪೇೞ್ದಪೆನೆಂದು ಪಾರ್ವನ ಪೞಕ್ಕಿಯ ಸಮೀಪಕ್ಕೆ ಬಂದೆಲೆ ಬ್ರಾಹ್ಮಣಾ! ನಿನ್ನ ಪಸುವಂ ಕಳ್ದುಕೊಂಡು ಪೋಗಲೆಂದೊರ್ವ ಕಳ್ಳಂ ಬಂದಿರ್ದಪಂ ಬೇಗಮೇೞೆನಲೊಡಂ; ಕಳ್ಳಂ—ಎಲೆ ಬ್ರಾಹ್ಮಣಾ! ನಿನ್ನಂ ಬ್ರಹ್ಮರಾಕ್ಷಸಂ ಪಿಡಿಯಲ್ಬಂದಿರ್ದಪಂ ಬೇಗಮೇೞೆಂಬುದುಮದಂ ಕೇಳ್ದು ಬ್ರಾಹ್ಮಣನೆೞ್ಚತ್ತು

ಪಾ—1. ವಿವಾದಂತೇ. ಗ || 2. ಕನ್ನೆಉಜ್ಜಯಿನಿ. ಎಂದು ಕ || ಪ್ರತಿಯಲ್ಲಿದೆ. 3. ಸುಯ್ವಕಳವಳಮುಂ. ಖ || ಗ || 4. ನಿನ್ನಿಂದ. ಗ ||

ದಾರೆಲವೋ! ಎಂದ[1]ದ್ದ[1]ರಿಸಿ ಬರಲೊಡಂ; ತಸ್ಕರನುಂ ಬ್ರಹ್ಮರಾಕ್ಷಸನುಮೋಡಿ ಪೋದರ್. *

ಅದಱಿಂ,

ಶ್ಲೋ || "ಶತ್ರೋರಪಿ ಹಿತಂ ಶ್ರೇಯೋ ವಿವದೇತೇ ಪರಸ್ಪರಂ |(?)
ಚೋರೇಣ ಜೀವಿತಂ ದತ್ತಂ ರಾಕ್ಷಸೇನ ತು ಗೋಯುಗಂ ||" ೧೮೪

[ಟೀಕು—ಶತ್ರುಗಳಾಗಿರ್ದವರ್ ತಮ್ಮೊಳ್ ವಿವಾದಂಮಾಡಿದ ದೆಸೆಯಿಂ, ಕಳ್ಳನದೆಸೆಯಿಂ ಬ್ರಾಹ್ಮಣನ ಸಾವು ಉಳಿಯಲ್ಪಟ್ಟಿತು; ರಾಕ್ಷಸನಿಂ ಗೋವುಗಳೆರಡುಮುಳಿಯಲ್ಪಟ್ಟುವು.] [೮

ಅದುಕಾರಣದಿಂ ವಿರೋಧಿವರ್ಗದೊಳೆನ್ನರುಮನಾದೊಡಂ [2]ತನ್ನೊಳ್[2] ಗಿಡುವುದೆ ನಮಗುಱುವ ಕಾರ್ಯ್ಯಂ. ಅಂತುಮಲ್ಲದೀತಂ ಮೇಘವರ್ಣನ ಪ್ರಧಾನನವರಿಂದಪಮಾನಿತನಾಗಿ ಬಂದಾತನಂ ಕೈಕೊಳ್ವುದೆ ನೀತಿಯುಂ ಖ್ಯಾತಿಯುಮದೆಂತೆನೆ:—ಕಮಲಾಸನನ ಕೈಯೊಳಮರತ್ವಮಂ ಪಡೆದಮರಸಮಿತಿಯಂ ಕೋಟಲೆಗೊಳಿಪ ಹಿರಣ್ಯಾಕ್ಷನಂ ಪುಂಡರೀಕಾಕ್ಷಂ ಕೊಂದಾತನಗ್ರಸುತನಪ್ಪ ಪ್ರಹ್ಲಾದಂ ತನಗೆ ಭಕ್ತನೆಂಬುನಿತಱಿಕೆಯೊಳೆ ಕಾದು ಆತಂಗೆ ವರದನಾದಂ. ಅದಱಿಂದೀಚಿರಂಜೀವಿಯುಂ ಕಾವುದೆ ಧರ್ಮ್ಮಂ. ಅದಲ್ಲದೆಯುಂ, ಮಳಯಕೇತುವೆಂಬ ರಾಜತನೂಜನತಿತೇಜಿಷ್ಠನಾಗಿ ತನ್ನ ಮಂತ್ರಿ [3]ಮುದ್ರಾ[3]ರಾಕ್ಷಸಂಗೆ ತಥ್ಯಾಭಿಯೋಗಮಾದೊಡಂ ಮಿಥ್ಯಾಭಿಯೋಗಮೆಂದು ನಿಶ್ಚೈಸಿ ನಿರ್ವಿಚಾರದಿಂ ನಿರ್ದ್ದಾಟಿಸಿ ಕಳೆದೊಡಾತನಪಮಾನಿತನಾಗಿ ಪೋಗಿ ಚಂದ್ರಗುಪ್ತಂಗಾಪ್ತನಪ್ಪುದುಮಾಮಲಯಕೇತು ಮಂತ್ರಿ[4]ಸ[4]ಹಿತನಾಗಿ ಶತ್ರುಸಂಗ್ರಹಕ್ಕೆ ಬಂದಂ. ಅದಱಿಂ ಮೇಘವರ್ಣನುಮಿಂತಪ್ಪ ಮಂತ್ರಿಯನವಜ್ಞೆಗೆಯ್ದುಪೇಕ್ಷೆಯಿಂದಿರೆ ಕೆಟ್ಟಂ. ಅದರ್ಕೊಂದುಂ ಸಂದೆಯಂ ಬೇಡ. ನಾವೀಮಾಯುಸಮಂತ್ರಿಯಂ ಕಾವುದೆ ನಯಂ. ಎಂದನೇಕಹೇತು

ಪಾ—1. ಙ್ಙ. ಕ || * ಇಲ್ಲಿ—ನಾ || . . . ಎಂದು ಬರೆದು, ನಾಲ್ಕುಪಙ್ತಿಯಷ್ಟುಸ್ಥಳ ಖ || ಪ್ರತಿಯಲ್ಲಿ ಬಿಟ್ಟಿದೆ. 2. ನಮ್ಮೊಳ್. ಗ || 3. ಯಾದ. ಗ || 4. ರ. ಗ ||

ದೃಷ್ಟಾಂತಂಗಳಂ ತೋಱಿ ನುಡಿದ ದೃಪದಾಕ್ಷನಂ ಕಟಾಕ್ಷಿಸಿ ಪತಿಹಿತಶಿಖಾಮಣಿಯಪ್ಪ ರಕ್ತಾಕ್ಷನಿಂತೆಂದಂ:—

ಶ್ಲೋ || "ಉಪಕಾರಾಣಿ ವಾಕ್ಯಾನಿ ಶತ್ರೂಣಾಮುಪಲಕ್ಷಯೇತ್ |
ವ್ಯಾಧಾ ಮೃಗವಧಂ ಕರ್ತುಂ ಹೃದ್ಯಂ ಗಾಯಂತಿ ಸುಸ್ವರಂ ||" ೧೪೯

[ಟೀಕು—ಶತ್ರುಗಳ್ಗಪಕಾರವಪ್ಪ ವಾಕ್ಯಂಗಳನೆ ತೋಱುವುದು: ವ್ಯಾಧರ್ ಮೃಗವಧೆಯಂ ಮಾಡಲೋಸುಗ ಸುಸ್ವರದಲ್ಲಿ ಹಾಡುವರ್.] [೬

[1]ಎಂಬ ನೀತಿಯಿಂ[1] ನೀವೆಲ್ಲಂ ಕಪಟನಾಟಕಸೂತ್ರಧಾರನುಮಪ್ರಕಾಶಹೃದಯನುಂ ಕ್ಷಮಾಧಾರನುಂ [2]ಅತಿ[2]ವಿಧಾನನುಂ ಮೇಘವರ್ಣನಪ್ರಧಾನನುಮಪ್ಪ ಚಿರಂಜೀವಿಯ ಕಪಟಮನಱಿಯದೆ ಮೃದುಮಧುರಾಲಾಪಂಗಳಂ ನಂಬಿ ಕೌಶಿಕಶಿಖಾಮಣಿಯ ಪ್ರಾಜ್ಯರಾಜ್ಯಮಹಾಮಹೀರುಹಕ್ಕೆ ದಾವಾಗ್ನಿಗಳಾದಿರದೇಕೆಂದೊಡೆ—ಚಿರಂಜೀವಿ ಚಿರಂತನನುಂ[3] ಬುದ್ಧಿವಂತನುಂ ಸ್ವಾಮಿಹಿತನುಮಪ್ಪುದಱಿನೆಂತುಂ ಸ್ವಾಮಿಗೆ ತಪ್ಪಲಱಿಯಂ ಮತ್ತಮೀತನಿರ್ದಂದಂ ವತ್ಸರಾಜನೆಂಬ ರಾಜಪುತ್ರಂ ಶತ್ರುಸಂಗ್ರಹಕ್ಕೊಳಗಾದೊಡಾತನ ಮಂತ್ರಿ ಯೌಗಂಧರಾಯಣಂ ಪತಿಹಿತಾರ್ಥಂ ಯೋಗಾ[4]ಚಾ[4]ರನಾಗಿರ್ದಂತೆಯುಂ, [5]ಬಂಧುಸಂಬಂಧಮಪ್ಪ ಬದ್ಧವೈರಂ ಕಾರಣಮಾಗಿ[5] ದುರ್ಯೋಧನನಂ ಸಾಧಿಸಲೆಂದಾರಾಧಿಸುತ್ತುಂ ಶಕುನಿಯೆಂತಿರ್ದನಂತೆಯುಂ, ನಂದಂ ನಿಜನಂದನರಂ ಕೊಂದ ಪಗೆಯುಂ ಬಗೆಯೊಳೆ ಸಾಧಿಸಲೆಂದು ಸಾಧುವೇಷದಿಂ ಭೇದಿಸಲಿರ್ದಂತೆಯುಂ, ವಾಯಸಮಂತ್ರಿ ನಮಗಪಾಯಮಂ ಬಗೆದುಪಾಯದಿನಿರ್ದೊಡಿವೆಲ್ಲಂ ಸಹಜಮಲ್ಲ. ನಿಶ್ಚಯಂ ಕಾಗೆಗಳ್ಗೆ ಪಗೆಯಾಗಿರ್ದನೆಂದು ನಂಬಲ್ವೇಡಮೆಂದು ಪ್ರತ್ಯಕ್ಷಾನುಮಾನಂಗಳಿಂ ತತ್ತ್ವವಿದಂ ನುಡಿವಂತೆ ನುಡಿದ ನಿಜಮಹತ್ತರಂಗುತ್ತರಂಗೊಡಲೊಲ್ಲದಿರ್ದರಿಮರ್ದನಂಗೆ

ಪಾ—1. ಎಂಬಂತೆ. ಗ || 2. ಮತಿ. ಗ || 3. ಜೀವಿಯುಂ. ಖ || 4. ಧಾ. ಕ || 5. ಸಂಬಂಧಿಗರಂ ಕೊಂದ ಪಗೆಯಿಂ. ಗ ||

ಕ್ಷತ್ರಪ್ರತಿಪತ್ತಿ ಚಿತ್ತಮನೊತ್ತರಿಸೆ,
ಶರಣಾಗತರಕ್ಷಣ[1]ಮೇ[1] ।
ನರಪಂಗೆ ವಿಶೇಷಲಕ್ಷಣಂ ನಿಶ್ಚಯಮೆಂ ॥
ದರಿಮರ್ದನನಂತಾಗಳ್ ।
ಚಿರಜೀವಿಯನೆತ್ತಿಮೆಂದು ತೊಟ್ಟನೆ ನುಡಿದಂ ॥354

ಅಂತು ನುಡಿದಾಕೌಶಿಕಾಧೀಶ್ವರನ ಮಾತಂ ಕೇಳ್ದು ರಕ್ತಾಕ್ಷನಿಂತೆಂದಂ:— ದೇವಾ! ನೀವಿಂತೀರಾಜಸವೃತ್ತಿಯಿಂದೀಚಿರಂಜೀವಿಯನೆತ್ತಿದಿರಪ್ಪೊಡೆ,

ಶ್ಲೋ॥ “ಶ್ರೂಯತೇ ಹಿ ಮೃತಂ ಸಿಂಹಂ ಘಾತಯಿತ್ವಾ ತದಸ್ಥಿಭಿಃ ।
ಕಾರಯಿತ್ವಾ ಚ ಸಪ್ರಾಣಂ ತೇನ ತುಂಗಭುಜೋ ಹತಃ ॥” ೮೦

[ಟೀಕು—ಸತ್ತ ಸಿಂಹದ ಅಸ್ಥಿಗಳೊಂದುಗೂಡಿ ಆಕಾರವಂ ಮಾಡಿ ಪ್ರಾಣವಂ ಬರಿಸಿ ಆಸಿಂಹದಿಂ ತುಂಗಭುಜನೆಂಬರಸು ಕೊಲಲ್ಪಟ್ಟಂ.]

ಎಂಬ ಕಥೆಯುಂತಕ್ಕುಮೆನೆ—ಕೌಶಿಕಾಧೀಶ್ವರನದೆಂತೆನೆ—ಮಂತ್ರಿಚೂಡಾಮಣಿಯಪ್ಪ ರಕ್ತಾಕ್ಷನಿಂತೆಂದಂ:—

## ೭. ತುಂಗಭುಜನ ಕಥೆ.

ಅಂಗಜಬಾಣಕಲ್ಪಗಣಿಕಾಗಣದಿಂ ವಿಟಕೋಟಿಯಿಂ ನವೋ।
ತ್ತುಂಗಶಿವಾಲಯಪ್ರಕರದಿಂ ವರವಾಪಿಗಳಿಂ ಬೃಹತ್ತಟಾ॥
ಕಂಗಳನಿಕ್ಷುಚೂತವನರಾಜಿಗಳಿಂದೆಸೆದಿರ್ಪ ರಮ್ಯಗೇ।
ಹಂಗಳನಂಗದೇಶದ ಬೆಡಂಗು ಮನಂಗೊಳಿಕುಂ ಜನಂಗಳಂ ॥355

ವ॥ ಅಂತಪ್ಪಂಗದೇಶದೊಳ್ ತುಂಗಭುಜನೆಂಬರಸನಿರ್ಪಂ. ಆತನಲ್ಲಿಗೆ ಯೋಗಸಿದ್ಧ ತಂತ್ರಸಿದ್ಧ ಮಂತ್ರಸಿದ್ಧರೆಂಬ ಮೂವರ್ ಸಿದ್ಧರ್ ಬಂದು ಚೋದ್ಯಮಪ್ಪ ವಿದ್ಯೆಗಳಂ ಬಲ್ಲೆವೆಂದೊಡರಸಂ—ನೀಂ ಬಲ್ಲ ವಿದ್ಯೆಗಳಾವುವೆನೆ; ಯೋಗಸಿದ್ಧನೆಂದಂ:—ಎನಿತು ಕಾಲದಸ್ಥಿಸಮೂಹಂಗಳಿರ್ದೊಡಂ ಇವಿಂತಪ್ಪ ಪ್ರಾಣಿಗಳ ಶಲ್ಯವೆಂದು ಸಹದೇವನಂತೆ ಪೇಳಿಲ್

ಪಾ—1. ಮುಂ. ಗ ॥

ಬಲ್ಲೆನೆಂಬುದುಂ; ತಂತ್ರಸಿದ್ಧನೆಂದಂ:—ಆನೀತಂ ತೋಱಿದಸ್ಥಿಗಳನಾ ಪ್ರಾಣಿಯ ಪೂರ್ವರೂಪಮಂ ಪೋಲೆ ವಿಶ್ವಕರ್ಮನಂತೆ ನಿರ್ಮಿಸಲ್ ಬಲ್ಲೆನೆಂಬುದುಂ; ಮಂತ್ರಸಿದ್ಧಂ:—ಆನೀಸಾಧಕಂ ಸಲಕ್ಷಣಮಾಗಿ ಮಾಡಿದ ಶಲ್ಯಾವಯವಕ್ಕೆ ದೇವನಂತೆ ಜೀವಮಂ ಪಡೆದುಮದರ್ಕೆ ಸತ್ತ್ವಮುಂ ದೃಢತ್ವಮುಮುಪ್ಪಂತೆ ಮಾಡಿ ತೋಱಲ್ ಬಲ್ಲೆನೆಂದು ಬಿನ್ನಪಂಗೆಯ್ದೊಡರಸನವರಂ ಮನ್ನಿಸಿ ಬೞಿಕೊರ್ವ ವ್ಯಾಧಾಧಿಪನಂ ಬರಿಸಿ ಪಲಕಾಲದ ಶಲ್ಯಂಗಳನೆಲ್ಲಿಯಾದೊಡಂ ಕೊಂಡು ಬಾ ಪೋಗೆಂದೊಡಾಕಿರಾತಕಂ ಪೋಗಿ ತನ್ನ ಪಳ್ಳಿಯ ಸಮೀಪದೊಳ್ ಪುರಾಣಕೂಪದೊಳಿರ್ದಸ್ಥಿಯನಾಯ್ದು ತಂದೊಪ್ಪಿಸಲೊಡಮರಸನಾಸಿದ್ಧರಂ ಬರಿಸಿ ತೋಱುವುದುಮವರೊಳ್ ಯೋಗಸಿದ್ಧನಿದು ಮಹಾಬಲವಂತನಪ್ಪ ಸಿಂಹದಸ್ಥಿಗಳೆಂದು ಪೇೞ್ವುದುಮರಸಂ ತಂತ್ರಸಿದ್ಧನ ಮೊಗಮಂ ನೋಡಿ ನೀನಿದಂ ಸಿಂಹದಾಕೃತಿಯಂ ಮಾಡೆಂಬುದುಮಾತನಂತೆಗೆಯ್ವೆನೆಂದವಂ ಕೊಂಡು ಪೋಗಿ ಕಂಡವರ್ ಭಯಂಗೊಂಡೋಡುವಂತೆ ಭಯಂಕರಾಕಾರಮಪ್ಪ ಸಿಂಹಮಂ ಮಾಡಿ ನೋಡಲ್ ಬನ್ನಿಮೆಂದರಸನಂ ಕರೆವುದುಂ; ಸಮಸ್ತಪರಿವಾರಂಬೆರಸು ಪೋಗಿ ನೀಡುಂ ಭಾವಿಸಿ ನೋಡಿ ಚೋದ್ಯಂಬಟ್ಟು ಬೞಿಕ್ಕೆ ಮಂತ್ರಸಿದ್ಧನಂ ಕರೆದು ನೀನಿದಂ ಸಜೀವಂಗೆಯ್ಯೆಂಬುದುಮಾನೃಪನ ಮಂತ್ರಿಗಳೊಳೊರ್ವಂ ಬಿನ್ನಪಮೆಂದಿಂತೆಂದಂ:—ದೇವಾ! ನೀವೀಸಿದ್ಧರ ವಿದ್ಯೆಯ ಮೈಮೆಯಂ ನೋಡಲಿನಿತಂ ಮಾಡಿದಿರ್, ಇವರಿರ್ಬರ ವಿದ್ಯೆಯೆಂತು ಸತ್ಯವಾದುದಂತೆ ಮಂತ್ರಸಿದ್ಧನ ವಿದ್ಯಂ ಸತ್ಯಮಪ್ಪುದಱೊಳ್ ಸಂದೆಯಮಿಲ್ಲದಱಿಂ[1]ದೀಸಿಂಹಮಂ ಪ್ರಾಣಮಂ ಪಡೆಯಿಸಿ ನೋೞ್ಪ[1] ವಿನೋದಮೆಂತುಂ ಬೇಡೆಂಬುದುಮರಸನೀಚೋದ್ಯಮಂ ನೋೞ್ಪಮುಸಿರದಿರಿಮೆನೆ; ಮತ್ತೊರ್ವ ಮಂತ್ರಿ

ಪಾ—1. ದಿದರ್ಕೆ ಪ್ರಾಣಮನುಂಟುಮಾಡುವ, ಗ ||

ಯಿಂತೆಂದಂ:– ದೇವಾ! ನೀವಿಂತು ಅಸದಾಗ್ರಹಿಗಳಾಗಿ ಬೆಸಸಿದಿರ್, ಪಿರಿಯಮಂತ್ರಿ ಪೇೞ್ದಿಂತೆ,

ಸಿಂಗಂ ಗಡ! ಮತ್ತದು [1]ತಂ[1] ।
ತ್ರಂಗಳೊಳಂ ದಿವ್ಯಮಪ್ಪ ಮಂತ್ರಂಗಳೊಳಂ ॥
ತಾಂ ಗಡ! ಸಂಭೂತಂ ಗಡಿ । [೫
ದೇಂ ಗಡ! ನಮ್ಮಳವೆ ಬಱಿಕೆ ನಿಲಲುಂ ಗೆಲಲುಂ ॥356

[2]ಅದಱಿನೆತ್ತುವುದು ಮಂತ್ರಮಲ್ಲ, ಇಂತಪ್ಪೆಡೆಗೊಂದು[2] ಕಥೆಯುಂಟೆನೆ–ಅರಸನದೆಂತೆನೆ – ಮಂತ್ರಿ ಪೇೞ್ಗುಂ: –

೮. ಸತ್ತ ಪುಲಿಯನೆತ್ತಿದ ಗಾರುಡಿಗನ ಕಥೆ.

ವ॥ ಮುನ್ನಮೊರ್ವ ನಿರ್ಬುದ್ಧಿ ಗಾರುಡಿಗಂ ಗಾರುಡಮಂ ಕಲ್ತು [3]ವಿದ್ಯಾಪ್ರತ್ಯಯಮಂ ನೋಡಲೆಂದು ಸರ್ಪದಷ್ಟನನಱಸುತ್ತುಂ[3] ಬರ್ಪಾತಂ ಅಡವಿಯೊಳೊಂದು ಪೊದಱೊಳ್ ಪುಲಿಯಂ ಪಾವು ಕೊಂಡು ಪ್ರಾಣವಿಯೋಗಮಾಗಲಿರ್ದುದಂ ಕಂಡು ಸರ್ಪದಷ್ಟನೆಂದಱಿದೀ ಪ್ರಾಣಿಯಂ ಸಾಯಲೀಯದೆನೆತ್ತಿದಪೆನೆಂದೊಡೊಡನೆಯವರ್ ಸತ್ತ ಪುಲಿಯನೆತ್ತುವುದಾವ ಬುದ್ಧಿ ಬೇಡೆಂಬುದುಂ ಮಾಣದಾತನೆತ್ತುವುದುಮಾ ಪುಲಿ ಮುಂದಿರ್ದ ಗಾರುಡಿಗನಂ ತಿಂದುದು. [೧೭

(೭ನೆಯ ಕಥೆಯ ಶೇಷ.)

ಅದಱಿಂದಿದರ್ಕೆ ಪ್ರಾಣಮಂ [4]ಪಡೆಯಲ್ವೇೞ್ಕುಮೆಂಬುದೊಂದಾಗ್ರಹಮಂ ದೇವರ್ ಮಾಣ್ಬುದೆನೆ[4] ತುಂಗಭುಜನತಿಪ್ರಸಂಗದೊಳೇನುಮನುಸಿರದಿರಿಮೆಂದು ಮತ್ತಮಿಂತೆಂದಂ: –

ಪೊಂಗುವುದು ಗಡತಿಕೋಪದೆ ।
ಕೆಂಗೋಲ್ಗೊಳ್ವುದು ಗಡಿಂದ್ರಜಾಲದ ಸಿಂಗಂ ॥ [೨೨

ಪಾ–1. ಮಂ. ಕ ॥ 2. ಇದು ಕೂಡದು, ಇದಕ್ಕೊಂದು. ಗ ॥
3. ಪರೀಕ್ಷಿಸಲೆಂದು. ಗ ॥ 4. ಪಡೆಯಲಾಗದೆನೆ. ಗ ॥

ತಾಂ ಗಡ! [1]ಪರಿಗುಂ[1] ಗಡ! ಪಾ।
ಯ್ದುಂ ಗಡ! ತಿಂಗು ಗಡಮಾದೊಡೇಂ ನೋೞ್ಪಿವಿದಂ॥357

[2]ಎಂದೆಂತಾನುಂ ಮಂತ್ರಿಗಳ ಮಾತಂ ಕೈಕೊಳ್ಳದೆ[2] ಮಂತ್ರಸಿದ್ಧನಂ ಕರೆದು ಬೇಗಮಿದಱ ಪ್ರಾಣಮಂ ಪಡೆಯಿಮೆನಲಾತನಂತೆಗೆಯ್ವೆನೆಂದು ಮತ್ತಮಿಂತೆಂದಂ:— ದೇವಾ! ನೀವೀಸಿಂಹಮನಿಂದ್ರಜಾಲದ ಸಿಂಹಮೆಂದಪಹಾಸ್ಯಂಗೆಯ್ವಲ್ವೇಡೆಂತಕ್ಕುಮೆಂದಱಿಯಲ್ ಬಾರದಾಂ ಮಂತ್ರಿಸುವನ್ನಂ ತಂತ್ರಮುಂ ಬರಿಸಿ ಸನ್ನದ್ಧರಾಗಿರಿಮೆನಲರಸನಂತೆಗೆಯ್ವೆನೆಂದು ಮದಾಂಧಸಿಂಧುರಮನೇಱ ಚತುರಂಗಬಲಮನೊಂದುಮಾಡಿಕೊಂಡು ನಿಂದಂ. ಅನ್ನೆಗಮಾಸಿದ್ಧಂ ಸಿಂಗಕ್ಕೆ ಪ್ರಾಣಮಂ ಪಡೆವುದುಂ, ಮಹಾಪ್ರಳಯಕಾಲಾಂಭೋದನಿನದದಿಂ ಗಜಱ ಗರ್ಜಿಸಿ ಮಾಣದೆಣ್ದೆಸೆಯುಮಂ [3]ನೋಡಿ[3] ತುಂಗಭುಜನೇಱದುತ್ತುಂಗಮತ್ತಮಾತಂಗಮಂ ಕಂಡು ಕೆಂಗೋಲ್ಗೊಂಡು, [೧೨

ತುಂಗಭುಜಂಬೆರಸವನ ಮು।
ತಂಗಜಮುಮನಾಂತು ನಿಂದ ಚತುರಂಗಮುಮಂ॥
ಸಿಂಗಂ ಕೊಂದುದು ದುರ್ಮಾ।
ತ್ರಂಗಳನೆಸಗಿದೊಡೆ ಕಿಡದನಾವನುಮೊಳನೇ॥358

ಅದಱಿಂದೀಚಿರಂಜೀವಿ ಶತವೃದ್ಧನುಂ ಶಸ್ತ್ರಹತನುಮೆಂದು ಬಗೆಯದೆ ಈತನನೆತ್ತಿಕೊಂಡುಯ್ದು ನಮ್ಮೊಳಗಿಟ್ಟುಕೊಂಡೊಡಿಂತಪ್ಪನರ್ಥಮಕ್ಕುಮೆಂದು ನುಡಿದ ಮಂತ್ರಿಮುಖ್ಯನ ಮಾತಂ ಕೇಳ್ದರಿಮರ್ದನನಿಂತೆಂದಂ:—ನಿನ್ನ ಪೇೞ್ದ [4]ಮಾತಂ ಪೊಲ್ಲದೆನಲ್ ಬಾರದು; ಅರಸುಗೆಯ್ವಾತಂ[4] [೨೧

ಪಾ—1. ಸಿಂಗಂ. ಗ॥ 2. ಎಂದು ಮಂತ್ರಿಗಳಂ ಲೆಕ್ಕಿಸದೆ. ಗ॥
3. ನೋಡದೆ. ಗ॥ 4. ದು ನಿಜಮಾದೊಡಂ. ಗ॥

ಶರಣೆನೆ ಕಾವುದು ಬೇಡಿದೊ ।
ಡಿರದೀವುದು ತೊಡರೆ ಸೆಡೆಯದಿಱ[1]ವುದು ಪುಸಿ[1]ಯೊಳ್ ॥
ಪೊ[1]ರೆಯದೆ ನಡೆವುದದಲ್ಲದೊ ।
ಡರಸು [2]ಕಡಲ್ವೆರಸು ಪೊಡವಿಗರಸಾದಪನೇ[2] ॥359

ಅದಱಿಂದಿವಂ ನಮಗೆ ಶರಣಾಗತನೆಂದು ಪೋಗದೆ ನಿಂದನದಱಿಂದೆಂತುಂ ಕಾಯಲ್ವೇೞ್ಪುದಿನ್ನೀವುಸಿರದಿರಿಮೆಂದ ಕೌಶಿಕಾಧೀಶ್ವರನ ಮಾತೆಲ್ಲಮಂ ಕೇಳ್ದು ಚಿರಂಜೀವಿಯಿಂತೆಂದಂ:—

ಗುಣನಿಧಿ ದೇವ ಕೌಶಿಕಶಿಖಾಮಣಿ ಬುದ್ಧಿವಿಹೀನನಿನ್ನನೆಂ ।
ವ್ರಣಗಣವೇದನಾವಿಕಳನೆಂ ಶತವೃದ್ಧನೆನ್ನನುಯ್ದೊಡೇ ॥
ನಣಿಯರಮಿಷ್ಟಮಪ್ಪುದೆನೆ ನೀಂ ಕರುಣಂಬೆರಸಿತ್ತೊಡಿತ್ತೊಡಾ ।
ಕ್ಷಣದೊಳೆ ತೋಱುವೆಂ ಸಲೆಮದೀಯಮನೋಗತಮಪ್ಪ ಕಾರ್ಯಮಂ ॥

ಎಂದೊಡರಿಮರ್ದನನಿಂತೆಂದಂ:—

ನಿನಗಾವುದಿಷ್ಟಮದನಿ ।
ತ್ತೆನಮೋಘಂ ಬೇಡಿಕೊಳ್ವುದೆನಲೊಡಮಾಕಾ ॥
ಕನಿಕಾಯನಾಯಕಾಮಾ ।
ತ್ಯನಿಕರಮುಖ್ಯಂ ಹಸಾದಮೆಂದಿಂತೆಂದಂ ॥ 361

ದೇವಾ! ನಿನ್ನ [3]ಸ[3]ತ್ಯತ್ಯಾಗಪರಾಕ್ರಮಾದಿಗುಣವರ್ಣನಂಗೆಯ್ಯೆ ಮೇಘವರ್ಣನೆನಗಿನಿತವತೆಯಂ ಮಾಡಿದನೀಪರಾಭವಮನಗ್ನಿಪ್ರವೇಶಂಗೆಯ್ದು ನೀಗಿ ಪತ[4]ತ್ರಿಗೋತ್ರಾಧಿಪನಪ್ಪ[4] ಭವದೀಯವಂಶದೊಳ್ ಪುಟ್ಟಿ,

ಪವಮಾನಪ್ರಿಯನಂದನಂ ಫಣಿಪತಾಕಾನೀಕಮಂ ಚಕ್ರಿ ದಾ ।
ನವರಂ ಸಂಗರದಲ್ಲಿ ಕೊಂದ ತೆಱದಿಂದಾಭೀಳಕಾಕಾಳಿಯಂ ॥
ತವೆ ಕೊಂದೀಧರೆ ಮೆಚ್ಚೆ ಮೞ್ಗಿಸುವೆನುಗ್ರಾಟೋಪಮಂ ಮೇಘವ ।
ರ್ಣವಧೂಲೋಚನವಾರಿಧಾರೆಯೊಳಮುಸ್ಮತ್ಕೋಪದಾವಾಗ್ನಿಯಂ ॥362

ಪಾ—1. ಮಾ ತೊ. ಕ ॥ 2. ಕಡಂಬರಸನರಸನಂತಾಗಿರರೇ. ಖ ॥
3. ಸಿ. ಗ ॥ 4. ತ್ರೀಶನಪ್ಪ. ಗ ॥

ವ॥ ಎಂದು ನುಡಿದ ಚಿರಂಜೀವಿಯ ಮಾತಂ ರಕ್ತಾಕ್ಷಂ ಕೇಳ್ದು ಮುಕ್ಕೋಪಪ್ತನಾಗಿ ಮತ್ತಮಿಂತೆಂದಂ:— ಎಲೆ ವಾಯಸ! ನಿನ್ನ ಮಾಯಾಪಾಶದೊಳರಿಮರ್ದನಂ ತೊಡರ್ದನದುವೆ ಸಾಲ್ಗುಮೆಂದಿರದಾಗಮಾನುಗತಮಲ್ಲದುದಂ ನುಡಿವೆಯಪ್ಪೆಯದೆಂತೆನೆ:—

ವಾಕ್ಯಂ॥ "ಸ್ವಯೋನಿಂ ಮೂಷಿಕಾ ಪ್ರಾಪ್ತಾ ॥" [೫

ಎಂಬ ಕಥೆಯಂ [1]ಕೇಳ್ದ[2]ವುದಿಲ್ಲಕ್ಕುಮೆಂದಾರಕ್ತಾಕ್ಷನಿಂತೆಂದಂ:—[1]

೯. ಮುನಿಯುಂ, ಇಲಿಯುಂ.

ಭಾಸ್ವತ್ತೇಜಂ ಯಮನಿಯ।
ಮಸ್ವಾಧ್ಯಾಯಾದಿಕರ್ಮನಿಯತವ್ರತಸ॥
ರ್ವಸ್ವನತಿಪ್ರಖ್ಯಾತತ।
ಪಸ್ವಿ ಯಶಶ್ಶಾಲಿ ಯಜ್ಞನೆಂಬಂ ಪೆಸರಿಂ॥363 [೧೧

ಆತಪೋಧನನೊಂದುದಿವಸಂ ಮಂದಾಕಿನಿಯಂ ಮಿಾಯಲೆಂದು ಪೋಬಿಮುಟ್ಟು,

ಮದನಾರಾತಿಶಿರಶ್ಶಿಖಾಮಣಿಯನಂಭೋಜಾಸನಾಕೃಪ್ಪಸಂ।
ಪದೆಯಂ ಶ್ರೀಸಗರಾನ್ವಯೋದ್ಧರಣಕಾರ್ಯಾಚಾರ್ಯೆಯಂ ಗೋತ್ರಭಿ॥
ನ್ಮದಮಾತಂಗಮದಾಂಬುಸಂಗಮಕಷಾಯೀಭೂತೆಯಂ ಯಜ್ಞನೆ ।
ಯ್ದಿದನುತ್ತುಂಗತರಂಗೆಯಂ ಶಫರ[2]ಲೋ[2]ಲಾಪಾಂಗೆಯಂ ಗಂಗೆಯಂ॥

ವ॥ ಅಂತೆಯ್ದಿ ವಂದಮರಾಪಗೆಯಂ ಮಿಂದು ಸುರಾಸುರಚೂಡಾಮಣಿಮರೀಚಿಮಾಲಾಲಂಕೃತಚಾರುಚರಣಾರವಿಂದನುಮುದಯಾಚಲಚಕ್ರವಾಳಚಕ್ರವರ್ತಿಚೂಡಾಮಣಿಯುಂ, ತಮಃಪಟಲಪಾಟಲಾರಿಷ್ಟನುಂ, ಬಿಸಜನಿತಂಬಿನೀ[3]ಮನೋನಯನಾನಂದನನುಂ,[3] ಸಕಲಜಗದಟನಮಹಾಸೂತ್ರಧಾರನುಂ, ತ್ರೈಲೋಕ್ಯದೀಪಕನುಂ, ಪ್ರಿಯವಿಯೋಗವಿಧುರಚಕ್ರವಾಕಚಕ್ರಮನಃಪೀಡಾವಿಘಟನಚತುರನುಂ, ಸೀರಪಾಣಿಪರಿಧಾ

ಪಾ—1. ಕೇಳೆಂದಿಂತೆಂದಂ. ಗ ॥ 2. ಮಾ. ಗ ॥ 3. ವಲ್ಲಭನುಂ. ಖ ॥

ನಶ್ಯಾಮಾಯಮಾನಶಿಶಿರಶೀಕರಮಹಾನೀಲಮಣಿಹಾರ[1] ಯಮುನಾ[1] ವಿಲಾಸಿನೀಜನಕನುಂ, ನಿಜರಥತುರಗನಿಕರಖರಖುರಪುಟಹತವಿಭಿನ್ನ ಚಾಮೀಕರಮಹೀಧರಾಗ್ರಗ್ರಾವರಜಃಪಟಲಾಚ್ಛಾದಿತದಿಙ್ಮಂಡಲನುಂ, ಆಖಂಡಲದಿಗಂಗನಾಮಣಿಕುಂಡಲನುಂ, ಶತಮುಖಪಂಚಮುಖಾಷ್ಟಾಪದದಶರಥತನೂಭವಕುಳಾಗ್ರೇಸರನುಂ, ತ್ರಯೀಮಯನುಂ, ನಿತ್ಯೋದಯನುಮಪ್ಪ ಗಭಸ್ತಿಮಾಲಿಗರ್ಘ್ಯಮನೆತ್ತಿದ ಹಸ್ತಕಮಲದೊಳಂಬರದೊಳಾಡುವ ಪರ್ದಿನ ಬಾಯಿಂದಂ ಬಿರ್ದು ಬ*ರ್ದುಂಕಿದೊಂದು ಪೆಣ್ಣಿಲಿಯಂ ಕಂಡದನಾದರಿಸಿ ನೋಯಲೀಯದೆ ಗುಂಡಿಗೆಯೊಳಕ್ಕಿ ಬೞಿಕ್ಕೆ

ಸ್ನಾನಜಪಹೋಮನಿಯಮ।
ಧ್ಯಾನಾದಿಕ್ರಿಯೆಗಳೆಲ್ಲಮಂ ತೀರ್ಚಿ ನಿಜ॥ [೧೦
ಸ್ಥಾನಕ್ಕುಯ್ದಂ ಯೋಗನಿ।
ಧಾನಂ ಪಿರಿದುಂ ಪ್ರಯತ್ನದಿಂ ಮೂಷಿಕೆಯಂ॥365

ಅಂತುಯ್ದು ಮುನೀಶ್ವರನದರ್ಕೆ ಪಿರಿದುಂ ಕರುಣಿಸಿ ಕೂರ್ಮೆ ಕೈಗಣ್ಮೆ ಮಾಣದೆ,

(ಉಜ್ಜ್ವಲವೃತ್ತಂ)

ಮುನ್ಯಧೀಶ್ವರನೀಶ್ವರಕಲ್ಪಂ ಸತ್ಯವಚೋನಿಳಯಂ ಜಗ।
ನ್ಮಾನ್ಯನಾಗಳೆ ಮೂಷಿಕೆಯಂ ನೀಂ ಕನ್ಯಕೆಯಾಗೆನೆ ವಿಸ್ಫುರ॥
ತ್ಕನ್ಯಕಾಕೃತಿಯಂ ತಳೆದಿರ್ದಳ್ ತಾಂ ತ್ರಿದಿವಾಂಗನೆವೋಲವಳ್।
ನಾನ್ಯಥಾಮುನಿಭಾಷಿತಮೆಂಬೀವಾಕ್ಯಮದೇಂ ಪುಸಿಯಕ್ಕುಮೇ ॥366

ವ॥ ಅಂತು ದಿವ್ಯಕನ್ಯಕಾಕಾರಮಂ ತಾಳ್ದಿರ್ದ ಕನ್ಯಕೆಯಾದಿಲಿಯಂ ಕಂಡು ಪಿರಿದುಂ ಮೋಹದಿಂ ರಕ್ಷಿಸುತ್ತುಮಿರೆ ಕೆಲವಾನುಂ ದಿವಸಕ್ಕಾಕೆ ವಿವಾಹಯೋಗ್ಯೆ[2] ಯಾಗಿರ್ದುದಂ ಯೋಗೀಂದ್ರಂ[2] ಕಂಡಿನ್ನೇಗೆಯ್ವೆನೆಂದು ಚಿಂತಿಸಿ, [೨೨

ಪಾ—1. ಮನೋಜ್ಞನಯನ. ಗ॥ 2. ಯಾದುದಂ. ಗ॥

ಶ್ಲೋ॥ „ ಪಿತೃಗೇಹೇ ತು ಯಾ ಕನ್ಯಾ ರಜಃ [1]ಪಶ್ಯತ್ಯಸಂಸ್ಕೃತಾ[1] ।
ಅಪರಸ್ಯತು ಸಾ [2]ವೇಶ್ಯಾ[2] ಜಘನ್ಯಾ ವೃಷಲೀ [3]ಮತಾ[3] ॥ ” ೯೧
[ಟೀಕು—ತಂದೆಯು ಮನೆಯೊಳಿರ್ದ ಕನ್ಯಕೆ ಮದುವೆಯಾಗದ ಮುನ್ನವೆ ಮೈನೆ
ರೆದೊಡಾಕೆ ಸೂಳೆಯೋಪಾದಿಯಲ್ಲಿ ಒಕ್ಕಲಗಿತ್ತಿಯಿಂದಂ ಕಷ್ಟ.] [೪

[4]ಅದುಕಾರಣದಿಂ ಕನ್ಯಕೆ ಪುಷ್ಪವತಿಯಾಗದನ್ನೆಗಂ ಕುಡಲ್ವೇಳ್ಪುದೆಂದು[4],

ಅನುರೂಪಂಗೆ ಕುಲೀನಂ।
ಗೆ ನಿಖಿಲವಿದ್ಯಾವಿದಂಗೆ ತೇಜೋನಿಳಯಂ॥
ಗನವದ್ಯಾಚಾರಂಗೀ।
ವನಜಾಕ್ಷಿಯನೀವೆನೆಂದು ದಿವ್ಯಮುನೀಂದ್ರಂ॥ 367 [೧೦

[5]ಅಂತಾಕೆಯ ಮದುವೆಯಂ ಮಾಳ್ಪಿ ಕಜ್ಜಕ್ಕುಜ್ಜುಗಮನೆತ್ತಿಕೊಂಡು[5] ಮಿಾಕೆಗೆ ವರನಪ್ಪೊಡೆ ಲೋಕೈಕನೇತ್ರನುಂ ಸಕಲಜಗತ್ಪವಿತ್ರನುಂ ಶತಪತ್ರಮಿತ್ರನುಮಧಿಕಪ್ರತಾಪನುಮಪ್ಪಾದಿತ್ಯನಾಗಲ್ವೇಳ್ಕುಮೆಂದು ನಿಶ್ಚಯಂಗೆಯ್ದು ಶುಭದಿನಶುಭಮುಹೂರ್ತಮಂ [6]ಸಾಧಿಸಿ[6] ಕೊಂಡು, [೧೫

ಪರಿಣಯನಾರ್ಥಂ ಭೂಸುರ।
ಸುರಮುಕುಟನಿಘೃಷ್ಟಚರಣಕಮಲನನುದ್ಯ॥
ದ್ವರ[7]ದನನಾದಿತ್ಯನನಾ[7]।
ದರದಿಂದಂ ನೆನೆದು ಬರಿಸಿದಂ ಮುನಿಮುಖ್ಯಂ॥368

ಅಂತು ಬರಿಸೆ ಬಂದು [೨೦

(ಪೃಥ್ವೀವೃತ್ತಂ.)

ಕನತ್ಕನಕರಂಜಿತಂ ನಿಜಕರಂ ಜಗನ್ಮಂಡನಂ।
ವನೇಜಸಖನೇಕಚಕ್ರರಥನಸ್ತದೋಷೋದಯಂ॥ [೨೨

ಪಾ—1. ಪಶ್ಯತಿ ಚಕ್ಷುಷಾ. ಗ ॥ ಖ ॥ 2. ಕನ್ಯಾ. ಖ ॥ 3. ಸ್ಮೃತಾ. ಖ ॥
4. ಆದಜಿಂ. ಗ ॥ 5. ಬಟಿಕ ಮದುವೆಯುಜ್ಜುಗಂಗೆಯ್ದು. ಗ ॥
6. ನಿಶ್ಚಯಿಸಿ. ಗ ॥ 7. ದಾದಿತ್ಯನತಾನಾ. ಗ ॥

ಮನೋಹರತರಪ್ರಭಂ ಸುರವರಂ ತ್ರಿಲೋಕಸ್ತುತಂ ।
ಮುನೀಶ್ವರನ ಮುಂದೆ ನಿಂದನನಘಂ ದಿನಾಧೀಶ್ವರಂ ॥ 369

ವ॥ ಅಂತು ತನ್ನ ಮುಂದೆ ಸನ್ನಿಹಿತನಾಗಿ ನಿಂದರವಿಂದಬಾಂಧವನ ಚರಣಸರಸೀರುಹಂಗಳಂ ಪರಮಭಕ್ತಿಯಿಂದರ್ಚಿಸಿ ವಿನಯವಿನಮಿತೋತ್ತಮಾಂಗನಾಗಿ ಮುನಿಪುಂಗವನಿಂತೆಂದಂ:—

ವಿರಹಾಕ್ರಾಂತರಥಾಂಗಸಂಕುಲಮನಸ್ಸಂತಾಪವಿಚ್ಛೇದ ಭಾ।
ಸುರತೇಜೋಧಿಕ ದೇವರಾಜವಿನತಶ್ರೀಪಾದಪಂಕೇಜ ಪಂ॥ [ಕಿ
ಕರುಹಶ್ರೀರಮಣೀಮನೋರಮಣ ಮಾದ್ಯದ್ಧ್ವಾಂತಮಾತಂಗಕೇ।
ಸರಿ [1]ಮಾರ್ತಂಡನೆ ನೀಂ ಪರಿಗ್ರಹಿಪುದೆನ್ನೀಕನ್ನೆಯಂ[1] ಚೆನ್ನೆಯಂ॥370

[2]ಎಂದು ಮುನಿನಾಥಂ ಬಿನ್ನಪಂಗೆಯ್ವುದುಂ; ದಿನನಾಥನದು ಮೂಷಿಕೆಯಪ್ಪುದನಱಿದು ಕೇವಳಮೊಲ್ಲೆನೆಂದೊಡೆ ಮುನಿ ಮನಃಕ್ಷತಂಬಡುಗುಮೆಂದಿಂತೆಂದಂ:— ಆಂ ಪ್ರತಾಪವಂತನೆಂದೆನ್ನಂ ಕರೆದು ನೀವೀಕನ್ನೆಯಂ ಕುಡಲ್ ಬಗೆದಿರ್; ಎನ್ನ ರಶ್ಮಿಯ ಪ್ರತಾಪಮಂ ಜೀಮೂತಂಗಳ್ ಮುಸುಕಲೀಯದೆ ಮುಸುಱಿಕೊಂಡೆನಗಮಧಿಕಂಗಳಾಗಿರ್ಕುಮದಱಿಂದವರ್ಗೆ ಕುಡುವುದೆಂದು ಪೇೞ್ದು ಪೋಪುದುಂ; ಮುನಿರಾಜಂ ಮೇಘರಾಜನಂ ಬರಿಸಿ—ನೀವಪ್ಪೊಡೆ ಮಹಾಪ್ರತಾಪಿಗಳದಱಿಂ ನಿಮ್ಮೊಳೊರ್ವರೀಕನ್ನೆಯಂ ಪರಿಗ್ರಹಿಸಿಮೆಂಬುದುಂ; ಅಂಬುದಂಗಳ್-ನಿಮ್ಮಡಿ, ನೀವೆಮ್ಮಂ ಪ್ರತಾಪವಂತರೆಂದೆ ಬಗೆದಿರೆಮ್ಮನೊಂದು ಮುಹೂರ್ತಮಾತ್ರದಿಂ ಪವನಂ ಪ್ರಳಯಕ್ಕೆ ಪಾಱಿ ಬೀಸುವನದಱಿಂ ನಿಮ್ಮ ಸುತೆಗೆ ಮರುತನೆ

ಪಾ—1. ಯಾತಂ ಮುದದಿಂ ಪರಿಗ್ರಹಿಸು ನೀನೀಕನ್ನೆಯಂ. ಕ ॥
2. ಎನೆ ರವಿ ಮೂಷಿಕೆಯಪ್ಪುದನಱಿದು ನೀವೀಕನ್ನೆಯಂ ಜೀಮೂತಕ್ಕೆ ಕುಡುವದದೆನ್ನ ಪ್ರತಾಪಮಂ ಕುಂದಿಸುಗುಮನೆ; ಮೇಘರಾಜನಂ ಬರಿಸಿ ನೀವೀಕನ್ನೆಯಂ ಕೈಕೊಳ್ಳಿಮೆನಲೊಡಂ; ಅಂಬುದಂಗಳೆಮ್ಮಂ ವಾಯು ಬೀಟಿಸುವನದಱಿಂ ನಿಮ್ಮ ಸುತೆಗೆ ಮರುತನ ತಕ್ಕ ವರನೆಂದೆನೆ ಆವಿವ್ಯಮುನಿ ಮರುತನಂ ಬರಿಸಿ ನೀವೀಕನ್ನೆಯಂ ವಿವಾಹವಾಗವೇೞ್ಕುಮೆನೆ; ವಾಯು ದಿವ್ಯಜ್ಞಾನದಿಂ ಮೂಷಿಕೆಯಪ್ಪುದನಱಿದು ನೀವೆನ್ನಂ ಪ್ರತಾಪಪರನೆಂದು ಬಗೆದಿರ್ ಕುಲಪರ್ವತಂಗಳೆನಗಂ ಪಿರಿದುವೆನೆ; ಯೋಗಿ ಪಿರಿದಾಗ್ರಹಂಗೆಯ್ದು. ಗ ॥

ವರನಕ್ಕುಮಾತನಂ ಬರಿಸಿಮೆನಲೊಡನಾದಿವ್ಯಮುನಿ ಹುತವಹಸಖನಂ ಬರಿಸಿ—ನೀನೀಕನ್ನೆಯಂ ವಿವಾಹಮಾಗಲ್ವೇೞ್ಕುಮೆನೆ; ವಾಯುದೇವ ನೀತಪೋಧನನಪ್ಪೊಡೆ ಮಹಾನೈಷ್ಠಿಕಂ; ಮತ್ತಮಿಾತಂಗೀಕನ್ನೆಯೆಂತುಂ ಮಗಳಾಗಳೆಂದು ದಿವ್ಯಜ್ಞಾನದಿಂದಾಕೆ ಮೂಷಿಕೆಯಪ್ಪುದನಱಿದಿಂತೆಂದಂ:—ನೀವೆನ್ನಂ ಪ್ರತಾಪಸಂಪನ್ನನೆಂದು ಬಗೆದಿರಾನುಂ ಕುಲಗಿರಿಗಳನಪ್ಪೊಡೆಂತುಂ ತೆರಳ್ಚಲಾಱೆನದಱಿಂದೆನಗಂ ನಗಂಗಳ್ ಪಿರಿಯುವೆನೆ; ಪರಮಯೋಗೀಂದ್ರನತಿಸಂತೋಷಂಗೆಯ್ದು,[2]

ಬರವೇೞ್ದಿಟ್ಟದನಿಂದ್ರಕೀಲಹಿಮವತ್ಕುಕ್ಷಿಕೀಲವಿಂಧ್ಯಾವನೀ।
ಧರಕೈಲಾಸಕುಭೃತ್ತ್ರಿಕೂಟಕುಧರಶ್ರೀಶೈಲಪೂರ್ವಾಪರಾ॥
ವರಭೂಭೃನ್ಮಲಯಾದ್ರಿಕ್ರೌಂಚಶಿಖರಿಶ್ರೀಮನ್ಮಹಾಮೇರುಮಂ।
ದರಮೈನಾಕಮಹೀಧ್ರನೀಲ[1]ನಿಷಧ[1]ಕ್ಷ್ಮೋಣೀಧ್ರಸಂದೋಹಮಂ॥ 371

ವ॥ ಅಂತು ಬಱಿಯಟ್ಟಲೊಡಂ ಗಿರಿರಾಜರ್ ನೆರೆದು ಬಂದು—ನಿಮ್ಮಡಿ, ಬೆಸನಾವುದೆಂದು ಮುಂದೆ ನಿಲಲೊಡಂ; ನೋಡಿ—ನೀವಪ್ಪೊಡೆ ಪೆಂಪಿನೊಳಂ ಬಿಣ್ಪಿನೊಳಂ ಸಾಹಸದೊಳಂ ಮರುತಂಗೆ ಪಿರಿಯರದುಕಾರಣದಿಂ ನಿಮ್ಮೊಳಗೊರ್ವರೀಕುಮಾರಿಗೆ ಸೌಂದರ್ಯರೂಪಧಾರಿಗೆ ವರರಾಗಿಮೆಂಬುದುಂ; ನೀವೆಂದಂತೆ ಪವನನಿಂದಾವೆ ಬಲ್ಲಿದರಪ್ಪೆವಾದೊಡಮೆಮಗಂ ಉಂದುರಂಗಳ್ ಬಲ್ಲಿದುವೆಂದೊಡವರಂ ವಿಸರ್ಜಿಸಿ ಮುನಿಮುಖ್ಯಂ ಮೂಷಿಕಮುಖ್ಯನಂ ಬರಿಸಿ — ನೀನೀಕನ್ನೆಯಂ ಪರಿಗ್ರಹಿಸೆಂಬುದುಂ; ಮೂಷಿಕನಿಂತೆಂದಂ:—ನಿಮ್ಮಡಿ, ಬೆಸಸಿದೊಡೆಮ್ಮಿರ್ಪೆಡೆ ಬಿಲಂ, ನಿಮ್ಮ ಕೂಸನೆಂತುಯ್ದಿರಿಸುವೆನದಱಿಂ ನಿಶ್ಚಯಂ ನೀವೆನಗೆ ಕುಡುವ ಬಗೆಯುಳ್ಳೊಡೆಮ್ಮ ಜಾತಿಮಾಡಿ ಕುಡಿಮೆನೆ; ಮುನಿ ಮುನಿಸಂ ಮೊಗಕ್ಕೆ ತಂದು ನಿಮಗೆ ಕೂಸಂ ಕುಡುವೆನೆಂಬುದಿದೆನ್ನ ದೋಷಮಲ್ಲದೆ ನಿನ್ನ ದೋಷಮಲ್ಲೆನೆ; ಮೂಷಿಕಾಧೀಶಂ ರೋಷಾವೇಶದಿಂದಿಂತೆಂದಂ:—

ಪಾ—1. ವಿಶದ, ಗ॥

ಕೂಸಂ ಕೊಟ್ಟಪೆನೆಂಬೀ ।
ದೂಸಱಿಕೆ ನೀವಿಂತವಜ್ಞೆಗೆಯ್ಯುತ್ತೆನ್ನಂ ॥
[1]ಬೇಸರವುನೆ ನುಡಿದ[1]ಪಿರೀ । [೩
ದೋಸ[2]ಮೆ[2] ನೀಮಱಿದುಮಱಿಯಿರೆನ್ನುನ್ನತಿಯಂ ॥ 372

ಅದೆಂತೆಂದೊಡೆ— ಪೊಲ್ಗಡಲಂ ಸುರಾಸುರಸಮಿತಿ ಕಡೆವಂದಾಂ ಪುಟ್ಟಿದೆಂ, ಮೃಡನ ತನೂಜನಪ್ಪ ವಿಘ್ನೇಶ್ವರಂಗೆ ವಾಹನಮಂ ಮಾಡಿ ಕುಡೆ ಮಹಾಮಹಿಮೆಯಿಂದಹಿಭೂಷಣಂಗಗ್ರಗಣ್ಯನಾಗಿರ್ಪೆನಂತಪ್ಪೆ ನ್ನುತ್ಪತ್ತಿಸ್ಥಿತಿಯಂ ನಿಮ್ಮಡಿ ನೀವಱಿದುಮಱಿಯದಂತೆ ನಿರಾಕರಿಸುವು ದುಚಿತಮಲ್ಲೆಂಬುದುಂ; ಯಜ್ಞನೀಮೂಷಿಕಂ ಸಾಮಾನ್ಯನಲ್ಲಮಾದೊ ಡಮಿಾಕನ್ನೆಯನೆಂತು ಮೂಷಿಕೆಯಂ ಮಾೞ್ಪೆನೆಂಬುದುಮಾಮುನೀಶ್ವ ರನ ಶಿಷ್ಯಂ— ನಿಮ್ಮಡಿ, ನೀವಿಂತೇಕೆ [3]ಬೆಸಸಿದಿ[3]ರಿದಕೊರ್ಂದು ಕಥೆ ಯುಂಟು ಕೇಳಮೆಂದಿಂತೆಂದಂ:— [೧೨

೧೩. ದುರ್ವಾಸನುಂ, ನಾಯುಂ.

ವಾಸವನಿವಾಸದಿಂ ಕೈ ।
ಲಾಸದಿನತಿಸೇವ್ಯಮಪ್ಪ ಋಷ್ಯಾಶ್ರಮದೊಳ್ ॥
ಭಾಸುರತಪಃಪ್ರಭಾಪ್ರವಿ ।
ಭಾಸಂ ದುರ್ವಾಸನೆಂಬ ಯತಿವರನಿರ್ಪಂ ॥ 373 [೧೩

ವ॥ ಅಂತಾಯತಿನಾಯಕನೊಂದು ಸಾರಮೇಯಶಿಶುವಂ ಕಂಡು ಪ್ರೀತಿವಟ್ಟು ಸಡಪುತ್ತ್ರಿರ್ಪುದುಮದುಗಂಡುನೆರೆದುಕೊಂಡು ತುಡುಗು ಣಿಯಾಗಿ ಭಾಂಡಸಂಕರಂಗೆಯ್ಯುತ್ತಿರ್ಪುದುಮಾಋಷಿಸ್ತ್ರೀಯರ್ ಪು ಯ್ಯಲಿಡೆ ದುರ್ವಾಸನಾಶ್ವಾನನಂ ಪರಿಹರಿಸಲಾಱದೆ ತರುಚರನಂ ಮಾ ೞ್ಪುದುಮದು ಮಟ್ಟಮಿರಲಾಱದಾಶ್ರಮಂಗಳನತಿಕ್ರಮಿಸಿ ಪೊಕ್ಕು,

ಟಿ— ೧೯. ತುಡುಗುಣಿ = ಕದ್ದು ತಿನ್ನುವ ಸ್ವಭಾವವುಳ್ಳದಾಗಿ
೨೨. ಮಟ್ಟಂ = ಸುಮ್ಮನೆ.

ಪಾ—1. ಬೇಸರಮನೆಮಾಡಿ. ಗ ॥ 2. ದೆ. ಗ ॥ 3. ಶ್ರಮವನಶ್ರಮಿಸಿಂ. ಗ ॥

ಸಾರಕಮಂಡಲೋದಕಮನೊಕ್ಕು ಸುರಾರ್ಚನೆಗೆಂದು ತಂದ ಮಂ|
ದಾರದ ಪೂಗಳಂ ಕೆದಱಿ ಕರ್ಪಟಮಂ ಪಱಿದಿಕ್ಕಿ ಸೀಳ್ದು ವಿ||
ಸ್ತಾರಮೃಗಾಜಿನಾಸ್ತರಣಮಂ ಕೊಡೆಯಂ ಮುಱಿದಿಕ್ಕಿ ಸೂಸಿ ನೀ|
ವಾರದ ರಾಶಿಯಂ ಬಿಡದೆ ಕಾಡಿದುದಾಕಪಿ ತಾಪಸರ್ಕಳಂ|| 374

ವ|| ಅಂತಾಕೋಡಗಂ ಱಿೋಡಾಡಿ ಕಾಡುತಿರ್ಪುದುಮದಂ ಸಾಧುಮೃಗಮಂ ಮಾಱ್ಪೆನೆಂದಾತಾಪಸಂ ಹರಿಣನಂ ಮಾಱ್ಪುದುಮದಾಹಾರಾರ್ಥಮಟವಿಗೆ ಪೋಪುದುಂ; ಕ್ರೂರಮೃಗಂಗಳದಂ ಕಂಡು ಬೆಂಕೊಂಡೊಡೆ ಭಯಂಗೊಂಡು ಬರ್ಪುದುಂ; ದುರ್ವಾಸಂ ದೂರದೊಳ್ ಕಂಡು ಕರುಣಾರಸಾರ್ದ್ರಹೃದಯನಾಗಿ ಬೇಗಮಿದಿರಂ ಪೋಗಿ ಕೈಕೊಂಡೀಪ್ರಾಣಿಗೆಂತು ಬೇಱೆ ನಿರ್ವಾಹಕಮೆಂದು ಚಿಂತಿಸಿ ಶ್ವಾಪದಂಗಳೊಳಗೆ ಬಲವಂತನಪ್ಪ ಪುಲಿಯಾಗೆಂಬುದುಮದು ಮಹಾಪ್ರಚಂಡನಪ್ಪ ಪುಂಡರೀಕನಾಗಿ ಕರಿಕಳಭಂಗಳಂ ಪೆಳಱಿ ಪಾಯ್ವುದುಂ; ತ್ರಿಗಂಡಗಳಿತನಪ್ಪುದೊಂದು ಶುಂಡಾಲಯೂಥಾಧಿನಾಥಂ ಕಂಡು ಕಡುಮುಳಿದು ತಗುಳ್ವುದುಂ; ಭೀತನಾಗಿ ನಿಲ್ಲದೋಡಿ ದ್ವೀಪಿ ತಾಪಸನಸಮೀಪಕ್ಕೆ ಪರಿತರ್ಪುದುಮದಱ ಬೆನ್ನಂ ಬಿಡದಡಸುತ್ತುಂ ಬರ್ಪ ವನಗಜಮಂ ಮುನಿನಾಥಂ ಕಂಡು ಕರಿಗಳ್ಗಮರಿದಪ್ಪ ಕೇಸರಿಯಾಗೆನಲೊಡಂ; [೧೨

ದಾರುಣವಕ್ತ್ರನುಗ್ರನಖರಂ ವಿಕರಾಳಮಹೋಗ್ರದಂಷ್ಟ್ರನಾ|
ಪೂರಿತಲೋಹಿತಪ್ರಕಟಭೀಕರನೇತ್ರನುದಗ್ರಮೂರ್ತಿಗಂ||
ಭೀರನಿನಾದನುನ್ನಮಿತಚಂಚಲವಾಲಧಿ ತನ್ನೊಳೊಪ್ಪೆ ಕಂ|
ಠೀರವನಾಯ್ತು ತೊಟ್ಟನೆ ಚಮೂರುಚರಂ ಮುನಿಮುಖ್ಯನಾಜ್ಞೆಯಿಂ||

ವ|| ಅಂತಾವ್ಯಾಘ್ರಂ ಸಿಂಹನಾಗಿ ಗಜವ್ರಜಂ ಮೊದಲಾದ ಮೃಗವ್ರಜಂಗಳೆಲ್ಲಮನಾಟಂದು ಕೊಂದು ಮಾಣದೆ ಪುಷ್ಪಫಲಪತ್ರಶಾಖಾ

ಟಿ—೫. ಱಿೋಡಾಡಿ = ಅನಾದರಮಾಡಿ. ೨೩. ಆಟಂದು = ಪೀಡಿಸಿ.

ನಿಮಿತ್ತಂ ವನಮಂ ತೊಲಿಲ್ವ ಮುನಿಕುಮಾರರಂ ಕೊಲ್ವುದುಮದಂ ಕಂಡು ದುರ್ವಾಸಂ ಮುಳಿದು,

ಶ್ಲೋ|| “ಶ್ವಾ ವಾನರೋ ಮೃಗಶ್ಚೈವ ವ್ಯಾಘ್ರಃ ಸಿಂಹೋ ಮಯಾ ಕೃತಃ |
ಕೃತಘ್ನೋಽಪಿ ದುರಾಚಾರೀ ಪುನ[1]ಶ್ಶ್ವೈ[1]ವ ಭವಿಷ್ಯತಿ ||” ೧೯೨

ಎಂದಿಂತಾತಪಸ್ವಿ ಸಿಂಹಮಂ ಮರಳಿ ಶ್ವಾನನಪ್ಪಂತು ಮಾಡಿದಂ.

(೯ನೆಯ ಕಥೆಯ ಶೇಷ.)

ನಿಮ್ಮಡಿ, ನೀವಿದುಕಾರಣದಿಂ ಮೂಷಿಕೆಯಂ ಕಾರುಣ್ಯದಿಂ ಕನ್ನೆಯಪ್ಪಂತು ಮಾಡಿದಿರಿದಱ ಪೂರ್ವಜನ್ಮಸಂಸ್ಕಾರಮಿನ್ನುಂ ಪಱಿವಟ್ಟುದಿಲ್ಲದಱಿಂದೀಕೆಯಂ ಮೂಷಿಕೆಯಂ ಮಾಡಿ ಕುಡಿಮೆನೆ; ತಪಸ್ವಿ, “ತಥಾಸ್ತು” ಎಂದು,

ಶ್ಲೋ|| “ಸೂರ್ಯಂ ಭರ್ತಾರ[2]ಮುತ್ಸೃಜ್ಯ[2] ಪರ್ಜನ್ಯಂ ಮಾರುತಂ ಗಿರಿಂ |
ಸ್ವಯೋನಿಂ ಮೂಷಿಕಾ [3]ಪ್ರಾಪ್ತಾ ಸ್ವಾಂ ಯೋನಿಂ ನ ಪರಿತ್ಯಜೇತ್[3] ||” ೧೯೩

ಅಂತಾಕನ್ನೆ ಮುನ್ನಿನಂತೆ ಮೂಷಿಕೆಯಾದಳ್.

ಅದಱಿಂ, ನಿನ್ನ ಸಿತಗತನದಿಂ ಶತವಾರಂ ಹುತವಹನಂ ಪ್ರವೇಶಂಗೆಯ್ದೊಡಂ ಸಿತಗನೆಯಾಗಿ ಪುಟ್ಟುವೆಯೆನೆ; ಆಮಾತಿಂಗೆ ಚಿರಂಜೀವಿಯಿಂತೆಂದಂ:—ಸಿತಗನುಂ ಮತಿವಿಕಳನುಮಾಗಿ ಸತ್ತೊಡಂತುಟೆಯಕ್ಕುಂ, ಸತ್ಯಮುಂ ಬುದ್ಧಿಯುಂ ನಿಶ್ಚಯಾತ್ಮಕನುಮಾಗಿ,

ಮತಿವಿಕಳತೆಯಿಲ್ಲದೆಯುಂ |
ಹುತವಹಯುತಮಾಗೆ ಬಗೆದ ಗತಿಯುಂ ಪಡೆಗುಂ ||

ಟ—೧೯೨. ನಾನೀನಾಯಂ ಕಪಿ, ಹರಿಣಂ, ವ್ಯಾಘ್ರಂ, ಸಿಂಹಮಾಗೆ ಮಾಡಿದೆಂ; ಕೃತಘ್ನನುಂ ದುರಾಚಾರಿಯುಮಪ್ಪಿದು ಮರಳಿ ನಾಯೆ ಅಕ್ಕುಂ. ೧೯೩. ಸೂರ್ಯನನ್ನೂ ಮೇಘವನ್ನೂ, ಮಾರುತನನ್ನೂ, ಗಿರಿಗಳನ್ನೂ ವರಿಸದೆ. ಮೂಷಿಕೆಯು ತನ್ನ ಹುಟ್ಟನ್ನೆ ಹೊಂದಿದಳು ಹುಟ್ಟನ್ನು ಬಿಡಲಾಗದು. ೧೫. ಸಿತಗ=ನೀಚ.

ಪಾ—1. ಶ್ವಾನೋ. ಖ || 2. ಮುದ್ದಿಶ್ಯ ಗ || 3. ಸ್ವಯೋನಿಸ್ತು ದುರತಿಕ್ರಮಾ. ಖ ||

ಸತತಮದು "ಯಾ ಮತಿಸ್ಸಾ।
ಗತಿ" ಎಂಬ ಪುರಾಣವಾಕ್ಯಮೇಂ ತಪ್ಪುಗುಮೇ ‖376

ಎನೆ; ಜಿಂಹಾಕ್ಷನಿಂತೆಂದಂ:—

ನಿನಗಿನಿತು ಬದ್ಧವೈರಂ।
ಮನದೊಳ್ ಕಾಗೆಗಳ ದೆಸೆಯಿಸುಳ್ದೊಡೆ ಬಲಿಭು ‖
ಗ್ವಿನುತಮತಿ ನೀನುಮಿನ್ನೆ।
ಮ್ಮ ನಡುವೆ ಮದ್ಗೋತ್ರಮಾಗಿ ಸುಖಮಿರಲಾಗಾ ‖ 377

ಎಂಬುದುಂ; ಜಿಂಹಾಕ್ಷಂ ಚಿರಂಜೀವಿಯ ಕಾಯಕ್ಕೆ ಜೀವಂ ಬೊಯ್ದಂತೆಯುಂ ತನ್ನ ಮನಕ್ಕೆ ಬರೆಯುಂ ನುಡಿದುದರ್ಕೆ ಅರಿಮರ್ದನಂ ಸಂತೋಷಂಬಟ್ಟು ಚಿರಂಜೀವಿಯುಂ ನೋಯಲೀಯದುಪಾಯದಿಂ ತನ್ನಿಮೆಂದುಳೂಕನಿಕರಕ್ಕೆ ಮಾರಿಯನಾಮಂತ್ರಿಸಿ ಕೊಂಡುಯ್ವಂತೆ ವಾಯಸಮಂತ್ರಿಯಂ ನಿಜನಿವಾಸಕ್ಕೆ ಕೊಂಡುಯ್ದು—ನೀಂ, ಮನೋಹರಮಪ್ಪೆಡೆಯೊಳಿರಿಮೆನೆ; ಚಿರಂಜೀವಿ ಮಹಾಪ್ರಸಾದಮೆಂದಾತನ ರಾಜಧಾನಿಯಪ್ಪಂಜನಗಿರಿಯ ತಪ್ಪಲ ರಾಜಜಂಬೂವಟವಿಟಪಿಪ್ರದೇಶಂಗಳೊಳ್

ಸಮದಪರಪುಷ್ಟಲೋಚನ।
ಸಮಪ್ರಭಾರುಣಿತರಾಜಜಂಬೂಫಲಮಂ ‖
ಕ್ರಮದಿಂ ಸೇವಿಸುತುಂ ಕಾ।
ಕಮಂತ್ರಿ ಕೌಶಿಕವಿನಾಶಮಂ ಚಿಂತಿ[1]ಸುತುಂ[1] ‖378

ಅಂತು ಸುಖಮಿರ್ದು ಕೆಲವಾನುಂ ದಿವಸದೊಳಾಬಲಿಪುಷ್ಟಂ [2]ಸಂಪುಷ್ಟನಾಗಿ[2] ಬಟಿಕ್ಕೆ ಕೌಶಿಕಾಧೀಶನಿವಾಸಸ್ಥಾನಮುಮನುಳೂಕನಿಕರಸಂಕೇತಸ್ಥಾನಮುಮನಾರೈದು ತನ್ನೊಳ್ ತಾನೆ ಸಂತೋಷಂಬಟ್ಟಿಂತೆಂದಂ:—

ಪಾ—1. ಸಿದಂ. ಗ ‖ 2. ಬಲಿಷ್ಠನಾಗೆ. ಗ ‖

ಶ್ಲೋ || "ಆದಾನಸ್ಯ ಪ್ರದಾನಸ್ಯ ಕರ್ತವ್ಯಸ್ಯ ಚ ಕರ್ಮಣಃ |
ಕ್ಷಿಪ್ರಮಕ್ರಿಯಮಾಣಸ್ಯ ಕಾಲಃ ಪಿಬತಿ [1]ತತ್ಫಲಂ[1] ||" ೧೯೩

[ಟೀಕು—ಕೊಂಬ ಕಾರ್ಯವನೂ, ಕುಡುವ ಕಾರ್ಯವನೂ, ಮಾಡುವ ಕಾರ್ಯವನೂ ಇವೆಲ್ಲವನೂ, ಆಹೊತ್ತೇ ಮಾಡದಿರ್ದೊಡೆ ಕಾಲವಾಫಲವಂ ಕಿಡಿಸುವುದು.]

ಎಂಬ ನೀತಿಯುಂಟದಱಿನೆನಗೆ ಕಾಲವಿಳಂಬನಂಗೆಯ್ವುದು ನಯಮಲ್ಲೆಂದಾದಿತ್ಯೋದಯಮೆ ನಿಜಸ್ವಾಮಿಕಾರ್ಯೋದಯಮಾಗೆ ಆದಿತ್ಯನಪತ್ಯನಲ್ಲಿಂ ಪೊಱಮಟ್ಟು ಹಮ್ಮದಂಬೋದವರ ಪ್ರಾಣಂ ಬರ್ಪಂತೆಯುಂ, ಆರ್ತಂಗಾಪ್ತಂ ಬರ್ಪಂತೆಯುಂ, ವಾಯುವೇಗದಿಂ ಬರ್ಪ ಚಿರಂಜೀವಿಯ ಬರವಂ ಮೇಘವರ್ಣಂ ಕರ್ಣಪರಂಪರೆಯಿನಱಿದಿದಿರಂ ಪೋಪುದುಮೆಯ್ದಿವಂದ ಚಿರಂಜೀವಿಯಂ ಪರಮಾನಂದದಿಂ ಗಾಢಾಲಿಂಗನಂಗೆಯ್ವುದುಂ; ಮಹಾಪ್ರಸಾದಮೆಂದಾತಂ ಪೊಡೆಮಟ್ಟು ಬಿಟ್ಟಿಕ್ಕಿಂತೆಂದಂ:—ದೇವಾ! ಶತ್ರುವಂ ನಿಶ್ಶೇಷಂಮಾಳ್ಪುಪಾಯಮಂ ಕರಮೊಳ್ಳಿತ್ತಾಗಿಯಱಿದು ಬಂದೆಂ, ಪೆಱತಾಳೋಚನಕ್ಕೆಡೆಯಿಲ್ಲ, ತಡೆಯದೀಗಳೆ ಸಮಸ್ತವಾಯಸನಿಕಾಯಮುಮಂ ಬರಿಸಿಮೆನೆ; ಮೇಘವರ್ಣನಿಂತೆಂದಂ:— [೧೫

ಸಪ್ತಾಂಗಸಹಿತ[2]ನ[2]ಹಿತಂ |
ಗುಪ್ತಚರಂ ಶೂರನವನೊಳಱಿಯದೆ ವಿಜಯ ||
ಪ್ರಾಪ್ತಿ ನಮಗಪ್ಪುಪಾಯಮ |
ನಾಪ್ತೋತ್ತಮ ಪೇೞಿಮೆಂದೊಡೆಂದಂ ಸಚಿವಂ ||379

ರಿಪುವಂ ಗೆಲ್ವುದುಪಾಯಪೂರ್ವನಯದಿಂ ವಿಶ್ವಾಸದಿಂ ಸತ್ಸುಹೃ |
ದ್ವ್ಯಪಚಾಪಕ್ರಿಯೆಯಿಂ ರಹಸ್ಯವಿಷಶಸ್ತ್ರಾಗ್ನಿಪ್ರಯೋಗಂಗಳಿಂ|| [೨೧
ಕಪಟೋದ್ಯೋಗದಿನಾವಗಂ ಬಹುಮಹಾದೋಷಾವಹಂ ತಂತ್ರಬಂ|
ಧುಪರಿಧ್ವಂಸನಮಂತುಮಲ್ಲಿ ವಿಜಯಂ ಸಂದೇಹಮಿಂದ್ರಾದಿಗಂ || 380

ಟಿ—೭. ಹಮ್ಮದಂ=ಮೂರ್ಛೆ.

ಪಾ—1. ತದ್ರಸಂ. ಖ || 2. ಮ. ಗ || ಖ || ಕ ||

ಅದುಕಾರಣದಿಂ ತಾಂ ಕಾ ।
ದದೆ ರಿಪುವಂ ಗೆಲ್ವುದಖಿಳನಯಕೋವಿದನ ॥
ಭ್ಯುದಯಾರ್ಥಿಯಪ್ಪ ಪಾರ್ಥಿವ ।
ನುದಗ್ರಬಲನಿಕರಪೂರ್ಣನಾದೊಡಮೆಂದುಂ ॥381

ಅದೆಂತೆನೆ:— [೫

ಬಲಿಯಂ ವಾಮನನಿಂದ್ರ[1]ಂ ।
ಬಲನಂ[1] ಚಾಣಕ್ಯನಧಿಕನಂದನಮುಹಿಭೃ ॥
ತ್ಕುಲಮಂ ಗೆಲ್ದಂತರಿನೃಪ ।
ಬಲಮನುಪಾಯದೊಳೆ ಗೆಲ್ವುದುತ್ತಮಪಕ್ಷಂ ॥382

ಅದಱಿಂ ರಿಪುಗಪಾಯಮಂ ಮಾಡುವುಪಾಯಮೆನಿತುವೊಳವವಂ ತಿರ್ಕೆ, ನಮಗರಿಯಾಗಿರ್ದರಿಮರ್ದನನಂ ತತ್ಪರಿವಾರಮನೊಂದೆ ಕೊಳ್ಳಿಯೊಳಂದೆ ಸುಟ್ಟಪೆಂ, ಸುಮ್ಮನಿರದಲ್ಲಿಗೆ ತಕ್ಕ ಸಾಧನೋಪಾಯಂಗಳಂ ಬೇಗಂ ತರಿಸಿಮೆನೆ; ಮೇಘವರ್ಣನಂತೆಗೆಯ್ವೆನೆಂದು ಪಡೆವಳರಂ ಕರೆದು ಪೇೞಿಲೊಡಮವಂದಿರ್ ಪೋಗಿ ಕೌಶಿಕಾಧೀಶ್ವರನ ಪುರಮನುರಿಪಲ್ ತಕ್ಕುವೆಲ್ಲಮಂ ಕೊಂಡು ತಡೆಯದಂಜನಗಿರಿಗೆ ನಡೆಯಿಮೆಂದು ಕಾಕನಿಕರಕ್ಕೆಲ್ಲಂ ಸಾಱುವುದುಂ; ೧೬

ಸಕಳಾಶಾಮುಖಚಕ್ರಮಂ ಮುಸುಕಿ ಚೇತೋವೇಗದಿಂ ರೌದ್ರಕೌ ।
ಶಿಕಸೇನಾಜಯಕಾಂಕ್ಷೆಯಿಂ ರುಚಿರಚಂಚೂಪಾತ್ತಚಂಚತ್ಕಳಂ ॥
ಚಕರಾಳೋಸ್ಮುಖಶುಷ್ಕಪತ್ರಪಟವೀರುದ್ಭಾಸಕಾಷ್ಠಾಸತಂ ।
ತ್ರಕಜಾಲಂ ಬಲಿಭುಗ್ಬಲಂ ನಡೆದುದಂಭೋದಾಧ್ವದೊಳ್ ರಾಗದಿಂ॥ †

ವ॥ ಅಂತಾವಾಯಸಬಲಂ ಮಾಮಸಕಂ ಮಸಗಿ ಬಂದು ಕಾಳನೀಳಜಲಧರಂಗಳ್ ಕುಳಗಿರಿಯಂ ಮುತ್ತುವಂತರಿಮರ್ದನನ ಪುರವಾಗಿರ್ದಂಜನೆಗಿರಿಯಂ ಸುತ್ತಿ ಮುತ್ತಿ ತಂತಮ್ಮ ತಂದ ಪುಲ್ಲುಂ ಪುಳ್ಳಿಯುಂ

ಪಾ—1. ನ ಬಲವಂ. ಗ ॥
† ಇಲ್ಲಿವರೆಗೆ ಗ ॥ ಪ್ರತಿಯಲ್ಲಿರುವದು.

ಮೊದಲಾದ ಕಸಂಗಳೆಲ್ಲಮಂ ಚಿರಂಜೀವಿ ತೋಱಿದ ಗಿರಿಗುಹಾದ್ವಾರಂಗಳೊಳಂ ತರುಕೋಟರಕುಟೀರಂಗಳೊಳಮಿಡಿದಿಡಿದು ತೀವಿ ಬಱಿಕ್ಕೆ ಕೊಳ್ಳಿಗಳನಲ್ಲಿಗಲ್ಲಿಗೆ ತಗುಳ್ಚುವುದುಂ; ಶತಪತ್ರಮಿತ್ರಪುತ್ರಪತತ್ರಿಗೋತ್ರಪ್ರಧಾನಂಗೆ ಹುತವಹಸಖಂ ಸಹಾಯನಾಗಿ ಸುಱಿಸುಱಿದು ತಗುಳೆ ಬೀಸಲೊಡಂ, [೫|

ಸಂದ ಪುರತ್ರಯಂ ವಿಷಮಲೋಚನಲೋಚನವಹ್ನಿಯಿಂ ಮರು|
ನ್ನಂದನನಿಂ ದಶಾಸ್ಯನಗರಂ ಕಪಿಕೇತನನಿಂದೆ ಸಂದ ಸಂ||
ಕ್ರಂದನನಂದನಂ ನಿಮಿಷಮಾತ್ರದಿನೊರ್ಮೆಯೆ ಬೆಂದ ಮಾೞ್ಕೆಯಿಂ
ಬೆಂದುದುಳೂಕರಾಜನಿಳಯಂ ಬಲಿಭುಕ್ಪತಿ ಮೇಘವರ್ಣನಿಂ ||384

ವ|| ಅಂತು ಬೇವುದುಮುಳೂಕಬಲಂಬೆರಸು ಅರಿಮರ್ದನಂ ಮೊದಲಾಗಿ ಪೇೞಿತೆ ಪೆಸರಿಲ್ಲದಂತಾಗಿ ಪೋಗೆ; ವಾಯಸಂಗಳತಿರಾಗದಿಂ ಭೋರೆಂದಾರುತ್ತುಂ ಬರೆ, [೬

ಬಳವದ್ವೈರಿಕ್ಷಮಾಪಾಲರನಧಿಕಭುಜಾಗರ್ವದಿಂ ಗೆಲ್ದ ಲಕ್ಷ್ಮೀ|
ನಿಳಯಂ ಗಂಗಾತರಂಗೋಪಮಚಮರರುಹಶ್ರೇಣಿಯುಂ ಬೀಸೆ ಚಿ
ತ್ರೋರು|| ಜ್ಜ್ವಳಕೇತುವ್ರಾತಮುಂ ದುಂದುಭಿರವಬಧಿರೀಭೂತದಿಜ್ಮಂ
ಡಲಂ ಮಂ| ಗಳಗೀತಂ ಪೊಣ್ಮೆ ಪೊಕ್ಕಂ ನಿಜಶಿಬಿರಮನುತ್ಸಾಹದಿಂ
ಮೇಘವರ್ಣಂ|| 385

ವ|| ಅಂತು ಪೊಕ್ಕೊಡ್ಡೋಲಗಂಗೊಟ್ಟು ಕುಳ್ಳಿರ್ದು ಚಿರಂಜೀವಿಯ ಮೊಗಮನಾದರದಿಂ ನೋಡಿ, [೭

ಹಿತನೀತಂ ಮತಿವಂತನೀತನಧಿಕಂ ಕೂರ್ಪುಳ್ಳನೀತಂ ಗುಣಾ|
ನ್ವಿತನಿಂತೀತನೆನಿಪ್ಪನಂ ಪೊರೆವುದುರ್ವೀಪಾಲಕಂ ಕೂರ್ಮೆಯಿಂ||
ಹಿತನಲ್ಲಂ ಮತಿವಂತನಲ್ಲನಧಿಕಂ ಕೂರ್ಪುಳ್ಳನಲ್ಲಂ ಗುಣಾ|
ನ್ವಿತ[1]ನಂತಲ್ಲ[1]ನೆನಿಪ್ಪನಂ ಪೊರೆಯಮೇಡೇನಾದೊಡಂ ಭೂಭುಜಂ||386

ಪಾ—1. ನಿಂತೀತ. ಕ ||

ವ॥ ಎಂದುಂ ಮಾಣದೆ ಚಿರಂಜೀವಿಯನರ್ಧಾಸನದೊಳ್ ಕುಳ್ಳಿರಿಸಿ ಬಳಿಕ್ಕಿಂತೆಂದಂ:—

ಭವದೀಯೋತ್ತಮಮಂತ್ರದಿಂದುರುತರಾಸ್ಮತ್ಪ್ರಾಜ್ಯರಾಜ್ಯಾಸ್ಪದಂ।
ಧ್ರುವಮಾಯ್ತುದ್ಧತವೈರಿರಾಜನಿಚಯಂ ನಿರ್ಮೂಲನಮಾಯ್ತೆಂದು ಕಾ॥
ಕವಿಹಂಗಾಧಿಪನಿತ್ತನಾಪ್ತಸಚಿವಂಗಾನಂದದಿಂದರ್ಧರಾ। [೫೫
ಜ್ಯವನೊಲ್ದೀಯದರಾರೊ ಭೂಭುವನದೊಳ್ ಸ್ವಾರ್ಥಕ್ಕೆಸರ್ವಸ್ವಮಂ॥

ವ। ಅಂತು ಸಂತಸಂಬಡಿಸಿ ಚಿರಂಜೀವಿಗಿಂತೆಂದಂ:—

ಶ್ಲೋ॥ "ವರಮಗ್ನೌ ಪ್ರದೀಪ್ತೇ ತು ಪ್ರಾಣಾನಾಂ ಪರಿವರ್ಜನಂ।
ನ ಚಾರಿಜನಸಂಸರ್ಗೇ ಮುಹೂರ್ತಮಪಿ ಸೇವನಂ॥" ೧೯೫

[ಟೀಕು—ಉರಿವ ಕಿಚ್ಚಿನೊಳಗೆ ಬಿದ್ದು ಸಾವುದೆ ಲೇಸು, ಹಗೆಗಳನೊಂದು ಮುಹೂರ್ತಮೋಲಗಿಸಲಾಗದು.]

ಎಂಬುದು ನೀತಿಯುಂಟು; ನೀವಿನಿತು ದಿವಸಂ ಶತ್ರುಸಂಸರ್ಗದಿನಾದುಪಸರ್ಗಮನೆಂತು ಸೈರಿಸಿದಿರ್, ಪೇಳಿಮೆನೆ; ಚಿರಂಜೀವಿಯಿಂತೆಂದಂ:—ದೇವಾ! ನೀವೀಗಳ್ ಬೆಸಸಿದ ಸುಭಾಷಿತದರ್ಥಂ ತಪ್ಪದಾದೊಡಂ, [೧೫

ಶ್ಲೋ॥ "ಯದಪಸರತಿ ಮೇಷಃ ಕಾರಣಂ ತತ್ಪ್ರಹರ್ತುಂ।
ಮೃಗಪತಿರಪಿ ಕೋಪಾತ್ ಸಂಕುಚತ್ಯುತ್ಪತಿಷ್ಣುಃ॥
ಹೃದಯನಿಹಿತವೈರಾ ಗೂಢಮಂತ್ರಪ್ರಚಾರಾಃ।
ಕಿಮಪಿ ವಿಗಣಯಂತೋ ನೀತಿಮಂತಸ್ಸಹಂತೇ॥" ೧೯೬

[ಟೀಕು—ಗೂಢಮಂತ್ರವನುಳ್ಳ ಬುದ್ಧಿವಂತರುಗಳು ಕಾರ್ಯಮಹನ್ನುಬರೆ ಸೈರಿಸಿಕೊಂಡಿಹುದು ಎಹೆಗೆಂದೊಡೆ:—ಮೇಷವು ಇದಿರಾಯಲೋಸುಕರ ಹಿಂದಕ್ಕೆ ಹೋಹ ಹಾಂಗೆಯೂ, ಮತ್ತೆ ಸಿಂಹವು ಆನೆಯ ಕುಂಭಸ್ಥಲಮಂ ವಿದಾರಿಸಲೋಸುಕರ ಸಂಕುಚಿತಶರೀರನಾಗುವ ಹಾಂಗೆಯೂ.] †

ಅದಲ್ಲದೆಯುಂ, [೨೪

ಶ್ಲೋ॥ "ವಹೇದಮಿತ್ರಂ ಸ್ಕಂಧೇನ ಯಾವತ್ಕಾರ್ಯವಿನಿಶ್ಚಯಃ।
ತತಃ ಪ್ರತ್ಯಾಗತೇ ಕಾಲೇ ಭಿಂದ್ಯಾದ್ಘಟಮಿವಾಂಭಸಃ॥" ೧೯೭

† ॥ ಖಪ್ರತಿಯು ಇಲ್ಲಿಯ ವರೆಗೆ ಇದೆ.

[ಟೀಕು—ತನ್ನ ಕಾರ್ಯವಹನ್ನಬರ ಹಗೆಯುನು ಹೆಗಲಲಾದರೂ ಹೊತ್ತುಕೊಂಡಿಹುದು, ಕಾರ್ಯ ಬರಲೊಡನೆ ಒಡೆದ ಕೊಡನ ಬಿಸುಡುವಹಗೆ ಬಿಟ್ಟುಕಳೆವುದು. ]

ಎಂಬ ನೀತಿಗಳೊಳವು. ಅದಲ್ಲದೆಯುಂ,

ಸಿಂಗದ ಮುಱಿವುಂ ಮೇಷದ।
ಪಿಂಗುಂ ನಯವಿದರ ವಿನಯಮಿಂತಿವು ಮೂಱುಂ॥ [೫
ಭಂಗಮೆನಿಸಲ್ಕೆ ಪಡೆಯುವು।
ಕಂಗೆಡಿಕುಂ ಭರದಿನಿತರದಟಂ ಘುರದೊಳ್॥388

ಅದಲ್ಲದೆಯುಂ,

ಶ್ಲೋ॥ "ವಹತಾ ಕೃಷ್ಣಸರ್ಪೇಣ ಮಂಡೂಕೋ ವಿನಿಪಾತಿತಃ।"

ಎಂಬ ಕಥೆಯುಂಟೆನೆ ಮೇಘವರ್ಣದೆಂತೆನೆ—ಚಿರಂಜೀವಿ ಪೇೞ್ಗುಂ:—

೧೧. ಕಪ್ಪೆಗಳಂ ಬೆನ್ನನೇಱಿಸಿಕೊಂಡ ಸರ್ಪನ ಕಥೆ.

ದರ್ಪರಹಿತಂ ಜನಾಧಿಕ।
ಕಾರ್ಪಣ್ಯಸಮೇತನೊಂದು ಗಹನಾಂತರದೊಳ್॥
ಸರ್ಪಂ ನಿಜಾಂಗನಾಯುತ।
ನಿರ್ಪುದು ಕಪಟಪ್ರಪಂಚಪರಿಣತಚಿತ್ತಂ॥ 389 [೧೫

ಆವೃದ್ಧೋರಗಂ ಸ್ವಾಹಾರಮನೆಲ್ಲಿಯುಂ ಪಡೆಯಲಾಱದೆ ಚಿಂತಿಸುತಿರ್ದು

(ಹರಿಣೀವೃತ್ತಂ.)

". ಅಭಿಮತಮಹಾಗ್ರಂಥಿಪ್ರಭೇದಪಟೀಯಸೀ।
ಗುರುತರಗುಣ ಗ್ರಾಮಾಂಭೋಜಸ್ಫುಟೋಜ್ಜ್ವಲಾ॥
ವಿಪುಲವಿಲಸಲ್ಲಜ್ಜಾವಲ್ಲೀವಿದಾರಕುಠಾರಿಕಾ।
ಜಠರಪಿಠರೀದುಷ್ಪೂರೇಯಂ ಕರೋತಿ ವಿಡಂಬನಂ॥" ೧೮ [೨೦

[ಟೀಕು—ಉದರವೆಂಬ ಭಾಂಡವು ಅಭಿಮಾನವೆಂಬ ಗಂಟನೊಡೆವುದರ್ಕೆ ಪಟುವೆಂತಹುದು; ಗುರುತ್ವವಹ ಗುಣಸಮೂಹವೆಂಬ ಕಮಳವಂ ಕಿಡಿಸುವುದರ್ಕೆ ಬೆಳದಿಂಗಳೆನಿಸಿದಂತಹುದು ; ಏನ ತುಂಬಿದೊಡಂ ತೃಪ್ತಿಯನೆಯ್ದದಾಗಿ ವಿಡಂಬನವ ಮಾಡುತ್ತಿಹುದು. ]

ವ|| ಎಂಬುದದಱಿನಾಂ ದುರಭಿಮಾನಮಂ ಕೈಕೊಂಡಿರಲ್ ಪಸಿದು ಸಾವಾದಪುದು ; ಆವುಪಾಯದೊಳಮಾಹಾರಮಂ ಪಡೆವೆನೆಂದೆಂದೊಡ ನೊಂದುಪಾಯಮಂ ಚಿಂತಿಸಿ,

ಮಂಡೂಕಬಹಳಮಂ ಖರ ।
ದಂಡೋತ್ಪಲಕುಮುದರಾಜಿರಂಜಿತಮಂ ಕಾ ॥ [೫
ರಂಡಕಳಹಂಸಷಟ್ಪದ ।
ಮಂಡಿತಮಂ ಕಂಡುದೊಂದು ಕೊಳನಂ ಸರ್ಪಂ ॥ 390

ಅಂತದಱಿ ಮೊದಲೊಳ್ ಕೆಲವು ದಿವಸಂ ತಲೆಯಿಕ್ಕಿ ಪಟ್ಟಿರ್ದು ದನೊಂದು ದರ್ದುರಂ ಕಂಡು ನೀರೊಳಿರ್ದದೇಂ ಭಾವಾ! ನೀನೀಗಳ್ ಪಲವು ದಿವಸಮಾಹಾರವಿರಹಿತನುಂ ನಿಜಪ್ರಭಾವಸಂಭಾವನಾಹೀನ ನುಮಾಗಿರ್ಪೆ ಇದೇಂ ಕಾರಣಮೆನೆ; ಪನ್ನಗನೆನ್ನ ಮನೋರಥಾವಾಪ್ತಿ ಯಾಗಲ್ ಬಗೆದುದೆಂದು ಸಂತೋಷಂಬಟ್ಟಿಂತೆಂದುದು:— [೧೦

ಈರುಸಿವಳ್ಳಿಯೊಳಾನವಿ ।
ಚಾರದೆ ಋಷಿಸುತನನೊರ್ವನಂ ಕೊಂಡೊಡವಂ ॥
ಕ್ರೂರತರವಿಷವಿಭೇದ್ಯಂ ।
ಧಾರಿಣಿಯೊಳ್ ಬಿರ್ದು ವಿಗತಜೀವಿತನಾದಂ ॥ 193

ಅಂತು ಮರಣಪ್ರಾಪ್ತನಾದ ಕುಮಾರನಂ ಸನ್ನಿಧಾನಸ್ಥಿತನಾಗಿರ್ದ ನ್ನುಮನಾತನ ತಂದೆ ಕಂಡು,

ಅನಿಶಂ ಭೇಕಾಳಿಗೆ ವಾ ।
ಹನಮಾಗೆಂದೆನಗೆ ರೌದ್ರಶಾಪಮನಿತ್ತಂ ॥ [೨೦
ಮುನಿಸಿಂ ತದ್ವಿಪ್ರಂ ಸಂ ।
ದನಮರಣಪ್ರಭವಶೋಕಪಾವಕತಪ್ತಂ ॥ 392

ಅದುಕಾರಣಂ ನಾಂ ನಿಮಗೆ ವಾಹನವಾಗಲ್ ಬಂದೆನೆಂದೊಡಾಕಪ್ಪೆ ಪರಿದು ತನ್ನರಸನಪ್ಪ ಜಲಪಾಲಂಗಱಿಪಿದೊಡಾತನೀಕೌತುಕುವಂ

ನೋೞ್ಪಿಂ ಬನ್ನಿಮೆಂದು ತನ್ನ ಸಮಸ್ತಪರಿವಾರಂಬೆರಸು ಬಂದಾಪನ್ನಗನಂ ಕಂಡು ತದ್ವೃತ್ತಾಂತಮುಂ ಬೆಸಗೊಂಡೊಡಾತಂಗೆ ಸವಿಸ್ತರಂ ಪೇೞೆ ಕೇಳ್ದೊಡಂಬಟ್ಟುರಗಾರಿಯುಂ ಹರಿಯೇಱುವಂತೆ ಸಮಸ್ತಹರಿನಿಕರಮೆನ್ನ ಬೆನ್ನನೇಱಿಕೊಂಡಾಡುತ್ತಿರಿಮೆನೆ; ಜಲಪಾಲಂಗೆ ಪ್ರಮೋದಮಾಗೆ ರಾಗಿಸಿ ಪಲಕಾಲಕ್ಕೆನ್ನ ಪಗೆಯೊಳಗಾದಂ ಬನ್ನಿಮೆಂಬುದುಂ ಪಸಾಯತರ್ವೆರಸು ಪರಿತಂದು ಮೃತ್ಯುವ ಬೆನ್ನನೇಱುವಂತಾಪನ್ನಗನ ಬೆನ್ನನೇಱುವುದುಮಾಅಹಿ ಮಂಡೂಕಂಗಳೆಲ್ಲಮುಮಂ ಪೊತ್ತು ಮಾಱುವ ಬಗೆಯುಂ ಬಗೆದು, [೮

ಬಂದೆಡೆಯೊಳ್ ಬೇಗಂ ಪರಿ |
ದೊಂದೆಡೆಯೊಳ್ ಮಂದಗಮನದಿಂ ಪೋಗಿ ಮನಂ ||
ಬಂದಂದದಿನಾದರ್ದುರ |
ನೆಂದಂದದಿನೆಂದುದಂದು ಸೂಕಳಸರ್ಪಂ || 393

ಪಗೆಯನುಪಾಯದೆ ತೀರ್ಚುವ |
ಬಗೆಯಿಂದಾದರ್ದುರವ್ರಜಂಗಳನುಗ್ರೋ ||
ರಗನೆಯ್ದೆ ಪೊತ್ತು ತೊೞಲ್ದುದು | [೧೫
ಜಗದೊಳ್ ನಿಜಕಾರ್ಯವಂತರೇನಂ ಮಾಡರ್ ||394

ಅಂತನೇಕಕಾಲಂ ವೃದ್ಧೋರಗನಾದರ್ದುರಂಗಳಂ ಪೊತ್ತು ತಿರುಗಿ ಬೇವಸಂಗೊಂಡೊಂದು ದಿವಸಂ ತನ್ನಿರ್ದ ಪುತ್ತಿಂಗೆ ವರ್ಪುದುಮದಱ ಪೆಂಡತಿ ಕಂಡೆಲೆ, ವಲ್ಲಭ! ನೀವೀನಿಕೃಷ್ಟಮಪ್ಪಕಪ್ಪೆಗಳಂ ಪೊತ್ತು ಕಷ್ಟಂಬಟ್ಟು ಬೞಿಕ್ಕೆ ನಿಮ್ಮ ಸಾಧಿಸುವುದೇನೆಂಬುದುಮಾಪನ್ನಗನಿಂತೆಂದಂ:—

ಶ್ಲೋ|| "ಕಿಂ ನ ಜಾನಾಸ್ಯಹಂ ಭದ್ರೇ ಯದಾ ಬಧ್ನಾಮಿ ದರ್ದುರಂ |
ಕಿಂಚಿತ್ಕಾಲಮಪೇಕ್ಷೇಽಹಂ ವ್ರತಾನ್ನಂ ಬ್ರಾಹ್ಮಣೋ ಯಥಾ ||" ೧೧೯

ಎಂಬುದುಮದೆಂತೆಂದುರಗಿ ಕೇಳ್ವುದುಮುರಗನಿಂತೆಂದಂ:—

ಟಿ-೧೧೯. ಎಲೌ ಸುಮುಖಿ, ಕಪ್ಪೆಯಂ ಪಿಡಿವ ಕಾಲಮಂ ನಾನಱಿಯೆನೆ? ವ್ರತಾನ್ನಮಂ ಬಯಸಿ ವಿಪ್ರಂ ಕೆಲಕಾಲಮಿರ್ದಂತೆ ಕಾಲವನಪೇಕ್ಷಿಸಿಹೆನು.

೧೨. ವಿಷ್ಣುಶರ್ಮನ ಕಥೆ.

ಭುವನವಿಭೂಷಣಮೆನಿಸಿ ।
ರ್ದ ವರ್ಧಮಾನಾಭಿಧಾನಪುರದೊಳ್ ವಿಲಸ ॥
ದ್ಭವನದೊಳಿರ್ಪಂ ವಿಪ್ರಂ ।
ವಿವೇಕನಿಧಿ ವಿಷ್ಣುಶರ್ಮನೆಂಬೊಳ್ವೆಸರಿಂ ॥ 395 [೫

ಅಂತಾತನ ಪೆಂಡತಿ ದುರ್ಮತಿಯೆಂಬಳ್ ಕುಲಟೆ ಕಪಟಪಟುವಪ್ಪುದಱಿಂ ಪರಪುರುಷರಲ್ಲಿಯೆ ಆಸಕ್ತೆಯಾಗಿರ್ಪುದನಾಪಾರ್ವನವಳ ಚೇಷ್ಟಾಭಾವದಿಂದಱಿತು, ನಿಶ್ಚೈಸುವೆನೆಂದೊಂದು ದಿವಸಂ ನೆರೆಯೂರ್ಗೆ ಪೋಗಿ ಬಂದಪೆಂ ನೀಂ ಕರಂ ಬುದ್ಧಿವಂತೆಯಾಗಿರೆಂದು ಪೊಱಮಟ್ಟು ಪೋಗುವನಂತೆ ಪೇೞ್ದು ಪೋಗಿ ಮಗುೞ್ದುವಂದು ಆಕೆಯುಂ ವಂಚಿಸಿ ಮನೆಯೊಳಡಂಗಿರ್ದಂ. ಅನ್ನೆಗಮವಳ್ ನೆರೆಮನೆಯ ಪಾದರಿಗನಂ ಬರಿಸುವುದುಮವಂ ಬಂದಾಕೆಯನನೇಕಸ್ತೋತ್ರಪ್ರಕಾರದಿಂ ಬೈದು ಬಡಿದುಮೆನಗಿನಿತು ದಿವಸಮೇಕೆ ಬೞಿಯನಟ್ಟದೆಯಿಲ್ಲೆಂದು ಮುಳಿದೊಡಾಪಾರ್ಪ್ತೆಯಿಂತೆಂದಳ್:—

ಮುನಿಯದಿರು ನಲ್ಲ ನೀನಿಂ ! [೧೫
ತೆನಗೆಲೆ ಸಲೆ ಗಂಡನಪ್ಪ ಷಂಡಂ ನಿಚ್ಚಂ ॥
ಮನೆಸನಿಗೊಂಡಿರೆ ಬರಿಸ ।
ಲ್ಕೆನಗಿಂಬಿಲ್ಲಾಗಿ ನಿನ್ನನಾಂ ನೆನೆದಿನಿಸುಂ ॥ 396
ಮಱುಗುತ್ತುಂ ಚಿಂತಿಸುತುಂ ।
ಬೆಱಗಾದಂತಿರ್ದೆನಲ್ಲದಾನೋಪಳೆ ಮೆ ॥ [೨೧
ಯ್ಗರೆದಿರ್ದೆನಲ್ಲೆನೆಂದಡಿ ।
ಗೆಱಗಿರ್ದಾಪಾರ್ಪ್ತೆ ಪಾಙ್ಬನಂ ನಂಬಿಸಿದಳ್ ॥ 397

ಟಿ—೧೭, ಮನೆಸನಿಗೊಂಡಿರೆ=ಮನೆಯ ಸಮೀಪದಲ್ಲೇ ಇರಲು

ಅಂತು ಚಿತ್ರಂಬಡೆದೆನ್ನಾಣ್ಮನ ಕಣ್ಣೊಡೆವಂತುಪಾಯಮಂ ಚಿಂತಿಸಿದೆಯಪ್ಪೊಡೆ ನಮ್ಮ ಮನಂ ಬಂದಂದದಿಂದಂ ಕ್ರೀಡಿಸುವಮೆಂಬುದುಮಾಪಾಣ್ಬನೆಂದಂ:—ಅಂತಪ್ಪೊಡೆ ನಮ್ಮೂರ ಮುಂದಣ ಬಟ್ಟೆಯ ಬೆನಕಂ ಚಿಂತಿತಾರ್ಥಪ್ರದನೆಂಬರಲ್ಲಿಗೆ ನೀಂ ನಾಳೆ ಪೋಗಿ ಪೊಡೆವಟ್ಟು ಪರಕೆಯಂ ತೆಗೆದೆಯಪ್ಪೊಡೆ ನಿನ್ನ ಮನೋರಥಸಿದ್ಧಿಯಕ್ಕುಮೆಂದು ಪೇೞ್ದುದುಮವಳಂತೆಗೆಯ್ವೆನೆಂಬುದುಮದೆಲ್ಲಮನಾಪಾರ್ವಂ ಕೇಳ್ದಂದೆ ಮೇಲ್ವಾಯ್ದಿನಪ್ಪೊಡೆ ಪುಷ್ಕರನೆನ್ನಂ ಕೊಂದಪನಾನೀಗಳ್ ಹೀನಸತ್ವನಾಗಿರ್ಪೆನದಱಿಂದೇನಾನುಮೊಂದುಪಾಯದಿಂ ಶಕ್ತಿಯಪ್ಪಂತು ಮಾಡಿಕೊಂಡು ಬೞಿಕ್ಕಿವರ್ಗೆ ತಕ್ಕುದಂ ಮಾೞ್ಪೆನೆಂದಾಗಳೆ ಪೋಗಿ ಚಿಂತಾಸಿದ್ಧಿವಿನಾಯಕನ ಪಿಂತೆ ಕುಳ್ಳಿರ್ಪುದುಮಾಜೋಡೆ ನೇಸರ್ಮೂಡಲೊಡಂ ವಿನಾಯಕನಲ್ಲಿಗೆ ಬಂದು ಗಂಧಾಕ್ಷತಧೂಪದೀಪಾದಿಗಳಿಂದರ್ಚಿಸಿ ತದನಂತರಂ, [೧೨

(ರಥೋದ್ಧತೆ.)

ಕ್ಷೀರಸಾರಘೃತಪೂರಮಂಡಕಾ ।
ಧಾರಖಂಡಯುತಲಡ್ಡುಕಾವಳೀ ॥
ಪೂರಿಕಾದ್ಯಖಿಲಭಕ್ಷ್ಯರಾಶಿಯಿಂ ।
ಜಾರೆಯರ್ಚಿಸಿದಳಾಗಣೇಶನಂ ॥398

ಷಟ್ಪದರಾಜಿಚುಂಬಿತಕಪೋಲಯುಗಂ ದ್ವಿರದಾನನಂ ಸುರ ।
ದ್ವಿಟ್ಪುರಘಸ್ಮರಪ್ರಿಯಸುತಂ ಗಣನಾಥನಘೌಘವೇದನಾ ॥
ರುಟ್ಪಟಲಪ್ರಣಾಶದಹನಂ ಫಣಿನಾಯಕಭೂಷಣಂ ಮರು । [೨೦
ದ್ರಾಟ್ಪೃಥುವೌಳಿಲಾಲಿತಪದಂ ನಮಗೀಗೆ ಮನೋರಥಂಗಳಂ॥ 399

ವ॥ ಎಂದು ತುತಿಯಿಸಿ ಪೊಡೆವಟ್ಟೆನ್ನ ಗಂಡನಂ ಕಣ್ಗಾಣದಂತು ಮಾಡಿದೊಡೆ ನಿನಗೆ ನಾಂ ಪೊನ್ನಪಟ್ಟಮಂ ಬೊಟ್ಟುಮನೀವೆನೆಂಬುದುಂ; ಪ್ರತಿಮೆಯ ಪೆಱಗಿರ್ದ ಪಾರ್ವನಂತಪ್ಪೊಡೆ ನಿನ್ನ ಗಂಡಂಗೆ ತಲೆವೂಸಿ

ಮೀಯಲೆಱೆದು ಷಡ್ರಸಾನ್ನಮನಿರ್ಪತ್ತೊಂದು ದಿವಸಮಿಂಬಾಗಿಯುಣಲಿಕ್ಕಿದೆಯಪ್ಪೊಡೆಯಾತನ ಕಣ್ಣೊಡೆಗುಮೆಂಬುದುಂ; ಪಾಣ್ಬೆ ನಂಬಿ ದೈವಂ ಸನ್ನಿದಮಾಗಿರ್ದೆನ್ನೊಡನೆ ನುಡಿದುದಿನ್ನೆನಗೇನೆಂದು ಮನದೊಳ್ ಪಿರಿದು ಸಂತಸಂಬಡೆದು ಮನೆಗೆ ಪರಿತಂದು ನಾನಾವಿಧಭಕ್ಷ್ಯಭೋಜ್ಯಂಗಳುಮನನೇಕಫಲಪತ್ರಶಾಕಂಗಳುಮಂ ಸುಸ್ವಾದುಗಳಪ್ಪಂತಟ್ಟು ಪಾರ್ವಂ ಬರಲತ್ಯಾದರದಿಂ ಕಾಲ್ಗೆಱಗಿ ಮೆಯ್ಯಂ ಕಯ್ಯಿನೊತ್ತಿ ಮೀಯಲೆಱೆದು ದಿವ್ಯಾಹಾರಂಗಳನುಣಲಿಕ್ಕಿ ಬೞಿಕ್ಕಿಂತೆಂದಳ್:—ಈಗಳ್ ಕೆಲವು ದಿವಸದಿಂದಿತ್ತ ನಿಮ್ಮೊಡಲ್ ಬಡವಾಗುತ್ತುಂ ಬಂದಪುದು; ಶರೀರಂ ಸಮಂತಿರ್ಪಿನಂ ಸಂತತವಿಂತೆ ಸ್ನಾನಭೋಜನಂಗೆಯ್ದು ನಿಶ್ಚಿಂತಮಿರಿಮೆಂಬುದುಂ; ವಿಷ್ಣುಶರ್ಮಂ ದುರ್ಮತಿಯ ಕೂರ್ಮೆಗೆ ಸಂತೋಷಂಬಟ್ಟುಮಂತೆಗೆಯ್ವೆನೆಂಬುದುಮಾಸ್ಥಿತಿಯೊಳೆ ನಿಚ್ಚನಿಚ್ಚಂ ಸ್ನಾನಭೋಜನಂಗೆಯ್ಯುತ್ತಿರ್ದೊಂದುದಿವಸಂ ಪಾರ್ವನಾಪಾಣ್ಬೆಗೆ ನಂಬುಗೆಯಂ ಪುಟ್ಟಿಸಲೆಂದು ಸಮೀಪಕ್ಕೆ ಕರೆದಿಂತೆಂದಂ:— [೧೩

ಪಟಲಂ ಕಣ್ಣೊಳ್ ಕವಿದುಂ ।
ಗುಟಮಂ ಮೊದಲಾಗಿ ಕಾಣೆನೆಂದೊಡೆ ಕುಲಟಾ ॥
ಪಟು ರಾಗಿಸಿ ಮನದೊಳಗ।
ಕ್ಕಟ ಮರ್ದಂ ಮಾೞ್ಪುಮುಸಿರದಿರಿಮೆನೆ ಪಾರ್ವಂ ॥400 [೧೪

ಅಂತೆಗೆಯ್ವೆನೆಂದುಸಿರದಿರ್ದ ಮತ್ತಂ ಕೆಲವು ದಿವಸಕ್ಕಾತಂ ತನಗಳವುಂ ಮನೋಬಲಮುಮಾಗೆ ಪಗೆಯಂ ಕೊಲಲ್ಬಗೆದುಮೀಗಳ್ ನೀನಪ್ಪುದಂ ಕಾಣೆನೆಂದಿರ್ಪುದುಮಾಪಾಣ್ಬೆ ನಂಬಿ ನಿಮ್ಮ ಕಣ್ಗೊಳ್ಳದುವಕ್ಕೆಂದು ವಿನಾಯಕಂಗೆ ಪಟ್ಟಮಂ ಬೊಟ್ಟುಮಂ ಕೊಟ್ಟು ಪೊಡೆಮಟ್ಟು ವಂದಪೆನೆಂದಾನೆವದೊಳೆ ಪರಕೆಯಂ ವಿನಾಯಕಂಗೆ ಕೊಟ್ಟು ಬಂದು ಬೞಿಕ್ಕೆ ಪಾಣ್ಬನಂ ಬರಿಸಿ ಪಾರ್ವನಿರ್ದಂತಿರ್ವರುಂ ಬಡಗೊಂಡು

ನಡುವಿರುಳವರ್ ನಾಟಕಂನಲಿದು ಮಱೆದೊಱಗಿರ್ದ ಸಮಯದೊಳಾ ಪೊಣ್ಬನಂ ಕೊಂದು ತನ್ನ ಬಗೆಯುಮಂ ಬಗೆದಂತೆ ತೀರ್ಚಿದಂ.

(೧೧ ನೆಯ ಕಥೆಯ ಶೇಷ.)

ವ || ಅಂತೆ ಆನುಮೆನ್ನ ಪಗೆಯುಮಂ ಬಗೆಯೊಳೆ ಸಾಧಿಸಲಿರ್ದಪೆಂ, ನೀನುಸಿರದಿರೆಂದಾನಾಗಿಗೆ ನಾಗಂ ಪೇೞ್ದು ಮತ್ತಂ ಮಂಡೂಕಂಗಳಂ ಪೊತ್ತು ಮೆಲ್ಲಮೆಲ್ಲನೆ ತೊೞಲುತ್ತಮಿರೆ; ಜಲಪಾಲನೆಂದನೇಂ ಗಡ ಭಾವಾ! ನೀನಿಂದು ಕರಂ ಮಂದಗಮನನೆಯಾದೆಯೆಂದೊಡೆ; ವೃದ್ಧೋರಗನಿಂತೆಂದಂ:—ದೇವಾ! ನಾಂ ಪಲವು ದಿವಸಮಾಹಾರಂಬಡೆಯದೆ ನಡೆಯಲಾರ್ತಪೆನಿಲ್ಲೆಂಬುದುಮಂತಪ್ಪೊಡಂ ನಿನ್ನ ಪಸಿವು ಕೆಟ್ಟು ಬಲಮಪ್ಪನ್ನೆವರಂ ಕಿಱುಗಪ್ಪೆಗಳಂ ತಿನುತಿರೆನೆ; ಮಹಾಪ್ರಸಾದಮಂತೆಗೆಯ್ವೆನೆಂದು ದಿವಸಗತಿಯಿಂ ಕಿಱುಗಪ್ಪೆಗಳೆಲ್ಲಮುಮಂ ಬಱಿದಾಗೆ ಮಾಡಿ ತನಗೆ ಸತ್ವಂ ಸಮನಿಸೆ ಪಿರಿಯಕಪ್ಪೆಗಳೆಲ್ಲಮಂ ಗತಿಗೆಟ್ಟುವನೆಲ್ಲಮನೊಟ್ಟನೆ ಮಾಡಿ ಬೞಿಕ್ಕೆ ಜಲಪಾಲನುಮಂ ತಿಂದುದು. [೧೨

ಅದಱಿಂ,

ಶ್ಲೋ || "ಸ್ಕಂಧೇನಾಪಿ ವಹೇಚ್ಛತ್ರುಂ ಕಾರ್ಯಸಾಧನಬುದ್ಧಿಮಾನ್ |
ವಹತಾ ಕೃಷ್ಣಸರ್ಪೇಣ ಮಂಡೂಕೋ ವಿನಿಪಾತಿತಃ ||" ೨೦೦

ಎಂಬ ಕಥಾಪ್ರಪಂಚಮನಱಿದೆನಪ್ಪುದಱಿಂ ರಿಪುವನುಪಾಯದೊಳೆ ಕಿಡಿಸುವೆನೆಂದುಮವಂದಿರೇನೆಂದೊಡಂ ಸೈರಿಸಿಯವರ ಮನಕ್ಕೆ ವಿಶ್ವಾಸಂ ಪುಟ್ಟುವಂತೆ ನಡೆದು ಸ್ವಾರ್ಥಮಂ ಸಿದ್ಧಿಸಿದೆಂ.

ಎಂತುಂ ಪೂರ್ವೋಕ್ತಮಿಂತೆಂಬುದಲ್ತೆ:— [೨೦

ಶ್ಲೋ || "ಶಸ್ತ್ರೈರ್ಹತಾಸ್ತು ರಿಪವೋ ನ ಹತಾ ಭವಂತಿ |
ಪ್ರಜ್ಞಾಹತಾಸ್ತು ರಿಪವಃ ಪ್ರಹತಾ ಭವಂತಿ ||
ಶಸ್ತ್ರಂ ನಿಹಂತಿ ಪುರುಷಸ್ಯ ಶರೀರಮೇಕಂ |
ಪ್ರಜ್ಞಾ ಕುಲಂ ಸಹಬಲಂ ಸಹಸಾ ನಿಹಂತಿ ||" ೨೦೧

[ಟೀಕು—ಕೈದುಗಳಿಂ ಗಾಯುವಡೆದರ್ ಮರಳಿಯೋಳ್ವರ್ ; ಪುರುಷಬುದ್ಧಿಹತರ್ ಕೆಟ್ಟವರುಗಳೇ; ಅದೆಹೆಗೆಂದೊಡೆ-ಶಸ್ತ್ರವೆಂಬುದು ಪುರುಷನ ಶರೀರವೊಂದನೆ ಕಿಡಿಸುವದು, ಪ್ರಜ್ಞೆಯೆಂಬುದು ಹಗೆಗಳಂ ವಂಶಸಹಿತಂ ಕಿಡಿಸುವುದು.]

ಎಂಬುದು ; ಮತ್ತಂ,

ಶ್ಲೋ || “ಏಕಂ ನಿಹನ್ಯಾತ್ ಸಂದೇಹಃ ಕಾಂಡೋ ಮುಕ್ತೋ ಧನುಷ್ಮತಾ |
ಬುದ್ಧಿರ್ಬುದ್ಧಿಮತಾಂ ದೃಷ್ಟ್ವಾ ಹನ್ಯಾದ್ರಾಷ್ಟ್ರಂ ಸರಾಜಕಂ ||” ೨೦೨

[ಟೀಕು—ಬಿಲ್ಗಾರನೆಚ್ಚಂಬು ಒರ್ಬನ ಕೊಲ್ವುದೋ ಕೊಲ್ಲದೋ ಸಂದೇಹವು ; ಬುದ್ಧಿವಂತರ ಮಂತ್ರವು ಅರಸುಸಹಿತವಾಗಿರ್ದ ರಾಜ್ಯವನೆ ಕಿಡಿಸುವುದು.]

† * * * *

|| ಗದ್ಯಂ ||

ಇದು ವಿನಮದಮರರಾಜಮೌಳಿಮಾಣಿಕ್ಯಮರೀಚಿಮಂಜರೀಪುಂಜರಂಜಿತ
ಭಗವದ್ಭವಾನೀವಲ್ಲಭಚರಣಸರಸಿರುಹಷಟ್ಚರಣಂ
ಶ್ರೀಮನ್ಮಹಾಸಂಧಿವಿಗ್ರಹಿ ದುರ್ಗಸಿಂಹ ವಿರಚಿತಮಪ್ಪ
ಪಂಚತಂತ್ರದೊಳ್
ವಿಶ್ವಾಸ ಪ್ರಕರಣವರ್ಣನಂ

ತೃತೀಯಂ ತಂತ್ರಂ ಸಮಾಪ್ತಂ

---

† ಇಲ್ಲಿ ಪದ್ಯ ಪಾತವಾಗಿರುವಂತೆ ತೋರುತ್ತದೆ.

# ಚತುರ್ಥತಂತ್ರಂ.

ಶ್ರೀಯಂ ನಿರಂತರಂ ತನ |
ಗಾಯತ್ತಂಗೆಯ್ವ ನೃಪತಿ ಪರಕೃತವಿವಿಧಾ ||
ಪಾಯಂಗಳ್ಗೊಳಗಾಗದೆ |
ಮಾಯಾತ್ಮಕನಂತೆ ವಂಚಿಪುದು ನಿಪುಣತೆಯಿಂ ||401
ಅದುಕಾರಣದಿಂ ನಯಕೋ |
ವಿದನಸಮಂ ದುರ್ಗಸಿಂಹವಿಭು ವಿರಚಿಸಿದಂ ||
ಮದರಹಿತಂ ಗುಣವಿಹಿತಂ |
ಮುದದಿಂ ವಂಚನೆಯ ತಂತ್ರಮಂ ನೃಪಹಿತಮಂ ||402

ಅದೆಂತೆನೆ:—

ಶ್ಲೋ || " ಪ್ರಾಪ್ತಮರ್ಥಂ ತು ಯೋ ಮೋಹಾದಾನೀತಂ ಪ್ರತಿಮುಂಚತಿ |
ಸತತಂ ವಂಚ್ಯತೇ ಮೂಢೋ ಜಲಜಃ ಕಪಿನಾ ಯಥಾ || " ೬೦೩

[ಟೀಕು—ಆವನಾನೊರ್ವಂ ಆದಂಥ ಅರ್ಥವನಱಿಯದೆ ಬಿಟ್ಟಿಹನೊ, ಆವನೆಲ್ಲರಿಂದಂ ವಂಚಿಸಿಕೊಳಲ್ಪಡುವನು; ಅದು ಹೇಗೆಂದೊಡೆ—ಮೊಸಳೆಯನು ಕಪಿ ವಂಚಿಸಿದ ಹಾಂಗೆ.]

ಆಕಥಾಪ್ರಪಂಚಮೆಂತೆಂದೊಡೆ—

## ಮೊಸಳೆಯಂ ಕಪಿ ವಂಚಿಸಿದ ಕಥೆ.

ತಿಲಕಾಶೋಕತಮಾಲಕೇಸರಕಪಿತ್ಥಾಶ್ವತ್ಥಪುನ್ನಾಗಭವ್ಯಂ |
ಗಲವಂಗಾರ್ಜುನಭೂರ್ಜಜಂಬುಬದರೀಹಿಂತಾಲಜಂಬೀರಮಂ ||
ಜಟಲಕಾಂಜೀರಕರಂಜನಿಂಬವಟರಂಭಾಚೂತನಾರಂಗಸಂ |
ಕುಲದಿಂ ರಮ್ಯಮೆನಿಪ್ಪ ರಮ್ಯವನದೊಳ್ ನಾನಾಫಲಾಕೀರ್ಣದೊಳ್ ||
ಮದರಹಿತನನಿಹಿತವಿತಾ |
ಮದಧೂಳಿಪಯೋದನಿಪುಣ(?)ನಗಧರರಾಜ್ಯಾ ||

ಸ್ಪದದೊಳ್ ಸುಖದಿಂದಿರ್ಪಂ ।
ಮುದಿತಮನಂ ಕೃಷ್ಣವದನನೆಂಬ ಕಪೀಂದ್ರಂ ॥404

ಆಬನದುತ್ತರದಿಗ್ಭಾಗದೊಳೊಂದು ವನಮುಂಟು. ಅಲ್ಲಿ,

ಸಕಲಕಪಿಸಮಿತಿವೆರಸಹಿ ।
ತಕುಲಾಚಲಚಕ್ರಚಾರದಂಭೋಳಿ ಜಗ ॥
ತ್ಪ್ರಕಟೋದ್ಯನ್ಮಹಿಮನೆನಿಸು ।
ವ ಕಕುದ್ಬಲಿಯೆನಿಪ ಪೆಸರ ಬಲಿಮುಖನಿರ್ಪಂ ॥405

ವ॥ ಅಂತಾಮರ್ಕಟಂಗಳೆರಡರ್ಕಂ ಏಕದ್ರವ್ಯಾಭಿಲಾಷೆಯಿಂ ಬದ್ಧವೈರಂ ಬಳೆದು, ಕಕುದ್ಬಲಿ ಮೇಲೆ ಬರೆ, ಕದನಕ್ಕಳ್ಕಿ ಕೃಷ್ಣವದನನಾವನದ ಪಂಬಲಂ ಬಿಸುಟು ತನ್ನ ಯೂಥಮುಮಂ ಮಱೆದು ತಾನನಾಥಸಾಗಿ ಪಾರಾವಾರಂಬೋಗಿ,

ಸರಸಫಲಸ್ಫುರಿತೌದುಂ ।
ಬರಮಂ ಶಾಖಾಶಿಖಾಗ್ರಚುಂಬಿತಹರಿದಂ ॥
ಬರಮಂ ಪತ್ರಚ್ಛನ್ನಾ ।
ರ್ಕರಶ್ಮಿಯುಂ ಮುದದಿನಾಕಪೀಂದ್ರಂ ಕಂಡಂ ॥406

ವ॥ ಅಂತು ಕಂಡದನಾಶ್ರಯಿಸಿ ತತ್ಫಲಂಗಳನಮೃತೋಪಮಂಗಳನಾರೋಗಿಸುತ್ತಂ ಸುಖದಿನಿರ್ದೊಂದು ದಿವಸಂ ತನ್ನ ಕೈಯಿಂದಂ [1]ಬರ್ದುಂಕಿದ[1] ಪಣ್ಣಂಭೋಧಿಮಧ್ಯದೊಳ್ ಬೀೞ್ವುದುಮಲ್ಲಿ ಪೊಣ್ಮಿದ ಗಂಭೀರರವಮಂ ಕೇಳ್ದಾಚಪಲಕಪಿ ತನಗದುವೆ ವಿನೋದವಾಗೆ ಮತ್ತಂ ಅತ್ತಿಯ ಪಣ್ಗಳನೀಡಾಡುತ್ತಿರ್ಪುದುಮಾಪಣ್ಗಳಂ ಕ್ರಕಚನೆಂಬುದೊಂದು [[2]ಮೊಸಳೆ ಪ್ರತಿದಿನವೊಲ್ದು ಮೆಲ್ದು ಕೆಲವಾನುಂ ದಿನಕ್ಕವೆರಡರ್ಕಂ ನೇಹವಾಗೆಯಾನೆಗಟ್ ತನ್ನ ಮನೆಯಂ ಮಱೆದಲ್ಲಿಯೆ ಸಂತಸಮಿರುತ್ತಿರೆ; ಅದಂ ತಾಂ[2]] ಮನದೆಗೊಂಡು ಸುಕಥೆಯಿಂ

ಪಾ—1. ಬಿದಿರ್ದ. ಕ ॥ 2. ಇಲ್ಲಿ ಗ್ರಂಥಪಾತವಾಗಿತ್ತು.

ಬಳ್ ತನ್ನ ಗಂಡನಪ್ಪ ಕ್ರಕಚನಂ ಬರಿಸಿ ನೀನಿಂತಪ್ಪ ದುರ್ವ್ಯಸನಮಂ ಕಲ್ತೆಯೆಂದು ಬಾರಿಸಿ ಮತ್ತಮಿಂತೆಂದಳ್:—ತನಗೆ ವಾನರವ್ಯಾಧಿಯಾದುದಿದರ್ಕೆ ಕೋಡಗದೆ*ರ್ದೆಯಂ ತಂದೀಯಲ್ವೇೞ್ಕುಮೆನಲಂತೆಗೆಯ್ವೆನೆಂದು,

ಚಂಡಮಹಾಸೇನಂ ಕುಲ ।
ಮಂಡನನಂ ಸುತನನೞಿಯಲೊಡರಿಸಿದಂ ಭೂ ॥
ಮಂಡಲಮೆಲ್ಲಂ ಛೀ! ಎನೆ ।
ಪೆಂಡಿರ್ಗಾಸಕ್ತರಾದರೇನಂ ಮಾಡರ್ ॥ 407

ವನಿತಾಜನಕ್ಕೆ ಸೋಲ್ತೊಡೆ ।
ಜನದಪವಾದಮುಮನಾಪ್ತನಿವಹಮುಮಂ ಸ ॥
ಜ್ಜನದ ಗುರುಜನದ ಮುನಿಸುಮ ।
ನಿನಿಸುಂ ಬಗೆವವನುಮೊಳನೆ ವಸುಧಾತಳದೊಳ್ ॥ 408

ಅದಱಿಂದೆನಗೆ ಇದುವೆ ಕರ್ತವ್ಯಮೆಂದು ಬಂದತ್ತಿಯ ಮರದ ಮೊದಲೊಳಿರ್ಪುದಂ ಬಲೀಮುಖಂ ಕಂಡು ದರಹಸಿತವದನನಾಗಿ ಬಂದು ಔದುಂಬರಫಲಂಗಳನದಱ ಮುಂದಿಕ್ಕಿ ಬೞಿಕ್ಕೆ ಮುಖಮಂ ನೋಡಿ ನಿನ್ನನಿಂದು ಪಿರಿದು ಪೊೞ್ತು ಕಾಣದೆ ಚಿಂತಿಸುತಿರ್ದೆನೆಲ್ಲಿಗೆ ಪೋದೆಯೆನೆ; ಕ್ರಕಚನೆಂದಂ:—ನಿನ್ನ ಮಾೞ್ಪ ಪರಮೋಪಕಾರಕ್ಕೆಂತು ಪೊೞ್ತು ನಿತ್ತಱಿಸುವೆನೆಂದು ಚಿಂತಿಸಿ,

ಕಮಳಾಕರಸೌಭಾಗ್ಯಂ ।
ನಮೇರುಮಂದಾರಪಾರಿಜಾತಾದಿಸುರ ॥
ದ್ರುಮಗಣರುಚಿರದಿನೆಸೆವುದು ।
ಸಮುದ್ರಮಧ್ಯದೊಳಗಿರ್ಪುದಂತದ್ವೀಪಂ ॥ 409

ಆದ್ವೀಪದೊಳ್ ರೂಪವತಿಯರಪ್ಪ ವಾನರನಾರಿಯರಿರ್ವರ್ಗಂ ತನಗಂ ಸಖಿತ್ವಮುಂಟಪ್ಪುದಱಿಂದಲ್ಲಿಗೆ ಪೋಗಲ್ ತನ್ನಂ ಕಾಣಲೊ

ಡಮಿದಿರಂ ಬಂದಿಂತೆಂದರ್:—ನಿನ್ನಂತಪ್ಪ ಸಹಾಯನಂ ಪಡೆದು ಪುರುಷರಂ ಪಡೆಯದೆ ತಮ್ಮ ಜನ್ಮಂ ಬಾಲಬ್ರಹ್ಮಚಾರಿಯ ಜನ್ಮದಂತೆ ಶೂನ್ಯಮಾಗಿ ಪೋದಪ್ಪುದೆಂದು ನೊಂದು ನುಡಿದರಂತುಮಲ್ಲದೆಯುಂ, ಅನೇಕವಿಭವಸಂಪನ್ನೆಯರುಂ ಚೆನ್ನೆಯರುಮಾಗಿರ್ಪರಂತುಮಲ್ಲದಾದ್ವೀಪದ ಫಲಂಗಳೆಲ್ಲಂ ರಸಾಯನಂಗಳವಂ ತಿಂದವರ್ಗಾಗಳೆ ನೆರೆತೆರೆಯುಂ ಪೋಗಿ ನವಯೌವನರಪ್ಪುರದಱಿಂದೀಗಳೆ ನಿನ್ನನೆನ್ನ ಬೆನ್ನನೇಱಿಸಿ ಕೊಂಡುಯ್ವೆಂ ಕೇಳಾ; ಮತ್ತಮಂತದ್ವೀಪಕ್ಕುಯ್ದು ವಾನರಕುಮಾರಿಯರೊಳ್ ಕೂಡಿ ಕೃತಾರ್ಥನಪ್ಪೆನದಱಿಂ ಬೇಗಂ ಬಂದೆನ್ನ ಬೆನ್ನನೇಱಿನಲೊಡಂ; ತಜ್ಜರದ್ವಾನರಂ ಹರ್ಷೋತ್ಕರ್ಷಚಿತ್ತನಾಗಿ ಆತ್ಮಗತದೊಳಿಂತೆಂದಂ:— [೧೦

ಪರಿಪಕ್ವಫಲಪ್ರಕರಂ |
ಜರೆಯಂ ಕಿಡಿಸುವುದು ವಾನರೀಸಂದೋಹಂ ||
ಪುರುಷರನೆ ಬಯಸುವುದು ಗಡ |
ಸರಾಗದಿಂ ಬಗೆವೊಡಿನ್ನವೇಂ ಸೈಪೊಳವೇ || 410

ಎಂದು ಕಪಿ ಕಾಮಾತುರನಾಗಿ ಮುಂತಪ್ಪಪಾಯಮನೊಂದುಮಂ ಬಗೆಯದೆ, [೧೬

ಮೊಸಳೆಯ ಬೆನ್ನನೇಱಿ ಕಪಿ ವಾರಿಧಿಯೊಳ್ ನಡೆಯುತ್ತುಮಲ್ಲಿ ಸಂ|
ಧಿಸಿ ಬಿಡದೊತ್ತಿ ಭೋರ್ಗರೆದು ತರ್ಪ ತರಂಗದ ಮೇಲೆ ಮೆಯ್ಯುಗು||
ರ್ವಿಸಿ ಭರದಿಂ ಮನಂ ಬೆದಱಿ ಕಟ್ಟು [ಕಟಿಲ್ದುದು] ಶಕ್ಯಮಲ್ಲದೊಂ|
ದೆಸಕದಿನಾವನುಂ ಪರಮದುಃಖಮನೆಯ್ದದೆ ಸೈತೆ ಪೋಕುಮೇ || 411

ವ|| ಅಂತಾವಾನರಂ ಕೇದಗೆಯನೇಱಿದ ಕೋಡಗದಂತೆ ಗೂಡುಗೊಂಡು ಪಲ್ಲಂ ಗಿಡಿಗಿಱಿದು ಮೆಲ್ಲನೆ ಮೊಸಳೆಗಂತರೀಪಮಿಲ್ಲಿಗಮಿನ್ನೆನಿತು ದೂರಮುಂಟೆಂಬುದುಂ; ಶಿಂಶುಮಾರನೆಂದುದಾದ್ವೀಪಮಿಲ್ಲಿಗೆ

ಸಮೀಪವರ್ತಿಯಾಗಿಯುಮೀಗಳ್ ನಿನ್ನ ತಂಗಿಗೆ ವಾನರವ್ಯಾಧಿಯಾದುದರ್ಕೆ ಮರ್ಕಟಂಗಳೆರ್ದೆ* ಮರ್ದೆಂದು ಪೇಟ್ದಿರದಂ ನಮಗೆ ಪಡೆಯಲ್ ಬಾರದುದಱಿಂ ನಿನ್ನ ತಂಗಿಯನಾರೈದು ಬೞಿಕಂತದ್ವೀಪಕ್ಕೀಗಳೆ ಪೋಗಲಕ್ಕುಮೆಂದು ಪೇೞ್ವುದುಂ; ಕೃಷ್ಣವದನನೀಪಾತಕನುಪಾಯಮಂ ಬಗೆದು ನಂಬಿಸಿ ತಂದನೆಂದು ಚಿಂತಿಸಿ ತಾಂ ವಂಚನೋಪಾಯಕುಶಲನಪ್ಪುದಱಿಂ ಮೊಸಳೆಗಿಂತೆಂದುದೆಲೆ ಗಾವಿಲಾ! "ಕೋಡಗದೆರ್ದೆ* ಕೊಂಬಿನ ಮೇಲೆ." ಎಂಬುದು ಪ್ರಸಿದ್ಧಮಿದಂ ನೀಂ ಮುನ್ನ ಕೇಳ್ದಱಿವುದಿಲ್ಲಕ್ಕುಮೆ, ಮೇಣ್ "ಹಿತ್ತಲ ಗಿಡು ಮರ್ದಲ್ಲ." ಎಂದೇಳದಂಗೆಯ್ದಿಯಕ್ಕುಮದಲ್ಲದಿಂದೀಹದನನೆನಗಲ್ಲಿಯೆ ಪೇೞ್ದಿಯಪ್ಪೊಡೆನ್ನೆರ್ದೆ*ಯನಾಗಳೆ ಕೊಂಡುಬರ್ಪೆನಂತುಮಲ್ಲದೆನ್ನ ಪ್ರಾಣಮುಮರ್ಥಮುಮೆನ್ನೊಡವುಟ್ಟಿದಳಧ್ವಾನದವಸರಕ್ಕಿಲ್ಲಪ್ಪೊಡೆ ವಾೞ್ತಿಯೇನೆಂದು ಮಹಾಪ್ತರ್ಗಲ್ಲದೌಷಧದಾನಮಂ ಕುಡುವುದುತ್ತಮಪಕ್ಷಮೆಂಬುದುಂಟು, ಎನ್ನ ತಂಗಿವ್ಯಾಧಿತೆ ಗಡಮದರ್ಕೌಷಧಮೆನ್ನಲ್ಲಿಯೆ ಉಂಟುಗಡಿಂತಪ್ಪ ಸೈಪು ಸಮನಿಸಿತ್ತದಱಿಂ ಮರ್ದಂ ಕೊಂಡು ಇರ್ದ ಪೊೞ್ತಿರ್ದಂತೀಗಳೆ ಬಂದಪೆಂ ಮಗುಳೆನೆ; ಕ್ರಕಚನಿಂತೆಂದಂ:—ಅಂತಪ್ಪೊಡೆ "ಸುಹೃದ್ದರ್ಶನಮೌಷಧಂ" ಎಂಬುದುಂಟು, ಈಗಳಾಕೆಯನಾರೈದು ಪೋಪಮೆಂದೊಡಿದಾವ ಬುದ್ಧಿ, ನೀಂ ಮರ್ದಂ ತರ್ಪೆಯೆಂಬಾಸೆಯಿಂ ಜೀವಮಂ ಪಿಡಿದಿರ್ಪಳ್, ನೀಂ ಬಱಿದೆ ಬಂದುದನಱಿದಾಗಳೆ ಮಱುಕಳಿಸಿ ಮನವಿಕ್ಕಿದಳಪ್ಪೊಡೆ ಬೞಿಕ್ಕಸಾಧ್ಯಮಕ್ಕುಂ. ಅಂತುಮಲ್ಲದೆಯುಂ, [೧೯

ಶ್ಲೋ || "ಧರ್ಮಮರ್ಥಂ ಚ ಕಾಮಂ ಚ ತ್ರಿತಯಂ ಯೋಽಭಿವಾಂಛತಿ |

ರಿಕ್ತಪಾಣಿರ್ನಗಚ್ಛೇತ್ತು ಗುರುಂ ನರಪತಿಂ ಸ್ತ್ರಿಯಂ ||" ೨೦೪

[ಟೀಕು—ಆವನಾನೊರ್ವಂ ಧರ್ಮಾರ್ಥಕಾಮಮೆಂಬೀಮೂಱಂ ನಿಶ್ಚೈಸುವನೋ ಆತಂ ಗುರುವಿನಲ್ಲಿಗೆ ಅರಸಿನಲ್ಲಿಗೆ ಸ್ತ್ರೀಯರಲ್ಲಿಗೆ ಬಱುಗೈಯಲ್ಲಿ ಹೋಗಲಾಗದು.]

ಟ—ಲ. ಏಳಿದಂಗೆಯ್=ನಿರಾಕರಿಸು. ೧೦. ಬಾೞ್ತೆ=ಪ್ರಯೋಜನ.

ಎಂಬುದು ನೀತಿಯುಂಟು; ಸಾಧಾರಣಸಂಬಂಧಿಗಳಪ್ಪರಲ್ಲಿಗೆ ಬಱಿಗೈಯಿಂ ಪೋಗಲಾಗದೆಂಬರ್; ಅಂತುಮಲ್ಲದಾತುರೆಯಲ್ಲಿಗೌಷಧಮಿಲ್ಲದೆಂತು ಪೋಪುದು; ಅದಲ್ಲದೆಯುಂ ಎನ್ನೊರ್ವನೆ*ರ್ದೆ ಮರ್ದಿಂಗೆ ನೆಱೆಗುಂ ನೆಱೆಯದಿರ್ಕುಮದನಱಿಯಲ್ಬಾರದು; ಎನ್ನ ಪರಿಗ್ರಹಂ ವಾನರಂಗಳ್ ವಿಹಾರಿಸಲ್ ಪೋಗುತ್ತುಂ ತಮ್ಮೆ*ರ್ದೆಗಳನಲ್ಲಿಯೆ ಮಡಂಗಿ ಪೋಪುವು; ಅದೆಲ್ಲಮಂ ಕೊಂಡೀಗಳೆ ಮಗುೞ್ದು ಬರ್ಪೆಂ, ಬೇಗಂ ಮಗುೞೆನೆ; ಶಿಂಶುಮಾರಂ ಮಾರುತವೇಗದಿಂ ಘೋರೆನೆ ಬಂದತ್ತಿಯ ಮರದ ಸಮೀಪಕ್ಕೆ ಸಾರಲೊಡಂ; ಶಾಖಾಚರನದಱ ಶಿಖರಮಂ ಮೆಟ್ಟಿ ಮರದ ತುದಿಗೊಂಬಿಂಗೆ ಪಾಯ್ದು ತೂಱಿಲ್ಗೊಂಬನೇಱಿ ಪೆಱಗಂ ತೋಱಿಯೇಡಿಸಿಯಾಡುತ್ತಿರ್ಪುದುಮದಂ ಕ್ರಕಚಂ ಕಂಡು — ಏಂಗಡ ಭಾವಾ! ನೀನಿದೇಂ ನಿಂದಿಲ್ಲಿ ಱೋಡಗತನಂಗೆಯ್ದಾಡುತ್ತಿರ್ಪೆ; ಅತ್ತ ನಿನ್ನ ತಂಗಿಗವಸ್ಥೆ ಪಿರಿದು, ತಡೆಯದೆ ಬಂದು ನಿನ್ನೆ*ರ್ದೆಯನಾಕೆಗೆ ಕೊಂಡು ಬಱಿಕ್ಕಾಗಳೆ ನಿನ್ನನಂತರ್ದ್ವೀಪಕುಯ್ವೆನಲ್ಲಿ ನೀನುಮಾವಾನರಸ್ತ್ರೀಯರೊಡಗೂಡಿ ಬಱಿಕ್ಕೀಮಾರ್ಗದಿಂ ಮೆಚ್ಚಿದಂತಾಡುತ್ತಿರು ಎನೆ; ಕೃಷ್ಣವದನಂ ಪೇೞ್ದಂ:— [೧೭

ಕೋಡಗದೆ*ರ್ದೆ ಮರ್ದೆಂದೆಲೆ।
ಱೋಡಗ ನೀನೆನಗೆ ಪೇೞ್ದಿಯಾಗಳೆ ದೆಸೆಗೆ ॥
ಟ್ಟೋಡಿತ್ತೆ*ನ್ನೆರ್ದೆಯುಂ ನೀಂ।
ಮಾಡ್ಪೆ ನಿನ್ನೆ*ರ್ದೆಯನೆನ್ನ ತಂಗಿಗೆ ಮರ್ದಂ ॥ 412 [೧೯

ಎಂಬುದುಂ; ಜಲಚರನಿವನಿನಿತಱೊಳೊಳಗನಱಿದನಕ್ಕುಮಾದೊಡಮೇನಿನ್ನುಂ ನಂಬೆ ನುಡಿದು ನೋೞ್ಪೆನೆಂದು—ಭಾವಾ! ನಿನ್ನೆ*ರ್ದೆ ಕೆಟ್ಟೊಡೇನಾಯ್ತು ನಿನ್ನ ತಂಗಿಗೆ ಪೆಱತು ಮರ್ದಂ ಮಾಡಲಕ್ಕುಮಲ್ಲದೀಗಳೆನ್ನ ಪ್ರಾಣಾಪ್ತನಪ್ಪ ನಿನ್ನಂ ನೋಡವೇೞ್ಕುಂದುಮೆನ್ನ ಪೆಂಡತಿಯರು

ಮಾವಾನರಿಯರುಂ ನಿನ್ನ ಬರವನೆ ಪಾರುತಿರ್ಪರಲ್ಲಿಗೆ ಪೋಗಲ್ವೇಟ್ಕುಂ ಬೇಗಂ ಬಾಯೆನೆ; ಬಲೀಮುಖನಿಂತೆಂದಂ:—

ಭವದೀಯಾನೃತಮಂ ನಂ ।
ಬಿ ವಿಪತ್ತಿಯನೆಯ್ದಿ ಬಟ್ಟಿನಿನ್ನಾಂ ಬರ್ಪಂ ॥
ದವಿವೇಕವಿಕಳಜಂಬುಕ । [ಸೆ
ನ ವಚನವಮಂ ನಂಬಿ ಸತ್ತ ಬೆಳ್ಗತ್ತೆಯವೊಲ್ ॥413

ಎಂದ ಬಲೀಮುಖನ ಮಾತಂ ಕೇಳ್ದು ಬೆಳ್ಗತ್ತೆಗೇನಾದುದೆನೆ—ವಾನರನಿಂತೆಂದಂ:—

ಶ್ಲೋ ॥ "ಆಗತಶ್ಚ ಗತಶ್ಚೈವ ಯೋ ಗತ್ವಾ ಪುನರಾಗತಃ ।
ಅಕರ್ಣಹೃದಯೋ ಮೂರ್ಖಃ ಸ್ವಯಂ ತೇನ ಹತಃ ಖರಃ ॥" ೨೦೫

[ಟೀಕು—ಕರ್ಣಹೃದಯವಿಲ್ಲದ ಮೂರ್ಖನಪ್ಪವುದಾನೊಂದು ಕತ್ತೆ ಬಂದು ಹೋದಂತಪ್ಪುದು ಮತ್ತೆ ಬಂದು ತಾನೇ ಕೊಲಿಸಿಕೊಂಡಿತು.]

ಎಂಬ ಕಥೆಯುಂಟದೆಂತೆನೆ:— [೧೩

೧. ನರಿಯ ಮಾತಂ ನಂಬಿ ಸತ್ತ ಬೆಳ್ಗತ್ತೆಯ ಕಥೆ.

ಅವಿರಳವಿಗಳಿತಮದಜಲ ।
ಲವೋಗ್ರಕರಟೋಪಕರಟಿಮಥನಂ ಕಂಠೀ ॥
ರವನಿರ್ಪುದು ನಾಮದಿನಮಿ ।
ತವಿಕ್ರಮಂ ಜ್ವರಗತಕ್ರಮಂ ಗಿರಿತಟದೊಳ್ ॥414 [೧೯

ಅಂತಾಸಿಂಹಂ ಮಱುಗುತ್ತಂಬಟ್ಟು ಗೊಂಕರ ಕಟ್ತ್ರಿಯಂ ಬಯಸಿ ಬಾಯೊಱೆತು ತನಗನುಚರನಪ್ಪುದೊಂದು ನರಿಗೆ ಪೇಟ್ವುದು ಮಿದಾವಗಹನವಿಾಗಳಿ ತರ್ಪನೆಂದಾನರಿ ಪೇಟ್ದು ಪೋಗಿಯಗಸರ ಪೊೞೆಯೊಳಾಡುತಿರ್ಪ ಕಟ್ತ್ರಿಯಂ ಕಂಡು ಮೆಲ್ಲನೆ ಸಾರ್ದು—ಭಾವಾ! ನಿನ್ನೊಡಲ್ ಬಡವಾದುದೇಂ ಕಾರಣಮೆಂದೊಡೇನಂ ಪೇೞ್ವೆನೀಯಗಸನೂರ ಸೀರೆಯೆಲ್ಲಮನೆನ್ನ ಬೆನ್ನೊಳೊಟ್ಟಿಕೊಂಡುಮತ್ತಲಿತ್ತಲುಮಾ

ಟ—೧೯. ಗೊಂಕರ್ = (?)

ಹಾರಾರ್ಥಕ್ಕೆ ಪೋಗಲೀಯನದಱಿಂದೊಡಲುಂ ಬಡವಾದುದೆಂಬುದುಂ; ಆ ಜಂಬುಕನಿಂತೆಂದಂ:—ಎಲೆ ಪಾಪಕರ್ಮ, ನಿನಗಿನಿತು ದುಃಖವುಳ್ಳೊಡೆ ಮುನ್ನಮೆ ಎನಗಱಿಪಿದೆಯಿಲ್ಲ; ಎನ್ನ ತಂಗಿಯರಪ್ಪ ಗರ್ದಭೆಯರಿರ್ವರ್ ನಿನ್ನಂತೆ ಭಾರಾಕ್ರಾಂತೆಯಾಗಿರ್ದಳ್ಕೆ ಚಿಂತಿಸುತ್ತಿರ್ದೊಡವರನೊಡಗೊಂಡೆಯ್ದಿ ಎನ್ನಿಪ್ಪ ಕಾಡಿನೊಳಿರಿಸೆ ನಿಶ್ಚಿಂತರಾಗಿರ್ದ ರಾಸಭೀವಿಲಾಸಿನಿಯರ್ ತಮಗೊರ್ವಪುರುಷನಂ ತರವೇಳ್ಕುಮೆಂದೆನ್ನಂ ತುತಿಸುತ್ತಿರ್ದಪರ್; ನಿನಗಂ ಮನೋರಥಸಿದ್ಧಿಯಕ್ಕುಂ; ಬೇಗಂ ಬಾಯೆನಲೊಡಂ; [೮

ರಾಗಿಸಿ ರಾಸಭನಿರದತಿ ।
ವೇಗದಿನಾನರಿಯ ಪಿಂದುಪಿಂದನೆ ಬಂದಂ ॥
ಮೇಗಪ್ಪಪಾಯಮುಂ ಕಡು ।
ರಾಗಿಗಳೇಂ ಕಂಡರೊಳರೆ ಭೂಮಂಡಲದೊಳ್ ॥415

ಅಂತು ಪೋಪುದುಮಾನರಿ ಹರಿಯಿರ್ದ ಗುಹಾದ್ವಾರಮಂ ಗರ್ದಭೆಯರೊಳಗಿರ್ದರ್ ಪುಗೆನಲೊಡಂ; ಪುಗುವ ಕಟ್ಟಿತ್ತಿಯಂ ಕಂಡು ಸಿಂಹಂ ಜವಂಗುಂದಿದ ಕಾರಣದಿಂ ಲಂಘನಾಸಕ್ತನಾಗಿ ಲಂಘಿಸಲಾಱದೆ ರಭಸಂಗೆಯ್ದೆಯ್ತುಪುರ್ದುದುಂ; ಕಟ್ಟಿತ್ತಿ ಬೆರ್ಚುರ್ತ್ತೋಡುತಿಪ್ಪುದಂ ಕಂಡು ಸೃಗಾಲಂ ಕರಂ ಮುಳಿದು ಸಿಂಹನಲ್ಲಿಗೆ ಬಂದೇಂ ಗಡ ಕಟ್ಟಿತ್ತಿಯಂ ಮೊದಲಾಗಿ ಪಿಡಿಯುಲಾರ್ತೆಯಿಲ್ಲ, ನೀನೆಂತು ಬರ್ದಪೆಯೆಂದು ನುಡಿಯೆ; ಹರಿ ಕರಮೆ ಸಿಗ್ಗಾಗಿ ಗುಹೆಯಂ ಪೊಕ್ಕುದಂ ಕೊಲ್ವುದಾವ ಗಹನಮೆಂದನವಧಾನದಿಂ ಪಾಯ್ದ ಕಾರಣದಿಂ ತಪ್ಪಿದುದು, ಇನ್ನದಂ ಕೊಂಡು ಬಾ; ಕಂಡಾಗಳೆ ಬಿಡಾಲನಿಲಿಯಂ ಕೊಲ್ವಂತಕ್ರಮದೊಳೆ ಕೊಂದಪೆನೆಂದೊಡೆ; ಮತ್ತೆ ನರಿ ಪರಿದಾಕಟ್ಟಿತ್ತಿಯಂ ಕಂಡೇಂ ಭಾವ! ನೀಂ ಕಳ್ಳರಂ ಕಂಡ ಬೆಳ್ವಾಳಂತೆ ಬೆದಱಿಯೆನಗಂ ಪೇೞದೆ ಪೆಱಗಂ ನೋಡದೋಡಿ ಬಂದೆಯದೇಂ ಕಾರಣಮೆನೆ; ರಾಸಭನಿಂತೆಂದಂ;—ಆಗುಹೆಯನಾಂ

ಪುಗಲೊಡನೊಂದು ರೂಪು ಮೊಱೆದು ಪರಿತಂದು ಮೇಲ್ವಾಯಲೊಡಂ ಭಯಂಬಟ್ಟು ಬಂದೆನೆನೆ; ಸೃಗಾಲನೆಂದಂ:—[1]ಗಾಳು[1]ಗಳಪ್ಪ ಗರ್ದಭೆಯರ್ [2]ವಿ[2]ರೋಧಕಾಮಿಗಳಪ್ಪುದಱಿಂ ಕಾತರಿಸಿ ಮೇಲೆಮೇಲೆ ಬೀೞಲೊಡಂ ಬಂದೆ, ನಿನ್ನ ಗಂಡುತನದ ಪುರುಳಂ ಕಂಡೆನ್ನ ತಂಗಿಯರ್ ಕರುಳಂ ಪಿಡಿದು ನಗೆಯೊಳ್ ಪೊರೞುತ್ತುಮಿರ್ದರ್, ನೀನಂಜಲ್ವೇಡ, ಬಂದವಱೊಳ್ ಸುರತಸುಖವನನುಭವಿಸುತ್ತುಮಿರ್ದಪೆ, ಬಾಯೆಂಬುದುಮಾಕೞ್ತೆ ಮಿೞ್ತುವಿನ ಬೆನ್ನೊಳ್ ಪೋಪಂತೆ ನರಿಯಾ ಬೆನ್ನೊಳ್ ಪೋಗಿ,

ಸುರತಸುಖಕಾಂಕ್ಷೆಯಿಂ ರಾ ।
ಗರಸಾಂಧಂ ರಾಸಭಂ ಮಹಾದ್ರಿಗುಹಾಭ್ಯಂ ॥ [೧೦
ತರಮಂ ಪೊಕ್ಕುದು ಮನ್ಮಥ ।
ಶರಪರವಶನಪ್ಪ ದೇಹಿ ಪುಗದೆಡೆಯುಂಟೇ ॥416

ಅಂತು ಪೊಕ್ಕುದನಾಸಿಂಹಂ ಪಾಯ್ದು ಗಂಟಲನೊಡೆಯೊತ್ತಿ ಕೊಂದು ತಿನಲಿರ್ದುದಂ ನರಿ ಕಂಡೀಖೂತುವಿದೆಲ್ಲಮಂ ತಾನೆ ತಿಂಗುಮೆಂತಱಿಯಲಕ್ಕುಂ; ಬೞಿಕ್ಕೀಗೆಯ್ವೆನೀಗಳೆ ವಂಚಿಸಿಯೆನಗಪ್ಪನಿತಂ ಕಳೆದು ಕೊಳ್ವೆನೆಂದು ಸಿಂಹದ ಸಮೀಪಕ್ಕೆ ಬಂದು—ದೇವಾ, ನೀವೀಗಳ್ ಪಲವು ದಿವಸಂ ದೇವತಾರಾಧನಂಗೆಯ್ದುದಿಲ್ಲಿಂದು ಇಷ್ಟದೇವತಾಸಮಾರಾಧನಂಗೆಯ್ದು ರಾಸಭಮಂ ವ್ಯಾಧಿನಿರ್ಹರಣಾರ್ಥಂ ದಿವ್ಯೌಷಧಮೆಂದು ಬಗೆದಾರೋಗಿಸಿಮೆಂಬುದುಂ; ಮೃಗೇಂದ್ರನಂತಗೆಯ್ವೆಂ, ಆಂ ದೇವತಾನಮಸ್ಕಾರಂಗೆಯ್ದು ಬರ್ಪನ್ನೆವರಂ ನೀನಿದನಗಲದಿರೆಂಬುದುಂ; ಮಹಾಪ್ರಸಾದಮೆಂದುಮಾಸಿಂಹಂ ಪೋಗಲೊಡಂ ಗರ್ದಭನೆರ್ದೆ*ಯುಮಂ ಕಿವಿಯುಮಂ ತಿಂದು ತುಡುಗುಣಿತೊೞ್ತಿನಂತೆ ಬಾಯಂ ತೊಡೆದುಕೊಂಡು ತಾನಲ್ಲದಿಂತಿರ್ಪುದುಮಾಮೃಗಾಧಿರಾಜಂ

ಪಾ—1. ಗೋಳು. ಕ ॥ 2. ನಿ. ಕ ॥

ಬಂದು ಈಗರ್ದರ್ಭಸೆರ್ದೆಯುಂ ಕಿವಿಯುಮಿಲ್ಲಿರ್ದುವೆನೆ; ಜಂಬುಕ ನಿಂತೆಂದುದು: —

ಶ್ಲೋ || « ಕುತೋಽರ್ಥಂ ಹೃದಯಂ ಕರ್ಣೌ ಕಾವನಾಂಧಸ್ಯ ವ್ಯಗಾಧಿಪ |
ತದ್ದೂರಪರಿನಷ್ಟೋಽಪಿ ಯೋಽಯಂ ಮೌಖ್ಯಾದಿಹಾಗತಃ || " ೨೦೬

[ಟೀಕು—ಕಾವನಾಂಧನಪ್ಪವಂಗೆ ಕಾರ್ಯವೆಂಬುದಿಲ್ಲ, ಹೃದಯವೂ ಕಿವಿಯೂ ಇಲ್ಲ. ಆದೆಲ್ಲಂ ಮುನ್ನವೆ ಕೆಟ್ಟಡೆಯುಂ ಮತ್ತೆಯುಂ ಮೂರ್ಖತನದ ಬಂದುದು. ]

ಅಂತುಮಲ್ಲದೆ ನಿಮಗೇಂ ಮೂರ್ಖತನವೆಡೆಗೊಂಡುದಕ್ಕುಮದಲ್ಲದೆ ಕಲ್ಪಿತ್ತಿ ನಿಮ್ಮ ಕೈಯೊಳ್ ಮುನ್ನಂ ಬರ್ದುಂಕಿ ಪೋದುದು; ಮತ್ತೆನ್ನ ಮಾತಂ ನಂಬಿ ಬಂದು ಸಾವುದಾವಕಾರಣಂ; ದೇವಾ! ನೀವಿದಂ ವಿಚಾರಿಸುವುದಿಲ್ಲಕ್ಕುಮೆಂದೊಡಾಸಿಂಹಮಿದಟಿ ಶರೀರಕ್ರಮಮಿಂತುಟೆಯಕ್ಕುಮೆಂದು ನಿಶ್ಚೈಸಿ ಸಂತೋಷಂಬಟ್ಟುದು. [೧೧

ಆನಾಬೆಳ್ಗಲಿತ್ತಿಯಂತಲ್ಲೆಂ; ಅಂತುಮಲ್ಲದೆಯುಂ

ಶ್ಲೋ || « ಫಲಾನ್ಯಮೃತಕಲ್ಪಾನಿ ತೃಪ್ತಿಂ ದಾಸ್ಯಂತಿ ಯಾನಿ ಮೇ |
ತಾನಿ ಭದ್ರ ನ ರೋಚನ್ತೆ ತವಾಪ್ಯೌದುಂಬರಾಣಿ ಚ || " ೨೦೭

[ಟೀಕು—ಆವುವು ಕೆಲವಮೃತಸಮಾನವಪ್ಪ ಪಳಂಗಳೆನಗೆ ತೃಪ್ತಿಯನೀವುವು ಇನ್ನಾ ಫಲಂಗಳ್ ನಿನಗೆ ಸೊಗಸುವವಲ್ಲವು. ]

ಎಂದು, ಭಾವಾ! ನೀಂ ಬಂದ ಬಟ್ಟೆಯೊಳೆ ಬಿಜಯಂಗೆಯ್ಯಿಮೆನೆ; ಮೊಸಳೆ ಮುಸುವಿಂದಂ ವಂಚಿಸಲ್ಪಟ್ಟು ಮನಂಗೆಟ್ಟು ಪೋಪುದುಂ; ವಾನರನಿಂತೆಂದಂ:—

ತನ್ನ ಬಗೆ ತೀರದನ್ನಂ | [೨೦
ಮುನ್ನಮೆ ಡಾಂಭೀಕನಾಗಿ ನುಡಿದನ ಬಗೆಯುಂ ||
ಬಿನ್ನಣಮೇಂ ತಾನುಂ ಕಿಡು |
ಗುನ್ನಿರುತಂ ಮರುತನಿರ್ದು ಕಾಯ್ವೊಡಮೆಂದುಂ ||417

ಅದಱಿಂದಂ ನೃಪನೀತಿಶಾಸ್ತ್ರನಿಪುಣಂ ತಾನಾರುಮಂ ನಂಬದಿ |
ರ್ಪುದು ಮತ್ತಂ ಮಿಗೆ ನಂಬಿ ವೈರಿಯನಱಿದು ಮೆಳ್ಪಟ್ಟುಂ ಭಯಂಬಿಟ್ಟು ಸಿ||
ರ್ಕಿದೊಡತ್ಯಂತಮನಸ್ಕನಾಗಿ ಸಲೆ ಬೇಗಂ ವಂಚಿಸಲ್ ಬಲ್ಲನ |
ಪ್ಪುದು ನಾರಾಯಣನಂತನೇಕವಿಧದಿಂ ವಿದ್ವಜ್ಜನೈಕಾಶ್ರಯಂ ||418

|| ಗದ್ಯಂ ||

ಇದು ವಿನಮದಮರರಾಜಮೌಳಿಮಾಣಿಕ್ಯಮಂಜರೀಪುಂಜರಂಜಿತ
ಭಗವದ್ಭವಾನೀವಲ್ಲಭಚರಣಸರಸೀರುಹಷಟ್ಚರಣಂ
ಶ್ರೀಮನ್ಮಹಾಸಂಧಿವಿಗ್ರಹಿ ದುರ್ಗಸಿಂಹ ವಿರಚಿತಮಪ್ಪ
ಪಂಚತಂತ್ರದೊಳ್
ವಂಚನಾ ಪ್ರಕರಣವರ್ಣನಂ.

ಚತುರ್ಥಂ ಪ್ರಕರಣಂ ಸಮಾಪ್ತಂ

# ಮಿತ್ರಕಾರ್ಯಪ್ರಕರಣಂ

# ಪಂಚಮತಂತ್ರಂ

ಶ್ರೀವಲ್ಲಭನಾಗಿ ಸಮು ।
ಸ್ತಾವನಿಯಂ ಕಾವ ನೃಪತಿ ತನಗಿನಿಸಂ ನಾ ॥
ನಾವಿಧನೀತಿಕ್ರಮಸಂ । [೫
ಭಾವನೆಯಿಂ ಮಿತ್ರರಾಗಿ ಮಾಳ್ಪುದು ಪಲರಂ ॥419

ಅದು ಕಾರಣದಿಂ,

ಮಿತ್ರಾಬ್ಜಿನೀಸರೋರುಹ ।
ಮಿತ್ರಂ ವಿರಚಿಸಿದನಖಿಲಬುಧನಿಧಿ ಮನುಜಾ ॥
ರಿತ್ರಂ ಗೌತಮಗೋತ್ರಪ । [೧೦
ವಿತ್ರಂ ವಿಭು ಮಿತ್ರಕಾರ್ಯತಂತ್ರಮನಿಳೆಯೊಳ್ ॥420

ಶ್ಲೋ ॥ “ಸಾಧವೋ ಮಂತ್ರಸಂಯೋಗಾದ್ಬುದ್ಧಿಮಂತ ಸ್ಸುಹೃಜ್ಜನಾಃ ।
ಸಾಧಯಂತ್ಯಾಶು ಕಾರ್ಯಾಣಿ ಕಾಕಕೂರ್ಮಮೃಗಾಖುವತ್ ॥ ” ೨೦೪

[ಟೀಕು—ಬುದ್ಧಿವಂತರಾಗಿರ್ದವರ ಸಾಧುಗಳ ಸಂಸರ್ಗವನೆ ಮಾಡುವುದು; ಅದೆಹೆಗೆಂದೊಡೆ:-ಕಾಗೆ ಆಮೆ ಸಾರಂಗ ಇಲಿಗಳ್ ಮಿತ್ರತ್ವವನೆಯ್ದಿದಹಗೆ ]

ಆಕಥಾಪ್ರಪಂಚಮೆಂತೆನೆ: — [೧೨

ಕಾಗೆಯುಂ, ಆಮೆಯುಂ, ಸಾರಂಗಮುಂ, ಇಲಿಯುಂ.

---

ವ॥ ಸಕಲಮುನೀಂದ್ರಬೃಂದಾರಕವಂದ್ಯಮಾನಚಾರುಚರಿತಸುಮುದಂಚಿತಗೋತ್ರಾಚಲಚಕ್ರವಾಳಚಕ್ರವರ್ತಿವಿಂಧ್ಯಮಹೀಧರದರ್ಪೋದ್ರೇಕಹರನುಂ, ದೇವರಾಜಮಹಿಷೀವ್ಯಾಮೋಹನಹುಷಮಹೀವಲ್ಲಭಸಾಮ್ರಾಜ್ಯಪ್ರಾಜ್ಯಮಹೀರುಹದಾವಾನಲನುಂ, ಜಠರಾನಲಶಿಖಾಕಲಾಪಭಸ್ಮೀಕೃತವಾತಾಪಿದಾನವಾಧೀಶ್ವರನುಂ, ಲೋಪಾಮುದ್ರಾವಿಲೋಚನಮಧುಕರಪರಿಪೀತಮನೋಹರವದನಾರವಿಂದಮಧುರಸ

ನುಂ, ಗಂಡೂಷೀಕೃತಲವಣಾಬ್ಧಿಜಲನುಮೆನಿಪ್ಪಗಸ್ತ್ಯಮುನಿಗಾಶ್ರಯ ಮಾಗಿರ್ದ ದಕ್ಷಿಣದಿಗ್ಭಾಗದೊಳ್

ಅರುಣಮಣಿಶ್ರೀರುಚಿರಂ ।
ಹಿರಣ್ಮಯಭದ್ರಲಕ್ಷಣಂ ದಕ್ಷಿಣದಿ ॥
ಕ್ತ್ರುರುಣೀಕಾಂಚಿಗೆ ಕಾಂಚೀ । [ಸ
ಪುರಿ ಮಣಿಯೆನಿಕುಂ ಮನೋಜ್ಞಗುಣಸಂಪೂರ್ಣಂ ॥421

ವ॥ ಅಂತಾಪುರದ ಪೊಱವೊೞಲಂ ಬಳಸಿ ಬೆಳೆದನೇಕಭೂರುಹಸಂದೋಹದ ನಡುವದೊಂದು ದೇವಾಲಯಮುಂಟು. ಅದಱ ಗೋಪುರಾಂತರದೊಳ್ ಹಿರಣ್ಯರೋಮನೆಂಬ ಮೂಷಕಾಧೀಶ್ವರನಿರ್ಪಂ. ಅದಱೊಳ್ ಮಿತ್ರತ್ವಮಾಗಿ ಚಿತ್ರಗ್ರೀವನೆಂಬ ಕಪೋತರಾಜಂ ನಿಜಕಪೋತವ್ರಾತಸಮೇತಂ ಮೂಷಕಾಧಿರಾಜನಿರ್ಪ ಬಿಲದ ಸಮೀಪಕ್ಕೆ ಬಂದದಱೊಳ್ ಮಾತನಾಡಿಯುಮಾಪ್ರದೇಶದೊಳಾಡಿಯುಂ ಪೋಗುತ್ತಿರ್ಪುದನೊರ್ವ ಶಬರಂ ಕಂಡುಮಾವಿಹಂಗಚಯಮಾಡುವೆಡೆಯೊಳೆಲ್ಲಿಯುಂ ಬಲೆಯಂ ಪಾಸಿ ಬಲಿಹರಣಂಗೆಯ್ದಂತೆ ಕೂೞಂ ಸೂಸಿ ಪೋಪುದುಮದೆಲ್ಲಮಂ ಲಘುಪತನಕನೆಂಬ ವಾಯಸಂ ಕಂಡು ನಾನೀಚೋದ್ಯಮಂ ನೋೞ್ಪೆನೆಂದಾಮರದ ಮೇಲಿರ್ಪುದುಮಲ್ಲಿಗೆ ಚಿತ್ರಗ್ರೀವಂ ಸಪರಿಗ್ರಹಂ ಬಂದು ಪರಪಿರ್ದ ಕೂೞಂ ಕಂಡೆಱಗಲೊಡಮಾಬಲೆಯೊಳ್ ಕಪೋತಂಗಳಸಂಖ್ಯಾತಂ ಸಿಲ್ಕಿ ತಲೆಯುಮನೊಡಲುಮಂ ಬಡಿಬಡಿದು ಬೞಲುತಿರ್ಪುದುಮವಱೊಳಗೆ ಚಿರಂತನನುಂ ಬುದ್ಧಿವಂತನುಮಪ್ಪುದೊಂದು ಕಪೋತಂ ಪಕ್ಷಿಗಣಕ್ಕಿಂತೆಂದುದು:—

ಕಾಂತಾರಾಂತದೊಳತಿವಿಸ್ತೀರ್ಣಮುಮತ್ಯುನ್ನತಮುಮತಿದೀರ್ಘಪೃಥುಸ್ಕಂಧಮುಮಪ್ಪುದೊಂದು ಮಹಾವಟವಿಟಪಿಯೊಳನೇಕವಿಹಗಕುಳಂಗಳಿರ್ಪುವು. ಅವಂ ಬರ್ಪ ವ್ಯಾಧಂ ಕಂಡಾಮರನಂ ಬಳವಂದು ನೋಡಿ,

ಈಮರಮೆನಗಲ್ತಡರ್ವೊಡೆ*।
ರಾಮಾನುಜರಂಗಮರಿದುಮುದ್ದಾಮುಮುಮೆಂ ॥
ದಾಮಾಯಿಕಿರಾತನತಿ।
ವ್ಯಾಮೋಹಿತನಾಗಿ ಪೋಗದಲ್ಲಿಯೆ ನಿಂದಂ ॥422 [೪

ಅಂತು ನಿಂದೀಪಕ್ಷಿಗಳನೆಂತುಂ ಪಿಡಿವೆನೆಂದೊಂದುಪಾಯಮಂ ಬಗೆದು ಯಷ್ಟಿಯ ಬೀಜಮಂ ತಂದಾಮರದ ಮೊದಲೊಳ್ ಬಿತ್ತಿ ನೀರನೆಱೆದು ಪೋಪುದುಂ; ಕೆಲವು ದಿವಸಕ್ಕಾಬಿಬ್ಬು ಪತತ್ರಿಗೋತ್ರಕ್ಕಪಮೃತ್ಯು ಮೂಡುವಂತೆ ಮೂಡುವುದುಮಾವಿಹಂಗಸಮೂಹಕ್ಕೆಲ್ಲಂ ಕುಲವೃದ್ಧನುಂ ಬುದ್ಧಿವೃದ್ಧನುಮಪ್ಪುದೊಂದು ವಿಹಂಗಮಾಮೊಳೆಯೆಲ್ಲಮಂ ಕಂಡಂಡಜಂಗಳ್ಗೆಲ್ಲಮಿಂತೆಂದುದು: — ಎಮ್ಮಜ್ಜರಿಂತೊಟ್ಟಂದುವರಮಿಾಚೂಳದೊಳಿರ್ದೆವು; ಇದಱ ಮೊದಲೊಳ್ ಪುಲ್ಲುಂ ಮೊದಲಾಗಿ ಪುಟ್ಟಯುಱಿಯವು; ಈಮೊಳೆಗಳಿಂದೆಮಗಪಾಯಮಾಗದೆ ಪೋಗದು; ಉಪೇಕ್ಷಿಸಿದಿರಪ್ಪೊಡೆ, [೧೩

ವಾಕ್ಯಂ ॥ "ನಖಚ್ಛೇದ್ಯಮತಿಕ್ರಾಂತಂ ಪರಶುನಾಪಿ ನ ಸಾಧ್ಯತೇ ॥" ೨೮

ಎಂಬುದು ನೀತಿಯುಂಟದಱಿಂ

ಈಮೊಳೆ ಬೆಳೆದೊಡೆ ನಮಗ।
ಕ್ಷೇಮಕರಂ ಕರನೆಯಕ್ಕುಮಿಾಗಳೆ ಕಳೆಯಿಂ ॥
ನೀಮೆನೆ ವಿಹಗಸಮೂಹಮಿ।
ದೇಮಾತೆಂದುಜಿದೆ ವೃದ್ಧವಿಹಗನ ಮಾತಂ ॥423 [೧೫

ಅಂತವಜ್ಞೆಯಂ ಮಾಡಿ ಪಕ್ಕಿಗಳೆಲ್ಲಮಿರೆ; ಕೆಲವು ದಿವಸಕ್ಕಾಬಳ್ಳಿ ಬೆಳೆದು ಮರನನಡರ್ದು ತುದಿಗೊಂಬುವರಂ ನಿಮಿರ್ದು ಪರ್ವಿ ಪರಿವೇಷ್ಟಿಸಿಕೊಂಡಿರ್ಪುದುಮಾವ್ಯಾಧಂ ಬಂದು ಬಳ್ಳಿಯಂ ಪಿಡಿದು ಮರನನಡರ್ದು ತದ್ವಟವಿಟಪಾಗ್ರದೊಳೆಲ್ಲಂ ಬಲೆಯಂ ಪಾಸಿ ಪೋದಂ

ಟ—೨೮. ಉಗುರಿಂದ ಚಿವುಟಲಪ್ಪುದಂ ಕೈಮಿಾಱಿದೊಡೆ ಕೊಡಲಿಯಿಂದೆಯುಂ ಕಡಿಯಲರಿದು.

ಇತ್ತಲಾದಿತ್ಯನಪರಗಿರಿಯನೆಯ್ದಲೊಡಂ ಪತತ್ರಿಗೋತ್ರಂಗಳೆಲ್ಲಂ ಬಂದಲ್ಲಿ ಪಾಯ್ದು ಬಲೆಯೊಳ್ ಸಿಲ್ಕಿ ತಲೆಯನೊಡಲುಮಂ ಬಡಿಬಡಿದು ಬೇಸತ್ತು ಮಾಣ್ದು ಬೞಿಕ್ಕೆ ವೃದ್ಧಪಕ್ಷಿಗಿಂತೆಂದುವು:— [೭

ಕೇಳಜ್ಜ ನಿನ್ನ ಮಾತಂ ।
ಕೇಳದೆ ಕಡುಗಾಳುತನದೆ ಸಿಲ್ಕಿದೆವೆಮಗೇಂ ॥
ಬಾೞಿಲ್ಕುಪಾಯಮುಳ್ಳೊಡೆ ।
ಪೇೞಿಂ ನೀಮೆನೆ ಖಗೇಂದ್ರನಂದಿಂತೆಂದಂ ॥424 [೭

ಅಂತಪ್ಪೊಡೆ ನೀಮೆಲ್ಲಮುಸುರ್ವೋದಂತೆ ಸಿರನೊಳದೆಗೆದು ಮಿಸುಕದಿರ್ಪಂದುಮಾಬೇಡಂ ಬಂದು ಕಂಡಿವೆಲ್ಲಂ ಮುನ್ನವೆ ಸತ್ತುವೆಂದು ಸಂತಸಂಬಟ್ಟು ಬಲೆಯುಂ ಬಿಡಿಸಿ ನೆಲಕ್ಕೀಡಾಡುವುದುಂ, ಮೆಲ್ಲನೆ ಪಾಯ್ದು ಪಕ್ಕಿಗಳೆಲ್ಲಮನಿಕ್ಕುವನ್ನಂ ನಮ್ಮಲ್ಲಿಯಾರುಂ ಮಿಸುಕದಿರ್ಪುದುಂ, ಬೞಿಕ್ಕೆ ಪುಳಿಂದಂ ಮರಮನಿೞಿವವಸರಮನಾನಱಿದು ಪದಿರಿಕ್ಕಲೊಡಂ, ಪವನಜವದಿಂ ಗಗನಕ್ಕೆ ನೆಗೆದು ಪೋಗಿಮೆನೆ; ವಿಹಂಗಮಮೆಲ್ಲಮಂತೆಗೆಯ್ವೆವೆಂದಿರ್ಪುದುಮಮಂ ಬಂದು ಮರನನಡರ್ದೇಱಿ ಮುನ್ನಮೆ ಸತ್ತಂತಿರ್ದ ಪಕ್ಕಿಗಳೆಲ್ಲಮಂ ಕಂಡು ಬೆಕ್ಕಸಂಬಟ್ಟೆಲ್ಲಂ ಸತ್ತು ಪೋದುವೆಂದು ಬಲೆಯಂ ಬಿಡಿಸಿ ನೆಲಕ್ಕೀಡಾಡಲಾಪಕ್ಕಿಗಳೆಲ್ಲಂ ವೃದ್ಧವಿಹಂಗಂ ಪೇೞ್ದ ಬುದ್ಧಿಯೊಳೆ ನೆಗೞ್ದು ಬರ್ದುಂಕಿದುವು.

ಅದಱಿಂ ನೀವುಮೆನ್ನ ಪೇೞ್ಕೆಗೆಯ್ವಿರಪ್ಪೊಡೆ ನಾಮೀಪಾಶಸಹಿತಂ ಪೋಪುದೆ ಕಜ್ಜಮೆನೆ:— [೧೯

(ಮದನಸಾಯಕವೃತ್ತಂ.)

ಎನೆ ಕಪೋತಕುಲಮಾಗಳೆ ಮೇಗ ।
ಣ್ಗನಿತುಮೊರ್ಮೊದಲೆ ಪಾಱಲೊಡಂ ತೊ ॥

ಟ್ಟನೆ ವನೇಚರಬಳಂ ಪರಿತಂದಾ ।
ಯ್ತೆನೆಗಿದೊಂದತಿಕುತೂಹಳಮೆಂದಂ ॥425

ಎಂದು ತನ್ನೊಡ್ಡಿದ ಬಲೆವೆರಸಂಬರದೊಳ್ ಪಾಱುವ ಕಪೋತವ್ರಾತಮಂ ಕಿರಾತಂ ಕಂಡು ಕಿಱಿದಂತರಮವಱ ಬೆನ್ನೊಳ್ ಪರಿದು ಬಱಿಕ್ಕಂ ಚಿಂತಿಸಿ ನಿಂದು ತನ್ನೊಳಿಂತೆಂದಂ:— [೫

ಒರ್ವನೆ ಸತ್ಪುರುಷಂ ಸಕ ।
ಲೋರ್ವಿಯುಮಂ ಕಾವನೇಕಮುಖದಿಂದೆನೆ ಸಾ ॥
ಸಿರ್ವರಿರದೇಕಮುಖದಿಂ ।
ನಿರ್ವಹಿಪಂದವರ್ಗ*ಸಾಧ್ಯಮಪ್ಪುದುಮುಂಟೇ ॥426

ಎಂದು, ಮತ್ತಂ, [೧೦

(ದ್ರುತವಿಲಂಬಿತ ವೃತ್ತಂ.)

ಪಡೆಯೆ ಪೋದ ಬಡಸೂಳೆ ತನ್ನ ಕ ।
ನ್ನಡಿಯುಮಂ ಕಿಡಿಸಿ ಬಂದಳೆಂಬ ನಾ ॥
ಣ್ನುಡಿಯುಮಾಯ್ತೆನಗೆ ಪೋಯ್ತು ಪಾಶಮಾ ।
ವೆಡೆಯೊಳೆಯ್ದಿದಪನೀಖಗಂಗಳಂ ॥427 [೧೫

ಎಂದು ಕಿರಾತಂ ಬೇಸತ್ತು ಬೆಚ್ಚನೆ ಸುಯ್ದು ಬಿದಿಯಂ ಬಯ್ದು ತನ್ನ ಮನೆಗೆ ಮಗುಟ್ದಿಂ.

ಅನ್ನೆಗಮಾಕಪೋತಂಗಳನ್ನೇಗೆಯ್ವೆಮೆನೆ; ಚಿತ್ರಗ್ರೀವನಿಂತೆಂದಂ:— ಎನ್ನ ಮಿತ್ರನಪ್ಪ ಮೂಷಕದಿಂದಲ್ಲದೀಪಾಶಬಂಧನಂ ಪರಿಪಡದು, ಅಲ್ಲಿಗೆ ಪೋಪಂ ಬನ್ನಿಮೆಂದು ಹಿರಣ್ಯರೋಮನಿರ್ದಲ್ಲಿಗೆ ಬಂದು ಬಿಲದ್ವಾರದೊಳ್ ನಿಂದು ತನ್ನ ಪೆಸರೊಳ್ ಕರೆಯಲೊಡಂ; ಮಿತ್ರನ ಸರಮನುಂದುರಂ ಕೇಳ್ದು ಪರಿತಂದು ನೋಡಿ ಬಲೆಯೊಳ್ ಸಿಲ್ಕಿರ್ದನಂ ಕಂಡು— ನಿನಗಿನಿತವತೆಯೇಕಾರಣದಿನಾದುದೆನೆ; ಕಪೋತಾಧೀಶನಿಂತೆಂದಂ:—

ನಿರುತಂ ನೀನಿರ್ದಲ್ಲಿಗೆ ।
ಬರೆ ಧರೆಯೊಳ್ ಕಲಸಿ ಪರೆದ ಕೂೞಂ ಕಂಡಾ ॥
ನಿರದೆ ಬುಭುಕ್ಷಿತನೆಂ ಭೋ ।
ರ್ಗರೆಯುತ್ತುಂ ಪಾಯ್ದೆನೞಿಯೆ ಸಪರಿಗ್ರಹನೆಂ ॥428

ಪೆಱತೇಂ ಮುನಿ ವಿಷಯವಿಷ ।
ಕ್ಕೆಱಗಿಯೆ ಸಂಸಾರಪಾಶದೊಳ್ ಸಿಲ್ಕುವವೋಲ್ ॥
ತೆಱನಱಿಯದಾನುಮಾಮಿಷ ।
ಕೆಱಗಿ ಮಹಾಪಾಶಬಂಧದೊಳ್ ಸಿಲ್ಕಿರ್ದೆಂ ॥429

ಎನೆ; ಹಿರಣ್ಯರೋಮನಿಂತೆಂದಂ:—ನೀನಪ್ಪೊಡೆ ಕರಂ ಬುದ್ಧಿವಂತಂ. ಇಂತಪ್ಪ ಶಂಕಾಸ್ಥಾನಕ್ಕೆ ಭೋಂಕನೆ ಪಾಯ್ದು ಪೊಲ್ಲಗೆಯ್ದೆಯನೆ; ಚಿತ್ರಗ್ರೀವನಿಂತೆಂದಂ:—

ಎಂತಪ್ಪ ಬುದ್ಧಿವಂತನು ।
ಮಂ ತತ್ಕ್ಷಣದಿಂ ಭವಾಂತರಾರ್ಜಿತಕರ್ಮಂ ॥
ಕ್ರಾಂ ತಡೆಯದೂಡದಿರದಿ ।
ನ್ನಂತುಟೆ ಸಿದ್ಧಾಂತಮಾವಜೀವಿಗಮೆಂತುಂ ॥430

ಶ್ಲೋ ॥ "ಯಸ್ಯ ಯದ್ಭವಿತವ್ಯಂ ಹಿ ತದ್ಭವತ್ಯೇವ ನಾನ್ಯಥಾ ।
ನೀಯತೇ ತೇನ ಮಾರ್ಗೇಣ ಸ್ವಯಂ ವಾ ತತ್ರ ಗಚ್ಛತಿ ॥" ೨೧೧

[ಟೀಕು:—ಆವನೊರ್ವಂಗಾವುದಾನೊಂದಹಂತಹುದು ಆದುದಲ್ಲದೆ ಮಾಣದು ; ಅನಲ್ಲದೊಡೆ ಪೂರ್ವಾರ್ಜಿತದುಷ್ಕೃತದಿಂ ಕಲ್ಪಿಸಿದಲ್ಲಿಗೆ ತಾನೆಯಾದರೂ ಹೋಹನು ]

ಎಂಬುಕ್ತಿಯುಂಟು; ಆವ ಜೀವಕ್ಕಂ ಜನ್ಮಾಂತರಕರ್ಮಮೆ ಕಾರಣಮಾಗಿ ಪುರುಷಂ ಸುಖದುಃಖಾನುಭವಕ್ಕೆ ಪೋಕುಂ; ಮತ್ತಂ ದೈವಮೆ ಕಾರಣಮಾಗಿ ಪೋಕುಂ; ಇದುಂ ವಿಧಿವಿಹಿತಂ; ಆನೇಗೆಯ್ವೆನೆಂದೊಡೆ ನೀನೆಂದುದೊಂದುಂ ಸಂದೆಯಮಿಲ್ಲೆಂದುಂದುರನಿಂತೆಂದುದು:—

ಶ್ಲೋ || "ಗಜಭುಜಂಗವಿಹಂಗಮಬಂಧನಂ ಶಶಿದಿವಾಕರಯೋರ್ಗ್ರಹಪೀಡನಂ|
ಮತಿಮತಾಂ ಚ ವಿಲೋಕ್ಯ ದರಿದ್ರತಾಂ ವಿಧಿರಹೋ ಬಲವಾನಿತಿ ಮೇ ಮತಿಃ ||"

[ಟೀಕು — ಆನೆ ಹಾವುಪಕ್ಕಿಗಳ್ಗೆ ಬಂಧನಮುಂ ಚಂದ್ರಸೂರ್ಯರ್ಗೆ ಗ್ರಹಣಮುಂ ಮಹಾಪುರುಷರ್ಗೆ ದಾರಿದ್ರ್ಯಮುಂ ಇವು ವಿಧಿವಶದಂತಹವು: ಅದುಕಾರಣದಿಂ ವಿಧಿಯೆ ಬಲಾಢ್ಯಂ. ] [೫

ಎಂದಿಂತಾಮೂಷಕಂ ಸಂಭಾಷಿತಮುಂ ಪೇಳ್ದು ಬಳಿಕ್ಕದಱ ಪಾಶಮುಂ ಕಡಿಯಲೊಡರ್ಚಿಸೆ; ಕಪೋತಾಧೀಶನೆನ್ನ ಪಾಶಮುಂ ಬಳಿಕ್ಕೆ ಬಿಡಿಸು, ಮುನ್ನಂ ಪರಿಗ್ರಹದ ಪಾಶಮುಂ ಮೋಕ್ಷಂಗೆಯ್ಯೆಂಬುದುಂ; ಹಿರಣ್ಯರೋಮನಿಂತೆಂದಂ:—

ಶ್ಲೋ || "ಆಪತ್ಕಾಲೇ ಧನಂ ರಕ್ಷೇದ್ದಾರಾನ್ ರಕ್ಷೇದ್ಧನೈರಪಿ | [೧೦
ಆತ್ಮಾನಂ ಸರ್ವದಾ ರಕ್ಷೇತ್ ದಾರೈರಪಿಧನೈರಪಿ ||" ೨೧೧

[ಟೀಕು—ಆಪತ್ಕಾಲಕ್ಕೆ ಧನಮಂ ರಕ್ಷಿಸುವುದು ; ಅರ್ಥದಿಂದಂ ಪರಿಗ್ರಹಮಂ ರಕ್ಷಿಸುವುದು; ಪರಿಗ್ರಹದಿಂದಂ ಅರ್ಥದಿಂದಂ ತನ್ನಂ ತಾನೆ ರಕ್ಷಿಸಿಕೊಂಬುದು. ]

ಎಂಬುದು ನೀತಿಯುಂಟು. ನೀನುಳ್ಳೊಡೆ ಪರಿಗ್ರಹಮುಂ ಪಡೆದುಕೊಳಲಕ್ಕುಂ; ಎನಲಾತಂಗೆ ಚಿತ್ರಗ್ರೀವನಿಂತೆಂದಂ:— [೧೫

ಪರಮಾರ್ಥಂ ನೃಪನಾಶ್ರಿತ |
ಭರಣಂ [1]ತಾನೆನಿಪ ಲಕ್ಷಣದ[1] ಗುಣದಿಂದಂ ||
ಪರಿಪೂರ್ಣನಪ್ಪುದಾಗದ |
ನರಸು ಕರಂ ವಿರಸಮಱಿದ ಪೊರಸಂ ಪೋಲ್ಕುಂ ||431

ಅದಲ್ಲದೆಯುಂ, [೨೦

ಶ್ಲೋ || "ಅರ್ಥಿತಾ ವಿಭವಸ್ತ್ಯಾಗಃ ಸ್ವಾತಂತ್ರ್ಯಮುಚಿತಜ್ಞತಾ |
ಏತತ್ಪಂಚಗುಣೋಪೇತಂ ಆಶ್ರಯಾತ್ಶ್ವರಂ ಬುಧಃ ||" ೨೧೨

[ಟೀಕು—ಅರ್ಥಿತ್ವಂ, ಐಶ್ವರ್ಯಂ, ತ್ಯಾಗಂ, ಸ್ವಾತಂತ್ರ್ಯಂ ಉಚಿತಜ್ಞತೆ—ಈಐದು ಗುಣಂಗಳಿಲ್ಲದರಸನನಾಶ್ರಯಿಸಲಾಗದು ]

ಪಾ—1, ಲಕ್ಷಣಮೆನಿಪ್ಪ. ಕ ||

ಅದರಿಂ ಪರಿಜನಕ್ಕಿಡರ್ಪಾದೊಡೆ ಪೊರೆವುದುಂ ಪಡೆದುದಂ ಪಚ್ಚುಕುಡುವುದುಂ, ತೊಡರ್ದರ್ಗೆ ಬಿಡಿಸುವುದುಂ, ಬಲ್ಲಿದರ್ಕೊಲೆ ಕಾವುದುಂ, ದೋಷಕ್ಕೆ ಸೈರಿಸುವುದುಂ ಕ್ಲೇಶಮನರಿವುದುಂ ಮೊದಲಾಗಿ ಮುತ್ತಮುತ್ತಮಗುಣಂಗಳೊಳವು; ಅಂತುಕಾರಣದಿಂದೀಯವಸ್ಥೆಯೊಳ್ ನೀವಿರ್ದಂತೆನ್ನನೆ ಮುನ್ನಂ ಕಾದು ಕೊಂಡೆನಪ್ಪೊಡೆ ಕಷ್ಟನೆಯುಪ್ಪೆ; ಅದೆಂತೆನೆ:— [೬

ಪರಿಜನಜನಪದಭೃತಿ ಧ |
ರ್ಮರಕ್ಷಣಂ ಸ್ವಾಶ್ರಯತ್ನಮೆಂಬಿದನಾತ್ಮಂ ||
ಭರಿಯಾಗಿ ಬಿಸುಟ ನರಪತಿ |
ಪರಿಸ್ಕೃತಧರ್ಮಾರ್ಥಕಾಮಮೋಕ್ಷನೆಯುಕ್ಕುಂ ||432 [೧೦

ಎಂಬುದುಂ; ಹಿರಣ್ಯರೋಮನಿಪ್ಪನ ಧೈರ್ಯಕ್ಕೆ ಸಂತುಷ್ಟನಾಗಿ ನಿನಗೆ ಸಂತೋಷಮನೀಗಳೆ ಮಾಳ್ಪೆನೆಂದಾಗಳೆ ಪೋಗಿ ತನ್ನ ಪರಿಜನಮನೆಲ್ಲಮಂ ನೆರೆಪಿಕೊಂಡುಬಂದಾಪಾಶಮಂ ನಿಶ್ಶೇಷಮಾಗಿ ಕಡಿದು ಕಳೆಯಲೊಡಂ; ಚಿತ್ರಗ್ರೀವಂ ಕೃತಾರ್ಥನಾದೆನೆಂದು ಮಿತ್ರಂಗೆ ಪೊಡೆವಟ್ಟು ಪಾಶಮುಕ್ತನಾದ ಜೀವನಂತೂರ್ಧ್ವಗತಿಗೆ ಸಂದಂ. [೧೫

ಇತ್ತಂ ಹಿರಣ್ಯರೋಮನಾಪಕ್ಷಿಗಳಂ ಕಾವ ಪುಣ್ಯದ ಫಲಮೆನಿತಾದೊಡಂ ತನ್ನ ಮುನ್ನಿನ ದುಷ್ಕೃತಮನನುಭವಿಸಿದಲ್ಲದೆ ಪೋಗದೆಂಬುದನರಿಪುವಂತಧಃಪತನಮಪ್ಪ ಬಿಲನಂ ಪೊಕ್ಕುದು.

ಅಂತದೆಲ್ಲಮನಲ್ಲಿ ಮರನ ಮೇಲಿರ್ದ ವಾಯಸಂ ಕಂಡು ವಿಸ್ಮಯಂಬಟ್ಟಾತ್ಮಗತದೆ ಬಳಿಂತೆಂದಂ:—

ಶ್ಲೋ || "ಅಧನಾಃ ಖಲು ಜೀವಧನಂ ಹೇಮಾರ್ಥಧನಂ ಮಹಾಧನಂ ಧಾನ್ಯಂ |
ಅತಿಧನಮೇತತ್ಸ್ಯಂದಗವಿದ್ಯಾಶೀಲಂ ತಪಶ್ಚ ಮಿತ್ರಂ ಚ ||" ೨೧೩

[ಟೀಕಾ—ಜೀವಧನಂ ಧನವಲ್ಲ; ಸುವರ್ಣಮಯಾಭರಣಂಗಳರ್ಧಧನಂ; ಧಾನ್ಯಂ ಮಹಾಧನಂ; ಸುವಿದ್ಯೆ ಸುಶೀಲಂ ತಪಸ್ಸು ಮಿತ್ರತ್ವಮೆಂಬಿವೆ ಸರ್ವಧನಾಧಿಕಂಗಳ್.]

ಎಂಬೀನೀತಿವಿದರ ಮಾತೇಕೆ ತಪ್ಪುಗುಂ; ಈಮೂಷಕಂ ಕೇವಲಂ ಜೀವಮಾತ್ರಮಲ್ಲ; ಇದು ಮಹಾಪುರುಷನದಱಿಂದಾನುಮೀತನೊಳೀತೆಱದಿಂ ಪ್ರೀತಿಯನೆ ಮಾಡಿ ಕೊಳ್ವೆನೆಂದಾತ್ಮಗತದೊಳ್ ಬಗೆದು ಹಿರಣ್ಯರೋಮನಿರ್ದ ಬಿಲದ್ವಾರಕ್ಕೆ ಬಂದು ನೋಡಿ ಕರೆವ ಕಾಗೆಯಂ ಕಂಡು—ನೀನಾರೆಂದು ಕೇಳಲ್, ಕಾಗೆ ಪೇೞ್ಗುಂ:— [೫

ಮಿತ್ರವ್ಯಸನತ್ರಾಣಪ।
ವಿತ್ರೀಕೃತಗಾತ್ರನಪ್ಪ ನಿನ್ನಂ ಕಂಡಾ ‖
ಮಿತ್ರವಿಹೀನನೆನೀಗಳ್।
ಮಿತ್ರತ್ವಕ್ಕಾಸೆವಟ್ಟು ಬಂದೆಂ ನಿನ್ನೊಳ್ ‖433

ಎಂಬುದುಂ; ಮೂಷಕನಿಂತೆಂದುದು:—ನೀಂ ಧ್ವಾಂಕ್ಷನೆಯಪ್ಪುದಱಿಂದತ್ಯಂತಮಾಂಸಭಕ್ಷಣಕಾಂಕ್ಷಿತನುಂ ಸ್ವಭಾವಚಪಲನುಮಾಗಿರ್ಪುದುಕಾರಣದಿಂ ಮಿತ್ರಪಾತ್ರಗುಣಸಮೇತನಲ್ಲೆನೆ; ಲಘುಪತನಕನೆಂದಂ:— ಇಂತಪ್ಪೊಡೆ ಮಿತ್ರಗುಣಂಗಳೆನ್ನವು ಸತ್ಪಾತ್ರವೆನ್ನವೆಂಬುದುಂ; ಹಿರಣ್ಯರೋಮನಿಂತೆಂದಂ:— [೧೪

ಶ್ಲೋ ‖ “ಸ್ವಚ್ಛತಾ ತ್ಯಾಗಿತಾ ಶೌರ್ಯಂ ಸಮಾನಸುಖದುಃಖಿತಾ।
ಅನುರಾಗಶ್ಚ ದಾಕ್ಷಿಣ್ಯಂ ಸತ್ಯಂ ಶೌಚಂ ಸುಹೃದ್ಗುಣಾಃ ‖” ೨೧೪

[ಟೀಕು—ಸ್ವಚ್ಛತನಂ, ತ್ಯಾಗಂ ಶೌರ್ಯಂ, ಸಮಾನವಹ ಸುಖದುಃಖಂ, ಸ್ನೇಹಂ, ದಾಕ್ಷಿಣ್ಯಂ, ಸತ್ಯಂ, ಶೌಚವೆಂಬಿವು ಮಿತ್ರಗುಣಂಗಳ್.]

ಮತ್ತಂ, [೧೯

ಶ್ಲೋ ‖ “ಶೀಲಂ ಮಹಾನುರಾಗಶ್ಚ ಸಂಕ್ಷೇಪಂ ಮಿತ್ರಲಕ್ಷಣಂ।
ಯಸ್ಮಿನ್ನೇತದ್ಧಿತಂ ಮಿತ್ರಂ ತತ್ರಾತ್ಮಾನಂ ವಿನಿಕ್ಷಿಪೇತ್ ‖” ೨೧೫

[ಟೀಕು—ಶೀಲಂ ಮಹಾಸ್ನೇಹಂ ಇವು ಮೊದಲಾದ ಮಿತ್ರಲಕ್ಷಣಂಗಳಾವನಲ್ಲಿಯುಂಟು, ಆಮಿತ್ರನಲ್ಲಿ ತಾನಿಹುದು.]

ಅದಲ್ಲದೆಯುಂ,

ಕುಲಜಂ ಸತ್ವಾಢ್ಯಂ ನಿ।
ಶ್ಚಲವಚನನಭಿಮಾನಿ ಗುಣಿ ತಿತಿಕ್ಷಾನ್ವಿತನಿ॥
ರ್ಮಲಚರಿತನೆರಡನಱಿಯಂ।
ಬಲಯುತನಱಿವುಳ್ಳನೆನಿಪನಪ್ಪುದು ಕೆಳೆಯಂ ॥434

ಎಂದಿಂತು ಪೂರ್ವೋಕ್ತಲಕ್ಷಣಂಗಳನುಂದುರಂ ಪೇೞ್ವುದುಂ; ವಕ್ರಾಕ್ಷನಿಂತೆಂದಂ:—ನೀನೆಂದಂತೆ ನಾಂ ಕಾಕಕುಲಪ್ರಸೂತನಾಗಿಯುಮ ಜ್ಞಾನಕರ್ಮದೊಳ್ ನಡೆವನಲ್ಲಮದಱಿಂದೆನ್ನ ಮಿತ್ರತ್ವಮಂ ಕೈಕೊಳ್ವುದುಚಿತಮದೆಂತೆಂದೊಡೆ, ಕೇಳೆಂದು ಲಘುಪತನಕಂ ಪೇೞ್ದಂ:—

ಶ್ಲೋ॥ "ಕರ್ತವ್ಯಾನಿ ಚ ಮಿತ್ರಾಣಿ ದುರ್ಬಲಾನಿ ಬಲಾನಿ ವಾ।
ಹಸ್ತಿಯೂಥಂ ವನೇ ಬದ್ಧಂ ಮೂಷಕೈಶ್ಚ ವಿಮುಚ್ಯತೇ॥" ೨೬

[ಟೀಕು—ಬಲಹೀನನಾಗಲಿ ಬಲವಂತನಾಗಲಿ ಮಿತ್ರನೇ ಬೇಕು ಅದಹೆಗೆಂದೊಡೆ:—ವನದಲ್ಲಿ ಕಟ್ಟಿದಾನೆಯನ್ನಿಲಿ ಬಿಟ್ಟಹಗೆ.]

ಎಂಬ ಕಥೆಯುಂ ಕೇಳ್ದಱಿವುದಿಲ್ಲಕ್ಕುಮೆನೆ—ಮೂಷಕನದೆಂತೆನೆ—ಲಘುಪತನಕಂ ಪೇೞ್ದಂ:—

### ೧. ವನದಲ್ಲಿ ಕಟ್ಟು ಬಿದ್ದಿರ್ದ ಆನೆಯಂ ಇಲಿ ಬಿಡಿಸಿದ ಕಥೆ.

ಒಂದು ಕಾಲದೊಳ್ ಸಕಲಮಹೀತಲದೊಳಕಾಲವೃಷ್ಟಿ ತಗುಳ್ದು ಅತಿಪ್ರಬಲಜಲಪ್ರವಾಹಂ ಬೆಳ್ಳಂಗೆಡೆದು ಪರಿತರ್ಪ ಪೆರ್ಬೊಳ್ಳದೊಳ್ ಪಿರಿದಪ್ಪ ತೆಪ್ಪದ ಮೇಲೆ ತೇಂಕುತ್ತುಂ ಪಲವಿಲಿಗಳ್ವೆರಸು ಚಕ್ಕನೆ ಬಲುದಲೆಯನೆಂಬ ಮೂಷಕಂ ಬರುತ್ತಿರ್ದು ವನಕರಿಗಳ್ ನೀರ್ಗೆ ಬರ್ಪುದಂ ಕಂಡು ಯೂಥಾಧಿಪಂಗಿಂತೆಂದುದು:—

ವನಗಜಯೂಥಾಧೀಶ್ವರ।
ಪೊನಲೊಳ್ ಪರಿಕರಸಮೇತಮಾಂ ಪೋದಪೆನಿಂ॥
ಬಿನೊಳಲ್ಲಿ ಕಾಯಲಾರ್ಪೊಡೆ।
ನಿನಗಾನುಪಕರಿಸಲಾರ್ಪೆನೊಂದವಸರದೊಳ್ ॥435

ಎಂದು ನುಡಿವ ಸರಮುನಾಕರೀಂದ್ರಂ ಕೇಳ್ದು ಮೂಷಕಂಗಳೇಱಿದ ತೆಪ್ಪಮಂ ತಡಿಗೆ ಸಾರ್ಚಲೊಡಂ ಮೂಷಕರಾಜಂ ಗಜರಾಜಂಗೆ ಪೊಡೆವಟ್ಟು—ನಿನಗೇನಾನುಮಧ್ವಾನಮಾದಾಗಳೆನ್ನಂ ನೆನೆಯೆಂದು ಪೇೞ್ದು ಪೋಪುದುಂ; ಕೆಲವು ದಿವಸಕ್ಕಾಗಜಂ ವಶಕ್ಕೆ ಕಂಭಕ್ಕೊಳಗಾಗಿ ಕಟ್ಟುವಟ್ಟು ತನ್ನಂ ನೆನೆಯಲೊಡಂ; ಮೂಷಕಂ ನಿಜಪರಿವಾರಪರಿವೃತನಾಗಿ ಬಂದು ಗಜಯೂಥನಾಥನ ಬಂಧನಮೋಕ್ಷಮಪ್ಪಂತು ಪಾಶಮಂ ಕಡಿಕಂಡಂಗೆಯ್ದು ಪ್ರತ್ಯುಪಕಾರಮಂ ಮಾಡಿ ಮಿತ್ರಗುಣಮಂ ಮೆಱೆದುದು. [೮

ಅದುಕಾರಣದೆಂದಾನುಂ ನಿನಗೇನಾನುಮೊಂದವಸರದೊಳುಪಕರಿಸಲಾರ್ಪೆನೆನ್ನನವಜ್ಞೆಗೆಯ್ವುದುಚಿತಮಲ್ಲೆಂತುಂ ಸಮಸ್ತಪುರುಷಾರ್ಥಕ್ಕೆಲ್ಲಂ ಮಿತ್ರನುತ್ತರಸಾಧಕನದಱಿಂದೆನಗೆ ಮಿತ್ರತ್ವಮನಿತ್ತೊಡಲ್ಲದೆ ಪೋಗೆನೆಂದು ಕಾಗೆ ಕಟ್ಬಾಯುಮಂ ನುಡಿಯೆ ಕೇಳ್ದು ಹಿರಣ್ಯರೋಮನಿಂತೆಂದಂ:—ನೀನಿನಿತು ಪರಿಚ್ಛೇದಂಗೆಯ್ದಿರೆಯುಂ ಪ್ರಾರ್ಥಿಸೆಯುಂ ಮಿತ್ರತ್ವಮನೀಯಲ್ವೇಡಿದೊಡಮಿನ್ನೆನ್ನ ಕೆಳೆಯುಂ ನನ್ನ ಪಗೆಯುಂ ನಿನ್ನದಾಗಿಯೆ ನೆಗೞಲ್ವೇೞ್ಕುಮೆನೆ; ವಾಯಸನಿದಲ್ತು ನೀನೇನಂ ಪೇೞ್ದೊಡಮದೆನಗೆ ಗುರುವಚನಮಾಗಿ ಕೈಕೊಂಡು ನಡೆವೆನೆನಲೊಡಂ; ಹಿರಣ್ಯರೋಮಂ ಬಿಲದಿಂ ಪೊಱಮಡಲೊಡಂ, ವಾಯಸಂ ರಾಗರಸಮಯನಾಗಿ ಪಣ್ಪಳಂಗಳಂ ಮುಂದಿಟ್ಟು ಪೊಡೆಮಡಲೊಡಂ, ಉಂದುರಂ ಸಂತುಷ್ಟನಾಗಿ ಪರಸ್ಪರಮಿತ್ರಪ್ರತಿಪತ್ತಿಯೆಲ್ಲಮಂ ನೆಱೆಯೆ ಮಾಡಿ ಪಿರಿದು ಪೊೞ್ತು ಸಂಭಾಷಣಂಗೆಯ್ದು ತದನಂತರಂ ತಂತಮ್ಮ ನಿವಾಸಂಗಳ್ಗೆ ಪೋಗಿ ಕೆಲವಾನುದಿವಸಕ್ಕೆ ಲಘುಪತನಕಂ ಹಿರಣ್ಯರೋಮನಿರ್ದಲ್ಲಿಗೆ ಬಂದಿಂತೆಂದುದು:—ಈಬನಂ ಲುಬ್ಧಕಜನಜನಿತೋಪದ್ರವಮಾಯ್ತಿನ್ನಿಲ್ಲಿರಬಾರದು; ನದೀತೀರದೊಳನೇಕಭೋಗಬಾರು

ಫಲಬಹಳಮಪ್ಪ ತರುವರಂಗಳೊಳವು, ಆನದಿಯ ಮಡುವಿನೊಳ್ ಮಂಥರಕನೆಂಬ ಕೂರ್ಮನಿರ್ಪುದದರ್ಕಮೆನಗಂ ಪಿರಿದುಂ ಮಿತ್ರತ್ವಮುಂಟಪ್ಪುದಱಿಂದಲ್ಲಿಗೆ ಪೋದಪ್ಪೆನೆಂದೊಡೆ; ಮೂಷಕನಿಂತೆಂದುದು:—ಕರವೊಳ್ಳಿತ್ತು ಈಮರದ ಗೊರವನಡುವೆ(?) ಯೊಳಕಾರಣದಿಂದಿಲ್ಲಿ ವಿರಕ್ತನಾಗಿರ್ದಪೆನೆನ್ನಂ ನಿನ್ನ ಪೋಪ ತಾಣಕ್ಕುಯ್, ನೀನೇಕಾಕಿಯಾಗಿ ಪೋಪುದುಚಿತಮಲ್ಲಮದೆಂತೆನೆ:— ೬]

ಶ್ಲೋ|| “ಏಕಪುಂಸಾ ನ ಗಂತವ್ಯಂ ಅಹಿನಾ ಕಾಕಕಾರಣಾತ್ |
ದಷ್ಟಸ್ಸಂಜೀವಿತೋ ವಿಪ್ರಃ ಕರ್ಕಟಸ್ಯ ಪ್ರಸಾದತಃ ||” ೨೧೩

[ಟೀಕು—ಒರ್ಬನೆ ಪುರುಷನೆಲ್ಲಿಗುಂ ಹೋಗಲಾಗದು; ಅದೆಕೆಗೆಂದೊಡೆ—ಕಾಗೆಯು ಏಡಿಯು ನಿಮಿತ್ತವಾಗಿ ಹಾವು ಕಚ್ಚಿದ ಬ್ರಾಹ್ಮಣನು ಮರಳಿಯೇಡಿಯಿಂದ ಜೀವಿಸಿದನು.]

ಎಂಬ ಕಥೆಯಂ ಕೇಳ್ದಱಿವುದಿಲ್ಲಕ್ಕುಮೆನೆ—ವಾಯಸನದೆಂತೆನೆ—ಹಿರಣ್ಯರೋಮಂ ಪೇೞ್ಗುಂ:— [೧೩

### ೨. ಬ್ರಾಹ್ಮಣನುಂ, ಏಡಿಯುಂ.

ವ|| ಚಂಪಾಪುರದೊಳೊರ್ವ ಪಾರ್ವಂ ತೀರ್ಥಯಾತ್ರಾನಿಮಿತ್ತಂ ಬರುತ್ತಿರ್ದೆಡೆಯೊಳ್ ಜಲವಿಕಳಮಾಗಿರ್ದ ಜಲಾಶಯದೊಳ್ ಶಿಶುಕುಳೀರಂ ನೀರಂ ಪಡೆಯದೆ ಮಲುಮಲನೆ ಮಱುಗುತ್ತಿರ್ದುದಂ ಕಂಡು ಕರುಣಿಸಿ ಗುಂಡಿಗೆಯೊಳಿಕ್ಕಿಕೊಂಡದನೆಲ್ಲಿಯುಂ ಬಿಡದೆ ರಕ್ಷಿಸುತ್ತುಂ ತೀರ್ಥಂಗಳೆಲ್ಲಮಂ ಮಿಂದು ಕುರುಕ್ಷೇತ್ರದೊಳ್ ಬರುತ್ತುಂ ಬೞಲ್ದು ಅರಣ್ಯದೊಳತಿಶೀತಳಚ್ಛಾಯೋಪೇತಮಪ್ಪ ಮರದಡಿಯೊಳ್ ಪಟ್ಟು ಗುಂಡಿಗೆಯಂ ಕೆಲದೊಳಿಟ್ಟು ಮಱೆದೊಱಗಿದಂ. [೨೧

ಆಮರದ ಮೇಲಿರ್ಪುದೊಂದು ವಾಯಸಂ ಕಂಡು ತದ್ವಿಟಪಿಕೋಟರಕುಟೀರಾಂತರದೊಳಿರ್ಪುದೊಂದು ಸರ್ಪಂ ತನಗೆ ಮಿತ್ರನಪ್ಪ ಕಾರಣದಿನದಱ ಸಮೀಪಕ್ಕೆಯ್ತಂದು—ಈಮರದೊಳ್ ಪಟ್ಟಿರ್ದ ಪಾರ್ವನ ಕಣ್ಣಂ ಬಯಸಿದೆನೆಂಬುದುಮಿದಾವಗಹನಂ ನಿನ್ನ ಬಯಕೆಯನೀಗಳೆ

ತೀರ್ಚುವೆನೆಂದು ಪಟ್ಟಿರ್ದ ಪಾರ್ವನಂ ಪಿಡಿವುದುಂ; ವಿಷಪ್ರಭಾವದಿಂ ದಾಕ್ಷಣದೊಳಾತಂ ಗತಜೀವಿತನಾಗಲೊಡಂ; ಕಾಗೆ ರಾಗಿಸಿ ಬಂದು ಪಾರ್ವನ ಮೇಲೆ ಪಾಯ್ವುದುಂ; ಕರ್ಕಟಕಂ ಕಂಡು ಕಾಗೆಯಿನಕಾರಣಮಾಗಿ ತನ್ನಾಳ್ದಂಗೆ ಮರಣಮಾದುದನಱಿದೇಗೆಯ್ಯಲುಮಱಿಯದೆ ಮಱುಗುತ್ತಿರ್ಪುದುಂ; ವಾಯಸಂ ಸ್ವಭಾವಚಪಲನಪ್ಪುದಱಿಂ ಕೆಲದೊಳಿರ್ದ ಗುಂಡಿಗೆಯ ನೀರಂ ಕಂಡಲ್ಲಿ ಮುಸುಡಂ ನೀಡುವುದುಂ; ಪಗೆ ದೊರೆಕೊಂಡುದೆಂದದಱ ಗಂಟಲಂ ಪಿಡಿದು ಬಿಡದಿರ್ಪುದುಂ; ಕಾಗೆ ಪೋಗಲ್ ಪಡೆಯದೆ ಕೂಗಿಡುವುದುಮಾಸರಮನುರಗಂ ಕೇಳ್ದು ಕಾಗೆಯ ಕಂಠಮಂ ಕತ್ತರಿಸುತ್ತಿರ್ದ ಕರ್ಕಟಮಂ ಕಂಡಿದೇನೆಂದು ಬೆಸಗೊಳ್ವುದುಂ; ಕರ್ಕಟನಿಂತೆಂದಂ:— [೧೦

ನೀನೆನ್ನಾಳ್ದನನೀರವಿ ।
ಸೂನುವ ಕಾರಣದೆ ಕೊಂದೆಯದಱಿಂದಂ ನೋ ॥
ಡಾನುಮಿದಂ ಕೊಂದಪೆನೆ ।
ತ್ತಾನುಂ ನೀನೆನ್ನ ಪತಿಯನೆತ್ತುವೊಡಿನ್ನುಂ ॥436
ಕೊಲ್ಲೆನೆನೆ ಪನ್ನಗಂ ತ । [೧೫
ಳ್ವಲ್ಲದೆ ವಿಪ್ರಂಗೆ ನಿರ್ವಿಷಂಗೆಯ್ಯಲೊಡಂ ॥
ಕೊಲ್ಲದೆ ವಾಯಸಮುಮನಂ ।
ತಲ್ಲಿ ಕುಳೀರಂ ಕೃತಜ್ಞಗುಣಗಂಭೀರಂ ॥437
ಅಂತು ಕುಳೀರನುಮಹಿಯುಮ ।
ನಂತಗುಣರ್ ಮಿತ್ರಕಾರ್ಯತತ್ಪರರಾದರ್ ॥ [೨೦
ತಂತಮ್ಮ ಮಿತ್ರರುಂ ತಾ ।
ವಿಂತು ಮಹಾಪುರುಷಚರಿತರಾದರ್ ನಿರುತಂ ॥438

ಅದುಕಾರಣದಿಂದೇಕಾಕಿಯಾಗಿ ಪೋಗದೆನ್ನುಮನುಯ್ಯೆನಲಂತೆಗೆಯ್ವೆನೆಂದು ಲಘುಪತನಕಂ ಹಿರಣ್ಯರೋಮನಂ ನೋಯಲೀಯದೆ

ಚಂಚೂಪುಟದಿಂದೌಂಕಿ ತಂದು ಮಂಥರನಿರ್ದ ಮಡುವಿನ ತಡಿಯೊೞರಿಸಿ ಬೞಿಕ್ಕೆ ಮಂಥರನಂ ಕರೆವುದುಂ; ಮಿತ್ರನ ಸರಮನಱಿದು ಜಲದಿಂ ಪೊಱಮಟ್ಟು ಕೂರ್ಮಂಗೆ ಕೂರ್ಮೆ ಕೈಗಣ್ಮೆ ಕಾಗೆಗಭ್ಯಾಗತಪ್ರತಿಪತ್ತಿಯೆಲ್ಲಮಂ ನೆಱೆಯೆ ಮಾಡಿ ತದನಂತರಂ ಕೆಲದೊಳಿರ್ದ ಇಲಿಯಂ ಕಂಡೀಮಹಾಪುರುಷಂ ನಿನ್ನನಗಲದಿರ್ಪ ಕಾರಣಮೇನೆಂದು ಕೇಳೆ, ಲಘುಪತನಕನಿಂತೆಂದಂ:— [೬

ಈಮೂಷಕನಪ್ಪೊಡೆ ಗುಣ ।
ಧಾಮಂ ನಾಮದೆ ಹಿರಣ್ಯರೋಮಂ ಪೆಱತೇಂ ॥
ಸಾಮಾನ್ಯನಲ್ಲದೇವೇ ।
ೞ್ದೀಮಾತೇನಱಿಸಿ ಕಾಣೆನಿನ್ನುಂ ಮುನ್ನುಂ ॥439 [೧೦
ಕೇವಲಜೀವಿಯುದಲ್ಲಿದು ।
ಭಾವಿಪೊಡೆ ಸುಹೃದ್ಗುಣಾನ್ವಿತಂ ಮಿಗೆ ಚಿತ್ರ ॥
ಗ್ರೀವನ ಸೆಱೆಯಂ ಬಿಡಿಸಿ[1]ದ ।
ನೇ[1]ವೊಗೞ್ದ*ಪೆನೀಸುವರ್ಣರೋಮನ ಗುಣಮಂ ॥440 [೧೪

ಇಂತಪ್ಪ ಮಹಾಪುರುಷನಪ್ಪುದಱಿಂದಾನುಮೀತನೊಳ್ ಮಿತ್ರತ್ವಮಂ ಪಡೆದೆಂ, ಈಗಳ್ನನಲ್ಲಿಗೆ ಬರುತುಮಿರ್ದು ತನಗೆ ಪೇೞ್ದೊಡೆನಗಿಲ್ಲಿ ಮನೋದುಃಖಂ ಪಿರಿದೆನ್ನುಮನುಯ್ಯೆಂಬುದುಂ ತಂದೆನೆಂಬುದುಮದನೆಲ್ಲಮಂ ಸವಿಸ್ತರಂ ಕೇಳ್ದು ಮಂಥರಂ ಹಿರಣ್ಯರೋಮನನೆಂದಂ:—ನಿನಗಲ್ಲಿ ಮನೋದುಃಖಮೇಂ ನಿಮಿತ್ತದಿನಾದುದೆನೆ; ಮೂಷಕನಿಂತೆಂದನಾಂ ಮುನ್ನಿನ ಭವದೊಳ್ ಗೊರವನಾಗಿ ಕಾಂಚೀಪುರದೊಳ್ ತಿಱಿದು ಪಲವು ಕಾಲಂ ಬನ್ನಂಬಟ್ಟು ಪೊನ್ನಂ ಪಡೆದೇತರ್ಕಂ ಕುಡದೆ ಮಡಗಿದೊಡೆನ್ನ ಶಿಷ್ಯಂ ಬಿಟ್ಟಕಣ್ಣನೆಂಬಂ ಗೊರವಂ—ನಿಮ್ಮಡಿ, ನಿಮಗೆ ಸಂಸಾರಂ ಸ್ವಸ್ಥಮಲ್ಲೀಯರ್ಥಮಂ ಮಡಂಗಿ ನಿರರ್ಥಕೆ ಕಿಡದೆ ಈಶ್ವರಾಯತನಮಂ ಮಾಡಿಸಿಮಲ್ಲದಿರ್ದೊಡನಾಥಜನಕ್ಕೇನಾನುಮಂ

ಪಾ—1. ದುದೇ. ಕ ॥

ದಾನಂಗುಡುವೆಂದೊಡಾನಿಂತೆಂದೆಂ:—ಎಂತಾನುಂ ಪಡೆದ ಧನಮನಸ ದ್ವ್ಯಯಂಗೆಯ್ದೊಡೆ ಬಡತನಮಕ್ಕುಂ; ಬಳಿಕ್ಕೇಗೆಯ್ವೆನೆಂದೊಡಾಗೊ ರವಂ ಮತ್ತಮಿಂತೆಂದಂ:—

ಬಡತನವಾದಂದಿಂಗೆಂ।
ದೊಡವೆಗಳಂ ಮಡಗಬೇಡದೆಂತೆನೆ ಪುಣ್ಯಂ॥ [೫
ಕಿಡೆ ಮಡಗಿದೊಡವೆ ಕಿಡುಗುಂ।
ಕಿಡದಲ್ತೆ ಪರಾರ್ಥಮಾಗಿ ಕೊಟ್ಟವರರ್ಥಂ ॥441

ಶ್ಲೋ॥ "ಧರ್ಮಾರ್ಥಂ ಕ್ಷೀಣಕೋಶಸ್ಯ ಕೃಶತ್ವಮತಿಶೋಭತೇ।
ಸುರೈಃ ಪೀತಾವಶೇಷಸ್ಯ ರೇಖಾ ಹಿಮಕರ-ಚೇರಿವ॥" ೨೦೯

[ಟೀಕು—ಧರ್ಮನಿಮಿತ್ತಮಾಗಿ ಧನಹೀನನಾದಾತಂಗೆ ಬಡತನವಾದೊಡಂ ಒಪ್ಪು ವನು; ಅದೆಹಗೆಂದೊಡೆ—ದೇವರ್ಕಳ್ ಪಾನಮಾಡಿ ಮಿಕ್ಕ ಚಂದ್ರನ ಕಳೆಯಾಹಗೆ]

ಎಂಬುದು ಯುಕ್ತಿಯುಂಟು. ಧನಮುಂ ಧರ್ಮನಿಮಿತ್ತಮಿತ್ತೊ ಡಾಬಡತನಮುಂ ತಪದಿಂ ಕ್ಷಪಿಯಿಸಿದ ಶರೀರಮುಂ ಲೋಕದೊಳ್ ಭೂಷಣಮಲ್ಲದೆಲ್ಲಿಯುಮಿಲ್ಲಂ ನೀವಿಂತು ಮೋಹಿತರಾದಂದು ಮೋ ಹಿತನಾದ ನರಿಯಂತಕ್ಕುಮೆಂಬುದುಮದೆಂತೆನೆ—ಬಿಟ್ಟಕಣ್ಣನಿಂತೆಂದು ಪೇಳ್ದಿಂ:— [೧೬

೩. ಅತಿಲೋಭಿಯಾದ ನರಿಯ ಕಥೆ.

ಬರ್ಪ ವನಚರಂ ಮಹಾವನದೊಳ್ ವನದಂತಿಯಂ ಕಂಡನಿ ಮಿತ್ತಂ ಕೊಂದು ನಿಂದಿರ್ಪಿನಮೊಂದು ಮಹಾಹಿ ತೊಟ್ಟಗೆ ಬರೆ ಪುಲು ವಟ್ಟೆಯೊಳ್ ತೊಲಗಲಿಂಬಿಲ್ಲದೆ ಬಿಲ್ಲಂ ಕೊಂಡು ವಿಷದೂಷಿತಮ ಪ್ಪಂಬಂ ತೊಟ್ಟಿಸುವುದುಂ; ನಟ್ಟಕೋಲ್ವೆರಸೆಚ್ಚ ಬೇಡನಂ ಬೇಗದಿಂ ದಜಗರಂ ಕೊಲ್ವುದುಂ; ತತ್ಕ್ಷಣದೊಳವಸುಮಹಿಯುಮಲ್ಲಿಯೆ ಬಿ ದ್ದು ಸಾವುದುಂ; ಮತ್ತಲ್ಲಿಗತಿಲೌಲ್ಯನೆಂಬುದೊಂದು ಜಂಬುಕಂ ಪಲವು ದಿವಸಮಾಹಾರಂಬಡೆಯದೆ ಅಡವಿಯೊಳಾಹಾರಕ್ಕೆ ತೊಳಲುತ್ತೆ ಬಂ

ದಾಶವತ್ರಯಮಂ ಕಂಡಾನಂದಮಯನಾಗಿ— ಇಂದಿವನಿಂದೆ ತಿಂದೆನಾ ದೊಡೆ ಮತ್ತಂ ಪಸಿದು ಸಾವಂತಕ್ಕುಮದಲ್ಲದೆಯುಂ

ಶ್ಲೋ|| "ಅನ್ಯಾಯಮವ್ಯಯಶೀಲಶ್ಚ ಹ್ಯನಾಥಕಲಹಪ್ರಿಯಃ |
ಆತುರಸ್ಸರ್ವಭಕ್ಷೀ ಚ ನರಶ್ಶೀಘ್ರಂ ವಿನಶ್ಯತಿ ||" ೨೧೯

[ಟೀಕು—ಆಯುವಿಲ್ಲದೆ ಬೀಯುವ ಮಾಡುವನುಂ, ಸಹಾಯವಿಲ್ಲದೆ ಕಲಹಪ್ರಿಯನಾಗಿಹವನುಂ, ಆತುರನಾಗಿ ಸರ್ವವಂ ಭಕ್ಷಿಸುವನುಂ ಶೀಘ್ರವಾಗಿ ಕಿಡುವರ್]

ಎಂಬೀನೀತಿಯುಂಟದುಮದಲ್ಲದೆ, [೭

ವಾಕ್ಯಂ|| "[1]ಸಂಗ್ರಹೀ ನೋ[1]ವಸೀದತಿ ||" ೨೨೦

ಎಂಬ ಸುಭಾಷಿತಮುಂಟದಱಿಂದೆನಗೆ ಸಂಗ್ರಹಮಾಗಿರ್ಕುಮನ್ನೆಗಮೇನಾನುಮಂ ತಿಂಬೆನೆಂದು ಕೆಲನಂ ನೋಡಿ ಶಬರಸಮೀಪದೊಳಿರ್ದ ಧನುವಂ ಕಂಡು, [೧೧

ಶ್ಲೋ|| "ಷಣ್ಮಾಸಂ ತು ಭವೇನ್ನಾಗಃ ಚಾತುರ್ಮಾಸಂ ತು ಪನ್ನಗಃ |
ದ್ವಿಮಾಸಂ ತು ನರಶ್ಚೈವ ಅದ್ಯ ಭಕ್ಷ್ಯೋ ಧನುರ್ಗುಣಃ ||" ೨೨೧

[ಟೀಕು—ಆನೆ ಆಱುತಿಂಗಳ ಗ್ರಾಸ, ಹೆಬ್ಬಾವು ನಾಲ್ಕು ತಿಂಗಳ ಗ್ರಾಸ, ಮನುಷ್ಯ ನೆರಡು ತಿಂಗಳ ಗ್ರಾಸ, ಈಗಿನ ವೇಳೆಗೆ ಬಿಲ್ಲಿನ ಹೆದೆಯೇ ಭಕ್ಷಿಸಲ್ತಕ್ಕುದು.]

ಅಂತು ಸಂವತ್ಸರಾಂತಗ್ರಾಸಮಂ ನೆಱೆದು ಕೊಂಡಿರ್ಪೆನೆಂದು ಇಂದಿಂಗೀಬಿಲ್ಲ ಹೆದೆಯೆ ಸಾಲ್ಗುಮೆಂದುಮದಂ ಕಡಿವುದುಮದು ಪರಿಯಲೊಡಂ, ಬಿಲ್ಲ ಕೊಪ್ಪು ತಾಳಿಗೆಯಂ ಚುರ್ಚಿ ನೆತ್ತಿಯೊಳ್ ಮೂಡುವುದುಮಾನರಿ ಬಿಱುವರಿದು ಸತ್ತುದು. [೨೯

ಅದಱಿಂದತಿಲೋಭಂ ಬೇಡೆಂದೆನಿತಾನುಂ ತೆಱದಿಂ ಬಿಟ್ಟಕಣ್ಣಂ ಬುದ್ಧಿವೇೞ್ದೊಡೆಂತುಂ ಕೈಕೊಳ್ಳದಾಪುರದ ಪೊಱವೊಲಲೊಳಗಿರ್ಪ ಮಠದೊಳ್ ಪೊನ್ನಂ ಪೂೞ್ದು ಪಲವುಕಾಲಮಿರ್ದು ಕುತ್ತಂಬಟ್ಟಾರ್ತಧ್ಯಾನದಿಂ ಸತ್ತು ಹಿರಣ್ಯವರ್ಣದ ಮೂಷಕನಾಗಿ ಪುಟ್ಟಿ ಮತ್ತಂ ಪೊನ್ನಂ ಕಾದಿರ್ದನಿರ್ಪುದುಂ ಎನ್ನಶಿಷ್ಯಂ ಬಿಟ್ಟಕಣ್ಣಂ ಪೊನ್ನಿರ್ದೆಡೆಯನಱಿಯದೊಡವಕುಟ್ಟುತ್ತುಂ ಮಠಮಂ ಪತ್ತುವಿಡದೆಪಿರಿಯ

ಟಿ—೨೨೦.—ಕೂಡಿಟ್ಟವನು ಬದುಕಿಕೊಳ್ಳುವನು.

ಪಾ—1. ಸಂಗ್ರಹಹೀನೋ. ಕ ||

ದೊಂದು ಕರಕೆಯ ಕೂಟಿಂ ತಂದು ತಾನೊಂದು ಭಾಗಮನುಂಡು ಮಿಕ್ಕುದಂ ಭಿಕ್ಷಾಪಾತ್ರದೊಳ್ ಕಟ್ಟಿದರ್ದುದನಾನುಂ ಪರಿಗ್ರಹಮುಮಾ ಕೂಟಿನನುದಿನಂ ತಿಂದು ನಿಶ್ಚಿಂತಮಿರುತ್ತಿರೆ; ಪಲವುಕಾಲಕ್ಕಲ್ಲಿಗೆ ಬೃಹಸ್ಪತಿಯೆಂಬ ಗೊರವಂ ಬರೆ ಬಿಟ್ಟಕಣ್ಣನಾತಂಗೆ ಪಟ್ಟಿರಲೆಡೆಗೊಟ್ಟು ಇರುಳಪ್ಪಾಗಳ್ ನಿಮ್ಮಡಿಗಳೆತ್ತಲ್ ಪೋಪಿರೆಂಬುದುಂ; ಬೃಹಸ್ಪತಿ ವಾಚಸ್ಪತಿಯಂತೆ ಸಮಸ್ತತೀರ್ಥಪ್ರಭಾವಂಗಳಂ ಪೇೞುತ್ತಿರಲದಂ ಬಿಟ್ಟಕಣ್ಣಂ ಸಾವಧಾನವಾಗಿ ಕೇಳ್ವುದರ್ಕೆ ಚಿತ್ತಪಲ್ಲಟವಾಗಿ ತನ್ನ ಮಡಗಿದ ಕೂಟಿಂ ನಾಂ ತಿಂಬುದನಱಿದು ಸುಯ್ಯುತ್ತಿರೆ; ಬೃಹಸ್ಪತಿ ತನ್ನ ಮಾತುಗಳನಾತಂ ಕಿವುಡುಗೇಳ್ವುದುಮಾಗೊರವಂ ಬಿಟ್ಟಕಣ್ಣಂಗಿಂತೆಂದಂ:— [೧೦

ಶ್ಲೋ|| ಅನಕ್ಷಿತಾ ಚ ಪ್ರಿಯಪೂರ್ವನಾಶನಂ ವಿವಾದನಂ ದುಃಶ್ಚರಿತಾನುಕೀರ್ತನಂ |
ಕಥಾಪ್ರಸಂಗೋ ನ ಚ ನಾಮ ವಿಸ್ಮಯೋ ವಿರಕ್ತಭಾವಸ್ಯ ಜನಸ್ಯಲಕ್ಷಣಂ ||

[ಟೀಕು—ನೋಡದೆಯಿರುಹವುಂ, ಪ್ರೀತಿಪೂರ್ವಕವಹಂತಹುದ ಕಿಡಿಸುವಹವುಂ, ವಿವಾದವಂ ಮಾಡುಹವುಂ, ನುಡಿಯದಿರುಹವುಂ, ವಿಸ್ಮಯವಿಲ್ಲದಿರುಹವುಂ, ಇಂತಿಹವು ಸ್ನೇಹವಿಲ್ಲದ ಜನದ ಲಕ್ಷಣವೆಂದಱಿವುದು.] [೧೫

ಎಂಬುಕ್ತಿಯುಂಟು. ತೀರ್ಥಂಗಳ ಪೆಸರಂ ಪೇೞೆ ಮೆಂದು ಬೆಸಗೊಳ್ವುದೆತ್ತಲೀಗಳಾಂ ಪೇೞುತಿರ್ದೆಡೆಯೊಳುದಾಸೀನಂಗೆಯ್ದು ಹೂಂಕೊಳದಿರ್ಪ ಕಾರಣಮೇನೆನೆ; ಬಿಟ್ಟಕಣ್ಣನಿಂತೆಂದಂ:—ಆಂ ಮಾತಂ ಕೇಳದಿರ್ದೆನಲ್ಲೆನದೆಂತೆಂದೊಡೆ—ಎನ್ನ ಭಿಕ್ಷದ ಕೂಟಿನೊಂದು ಮೂಷಕಂ ನಿಚ್ಚಲುಂ ಬಂದು ತಿಂದು ಕಾಡುತಿರ್ಪುದದಱ ಕಾಟಕ್ಕೆ ಮಠಮುಂ ಬಿಟ್ಟು ಪೋಪ ಚಿತ್ತವಾಗಿ ಚಿಂತಿಸುತ್ತಿರ್ದೆನೆನೆ; ಬೃಹಸ್ಪತಿ ನಕ್ಕು "ಕೆರೆಗೆ ಮುನಿದು ಮಂಡೂಕಂ ಪೊಱಗಿರ್ದುದು." ಎಂಬಂತೆ ಇಲಿಯ ಕಾಟಕ್ಕಾಱದೆ ಮಠಮುಂ ಬಿಸುಟು ಪೋಗಲೇಂ, ಬಂದು ಬೆಕ್ಕಂ ತಂದಿಟ್ಟೊಡದರ್ಕೆ ತಕ್ಕ ಪ್ರತೀಕಾರಮನದು ಮಾಳ್ಪುದೆಂದೊಡಾಮೂಷಕಂ ಬೆಕ್ಕಿ

ಗಳವಲ್ತು, ನೋಡೆ ಪೊನ್ನಬಣ್ಣದ ಮೆಯ್ನವಿರುಂ ಗುರುಗುಂಜಿಯ ಬಣ್ಣದಂತಿರ್ಪ ಕಣ್ಣುಂ ಕೊಣಕೋಲಂತಪ್ಪ ಬಾಲಮುಂಬೆರಸು ಬಿಲದೊಳ್ ಪೊಕ್ಕು ಪುಲಿಯಂತೆ ಗರ್ಜಿಸುತ್ತುಮಿರ್ಪುದೇಗೆಯ್ವೆನೆಂದೊಡೆ; ಬೃಹಸ್ಪತಿಯಿಂತೆಂದಂ:—ಅಂತಪ್ಪೊಡದು ಕಪ್ಪೆಯ ಕಥೆಯಂತಾಗದಿರದೆನೆ—ಬಿಟ್ಟಕಣ್ಣನದೆಂತೆನೆ — ಬೃಹಸ್ಪತಿ ಪೇೞ್ಗುಂ:— [೫

## ೪. ಕಪ್ಪೆಯ ಕಥೆ.

ಅವಂತೀದೇಶದೊಳ್ ಕಾಂಚೀಪುರಮೆಂಬ ಪೊೞಲುಂಟದೆಂತೆನೆ:—

ಕರಮೊಪ್ಪುವ ಪೂಗೊಳದಿಂ।
ಪಿರಿದೊಪ್ಪುವ ದೇವಕುಳದಿನೆಸೆವಂಗಡಿಯಿಂ॥
ನೆರೆದೊಪ್ಪುವ ಜನಪಥದಿಂ। [೧೦
ಸುರಪುರದವೊಲಿರ್ಪ ಕಾಂಚಿಪುರವರಮೆಸಗುಂ ॥442

ಮತ್ತಮಾಪುರಪ್ರಾಂತದೊಳ್

ನೆಱೆದಿರ್ದೇರಿಯ ನೇರಿತಪ್ಪೆಡೆಗಳೊಳ್ ನೇರ್ಪಟ್ಟು ಶೋಭಾವಹ।
ಕ್ಕೆಱೆವಟ್ಟುಜ್ಜ್ವಲಮಪ್ಪ ದೇವಕುಳದಿಂದಚ್ಛಾಂಬುವಿಂದಂಬುಜ ॥
ಕ್ಕೆಱೆಗುತ್ತಿರ್ಪಳಿಮಾಲೆಯಿಂ ಖಗಗಣೋದ್ಯಲ್ಲೀಲೆಯಿಂದೆತ್ತಮಾ ।
ಕೆಱೆ ರಯ್ಯಂ ನೆಱೆ ನೋಱ್ಪೊಡಾವ ತೆಱದಿಂ ಕಾಂಚೀಪುರೋಭಾಗದೊಳ್ ॥443

ವ॥ ಅಂತೊಪ್ಪುವ ಕೆಱೆಯೊಳ್ ಪಲವುಂ ಕಪ್ಪೆಗಳ್ ಟರಟರೆಂಬ ಶಬ್ದದೊಳ್ ಕರೆಯುತ್ತಮಿರ್ಪುದುವೊಂದು ಪಿರಿದಪ್ಪ ಕಲ್ಲನೇಱಿರ್ದಲ್ಲಿಂ ತೊಲಗದೆ ಟರಟರೆಂದು ಕರೆಯುತ್ತಿರ್ಪುದನದೊರ್ವ ಪಾರ್ವಂ ಕೆಲವು ದಿವಸಂ ಕೇಳುತ್ತುಮಿರ್ದುಮಿದೇನೆಂದು ವಿಸ್ಮಯಂಬಟ್ಟುಮದಂ ನೋಡಲೆಂದು ಬರ್ಪುದುಮಾತನ ಬರವಂ ಕಂಡು ಕೆಲದ ದರ್ದುರಂಗಳೆಲ್ಲಂ ಪರೆದೋಡೆಯವಱೊಳಗೊಂದು ಸ್ಥೂಲದರ್ದು

ರಂ ತನ್ನಿರ್ದೆಡೆಯಿಂದೇಗೆಯ್ದುಂ ಪೋಗದಿರಲಿದೇನಾನುಮೊಂದು ಚೋದ್ಯಮಾಗಲೆವೇೞ್ಕುಮೆಂದಾಪಾರ್ವನಾಕಪ್ಪೆಯ ಕಾಲಂ ಪಿಡಿದೀಡಾಡಿ ಕಳೆದು ಬಱಿಕ್ಕೆ ಕಲ್ಲಂ ನೂಂಕಿಯದಱ ಕೆಳಗಿರ್ದ ಪೊನ್ನಂ ಕೊಂಡು ಪೋದಂ. [೪

ಅದಱಿಂತೇನಾನುಮೊಂದು ಕಾರ್ಯಮಾಗಲೆವೇೞ್ಕುಮೆಂದಾಗೊರವರುಮೆನ್ನ ಮಡಗಿರ್ದ ಪೊನ್ನಂ ಕೊಂಡು ಪೋದರ್. ಮತ್ತಮಾಯೆಡೆಯಂ ಪತ್ತುವಿಡಲಾಱದಲ್ಲಿಯೆ ಪರಿಭವಂಬಟ್ಟು ಚಿಂತಿಸುತ್ತಿರ್ದೆನ್ನಂ ಕಂಡೀತನೇತರ್ಕಂ ಕ್ಷಮನಲ್ಲವೆಂದೆನ್ನ ಪರಿಗ್ರಹಂ ಪರೆದು ಪೋದುವು. ಆಂ ಬಱಿಕ್ಕೆ,

ಶ್ಲೋ || „ಅಜ್ಞಾತಂ ಜೀವಿತಂ ಶೂನ್ಯಂ ದೇಶಶ್ಶೂನ್ಯೋಹ್ಯಬಾಂಧವಃ | [೧೦
ಅಪುತ್ರಸ್ಯ ಗೃಹಂ ಶೂನ್ಯಂ ಸರ್ವಶೂನ್ಯಾ ದರಿದ್ರತಾ || " ೨೨೩

[ಟೀಕೆ:—ಅಱಿವಿಲ್ಲದೊಡೆ ಜೀವಿತವೂ, ಬಂಧುಗಳಿಲ್ಲದ ದೇಶವೂ, ಮಕ್ಕಳಿಲ್ಲದ ಮನೆಯೂ, ಬಡತನವಾಗಿಹವೂ ಪ್ರಯೋಜನವಿಲ್ಲವೆಂದಱಿವುದು.]

ಎಂಬ ಶ್ಲೋಕಾರ್ಥಮೆನ್ನೊಳ್ ಸನ್ನಿದವಾದುದದು ಕಾರಣದಿಂದರ್ಥಮಂ ಕೋಳ್ಪಟ್ಟು ಬಂದೆನೆಂದು ಪೇೞ್ವುದುಂ; ಸುವರ್ಣರೋಮನ ಮಾತೆಲ್ಲಮಂ ಕಚ್ಛಪಂ ಕೇಳ್ದಿಂತೆಂದುದು:— [೧೬

ಪಡೆದುಣ್ಣದುಡದೆ ದಾನಂ |
ಗುಡದತಿಲೋಭದೊಳಮೆಯ್ದೆ ಮನುಜರ್ ಧನಮಂ ||
ಮಡಗಿಟ್ಟು ಕೆಟ್ಟರಂ ಕೇ |
ಳ್ವೊಡವರ್ಗೇನೊಂದು ತೆಱದಿನದು ವಿಧಿವಿಹಿತಂ ||444

ಅದಱಿಂ ನಿನ್ನರ್ಥದೊಳಾದಱಿಲಂ ಪತ್ತುವಿಟ್ಟು ಪರಿಣಮಿಸಿಪ್ಪುದದೆಂತೆನೆ — [೨೨

ಶ್ಲೋ || „ಉದಯೇ ಸವಿತಾ ರಕ್ತೋ ರಕ್ತಶ್ಚಾಸ್ತಮಯೇ ತಥಾ |
ಸಂಪತ್ತೌ ಚ ವಿಪತ್ತೌ ಚ ಮಹತಾಮೇಕರೂಪತಾ || " ೨೨೪

[ಟೀಕು—ಮಹಾಪುರುಷರ ಸಂಪತ್ತನೂ ವಿಪತ್ತನೂ ಸಮವಾಗಿ ಕಾಣ್ಬರ್. ಅದು ಹೇಗೆಂದೊಡೆ: ಸೂರ್ಯನು ಉದಯಾಸ್ತಮಯಕಾಲಗಳಲ್ಲಿ ಒಂದೇ ಮರ್ಯಾದೆ ಕೆಂಪು ಕಾಂದದ ಹಾಂಗೆ. ]

ಎಂದಱಿವುದೆಂದುಮದಲ್ಲದೆಯುಂ,

ಶ್ಲೋ || "ಮೃತಂ ವಾ ಯದಿ ವಾ ನಷ್ಟಂ ಯೋಽತೀತಮನುಶೋಚತಿ |
ದುಃಖಾದ್ದುಃಖಮವಾಪ್ನೋತಿ ದ್ವಾವನರ್ಥೌ ಪ್ರಪದ್ಯತೇ ||" ೨೦೫

[ಟೀಕು—ಆವನಾನೊರ್ವಂ ಮುನ್ನ ಸತ್ತವರನಾದೊಡಂ ಮುನ್ನ ಕೆಟ್ಟವರನಾದೊಡಂ ಶೋಕಿಸಿಹನು, ಅವನು ಮರಳಿ ದುಃಖವನೆಯ್ದುವನು; ಆತಂಗೆಂದುಂ ಸುಖವಿಲ್ಲ.]

ಎಂಬೀಶ್ಲೋಕಾರ್ಥಮುಂ ಬಗೆವುದು. ಮತ್ತಂ ಪರಿಗ್ರಹಮುಂ ಪತ್ತುವಿಟ್ಟು ಪೋಪುದುಮದೆಲ್ಲಿಯುಮುಂಟದೆಂತೆನೆ:—

ಶ್ಲೋ || "ವೃಕ್ಷಂ ಕ್ಷೀಣಫಲಂ ತ್ಯಜಂತಿ ವಿಹಗಾ ದಗ್ಧಂ ವನಂ ಶ್ವಾಪದಾಃ |
ಮಾಲಾಂ ಪರ್ಯುಷಿತಾಂ ತ್ಯಜಂತ್ಯಳಿಗಣಾಃ ಶುಷ್ಕಂ ಸರಸ್ಸಾರಸಾಃ ||
ನಿರ್ದ್ರವ್ಯಂ ಪುರುಷಂ ತ್ಯಜಂತಿ ಗಣಿಕಾಃ ದುಷ್ಟಂ ನೃಪಂ ಮಂತ್ರಿಣಃ |
ಸರ್ವಃ ಕಾರ್ಯವಶಾಜ್ಜನೋಽನುರಮತೇ ಕಃ ಕಸ್ಯ ಕೋವಲ್ಲಭಃ ||" ೨೦೬

[ಟೀಕು—ಫಲಹೀನವಾದ ವೃಕ್ಷವನು ಪಕ್ಷಿಗಳ್ ಬಿಡುವುವು; ಬೆಂದಡವಿಯನು ಮೃಗಂಗಳ್ ಬಿಸುವುವು; ಬಾಡಿದ ಪುಷ್ಪಂಗಳನು ತುಂಬಿಗಳ್ ಬಿಡುವುವು; ಬತ್ತಿದ ಕೆಱೆಯನು ಹಂಸೆಗಳ್ ಬಿಸುವುವು; ಧನವಿಲ್ಲದ ಪುರುಷನನು ಗಣಿಕೆಯರು ಬಿಡುವರು; ದುಷ್ಟನಹ ಒಡೆಯನನು ಮಂತ್ರಿಗಳ್ ಬಿಡುವರು; ಎಲ್ಲರೂ ಕಾರ್ಯವಶದಿಂದಿಹರಲ್ಲದೆ ಆರಿಗಾರೂ ಪ್ರಿಯರಲ್ಲ. ]

ಎಂಬೀಶ್ಲೋಕಾರ್ಥದಂತೆ ಸ್ವಾರ್ಥಪರರಲ್ಲದೆ ಪರಾರ್ಥಪರರಾರುಮಿಲ್ಲ, ಆವ ಜೀವಕ್ಕಮಾಪತ್ತಿನೊಳ್ ತನಗೆ ತಾನಲ್ಲದೆ ಆರುಮಿಲ್ಲೆಂಬುದು ನಿಶ್ಚಯಮೆಂದಱಿವುದು; ಅದಂತಿರ್ಕೆ; ನೀಂ ನಿನ್ನ ನೆಲೆಯಂ ಪತ್ತುವಿಟ್ಟು ಬಂದೆನೆಂಬುಬ್ಬೆಗಂ ಬೇಡದೆಂತೆನೆ:—

ಶ್ಲೋ || "ಕೋಽತಿಭಾರಸ್ಸಮರ್ಥಾನಾಂ ಕಿಂ ದೂರಂ ವ್ಯವಸಾಯಿನಾಂ |
ಕೋ ವಿದೇಶ ಸ್ಸಮರ್ಥಾನಾಂ ಕಃ ಪರಃ ಪ್ರಿಯವಾದಿನಾಂ ||" ೨೦೭

[ಟೀಕು—ಸಮರ್ಥನಹ ಪುರುಷಂಗೆ ಆವುದೂ ಅರಿದಲ್ಲ; ವ್ಯವಸಾಯಶೀಲಂಗೆ ದೂರವೆಂಬುದಿಲ್ಲ; ವಿದ್ವಾಂಸಂಗೆಲ್ಲಾ ದೇಶವೂ ತನ್ನದು; ಪ್ರಿಯವ ನುಡಿಯಬಲ್ಲವಂಗೆ ಎಲ್ಲವರೂ ತನ್ನವರು. ]

ಎಂಬುಕ್ತಿಗಳೊಳವು. ಅದಱಿಂ ಲಘುಪತನಕನೊಡನಿಲ್ಲಿಗೆ ಬಂದು ಕರಮೊಳ್ಳಿತ್ತುಗೆಯ್ದೆ; ನಾವೆಲ್ಲಮೊಂದೆಡೆಯೊಳಿರೆ ತೀರದುದಿಲ್ಲ; ನಿಶ್ಚಿಂತಮಿರೆಂದು ಕೂರ್ಮಂ ಕೂರ್ಮೆಯಪ್ಪ ಮಾತುಗಳಂ ನುಡಿದು ಹಿರಣ್ಯರೋಮನ ಮನದೊಳಾದ ವಿಷಾದಮಂ ಕಳೆಯೆ, ವಾಯಸನದರ್ಕೆ ಸಂತಸಂಬಟ್ಟು ಬೞಿಕ್ಕೆ ಕಚ್ಛಪಮೂಷಕಕಾಕಂಗಳೊಂದಾಗಿ ಪಲಕಾಲಂ ಸುಖದಿನಿರ್ದೊಂದು ದಿವಸಮಾಮಿತ್ರತ್ರಯಂ ಮಡುವಿನ ತಡಿಯೊಳೇನಾನುಮಂ ನುಡಿಯುತ್ತಿರ್ಪಿನಂ; ಅಲ್ಲಿಗೆ ಚಿತ್ರಾಂಗನೆಂಬ ಸಾರಂಗಂ ಭೋರೆನೆ ಬಂದು ನೀರಂ ಕುಡಿಯಲಣ್ಮದೆ ಪೆಪ್ಪಳಿಸಿ ಪೆಱಗಂ ನೋಡಿ ನಡುಗುತ್ತುಂ ನಿಂದುದಂ ಕಚ್ಛಪಾದಿಗಳ್ ಕಂಡುಮಿದೇಂ ಕಾರಣಮೆಂದು ತಮ್ಮೊಳ್ ನುಡಿವಲ್ಲಿ; ವಾಯಸನದಱ ಚೇಷ್ಟೆಯನಱಿದಾರಾನುಂ ಬೆನ್ನಟ್ಟಿ ಬರೆ ಭಯಾಕುಲನಾದುದೆಂದಗಲ್ದು ನಾಲ್ಕುಂ ದೆಸೆಯನಾರೈದಾರಾನುಮಂ ಕಾಣದೆ ಬೞಿಕ್ಕಂ ಸಾರಂಗಕ್ಕೆಂದುದೇಂ ಗಡಾ! ನೀನಿಂತೇಕೆ ಭಯಾಕುಲನಾಗಿರ್ಪೆ ಎನೆ; ಚಿತ್ರಾಂಗನಿಂತೆಂದಂ:—ಇಂದು ನೇಸಮರ್ಡುವುದುಂ ಬೇಡರೆನ್ನಂ ತಗುಳ್ದು ಬೆನ್ನಂ ಬಿಡದಟ್ಟುತ್ತುಂ ಬರೆ ಬೞಲ್ದು ನೀರ್ಗಾಸೆವಟ್ಟು ಬಂದೆನೆಂದು ಪೇೞ್ವುದುಮದೆಲ್ಲಮಂ ಕೇಳ್ದು ಕಾಕನಿಲ್ಲಿ ಭಯಮಿಲ್ಲ ನೀನಿಲ್ಲಿ ನಿರಾಕುಳಂ ನೀರ್ಗುಡಿಯೆನೆ; ಸಾರಂಗಂ ನೀರಂ ಕುಡಿದು ಬೞಿಕ್ಕವಱ ಸಮೀಪಕ್ಕೆ ಬಂದಿಂತೆಂದುದು:—

ಶ್ಲೋ|| "ಜನಿತಾ ಚೋಪನೇತಾ ಚ ಯಶ್ಚ ವಿದ್ಯಾಂ ಪ್ರಯಚ್ಛತಿ |
ಅನ್ನದಾತಾ ಭಯತ್ರಾತಾ ಪಂಚೈತೇ ಪಿತರ ಸ್ಸ್ಮೃತಾಃ ||" ೨೦೮

[ಟೀಕು—ಪುಟ್ಟಿಸಿದವನುಂ, ಉಪನಯನವ ಮಾಡಿದವನುಂ, ವಿದ್ಯೆಯನಱಿಪಿದವನುಂ, ಅನ್ನವನಿಕ್ಕಿದವನುಂ, ಭಯದಲ್ಲಿ ರಕ್ಷಿಸಿದವನುಂ ಇಂತೈವರುಂ ತಂದೆಗಳೆಂದಱಿವುದು.]

ಎಂಬ ನೀತಿಶಾಸ್ತ್ರಾರ್ಥಮುಂಟು. ನೀಮೆನಗೆ ನಯಮಂ ನುಡಿದು ಭಯಮಂ ಕಳೆದೆನಗೆ ನೀವೇ ಗುರುಸ್ಥಾನಮುಂ ಪರಮಮಿತ್ರರುಮಾ

ದಿರ್; ನಿಮ್ಮನಗಲ್ದು ಪೋಗೆನೆಂಬುದುಂ; ಕಾಕಮೂಷಕಕಚ್ಛಪಂಗಳಾಲೋಚನಂಗೆಯ್ದು ಬಱಿಕ್ಕಿಂತೆಂದುವು:—

ಶ್ಲೋ|| "ದಾರಸಂಪತ್ತಿಸಂಬದ್ಧಾ ತಥಾ ವಂಶಕ್ರಮಾಗತಃ |
ರಕ್ಷಿತೋ ವ್ಯಸನೇಭ್ಯಶ್ಚ ಮಿತ್ರಂ ಜ್ಞೇಯಂ ಚತುರ್ವಿಧಂ ||" ೨೯

[ಟೀಕು—ಪೆಂಡತಿಯು ಸೋದರನವನುಂ, ಐಶ್ವರ್ಯದ ಹೊದ್ದಿಗೆಯವನುಂ, ಪೂರ್ವತೊಡಗಿ ಬಂದವನುಂ, ವ್ಯಸನದಲ್ಲಿ ರಕ್ಷಿಸಿದವನುಂ—ಇಂತೀನಾಲ್ವರುಂ ಮಿತ್ರರೆಂದಱಿವುದು.]

ಎಂಬ ನೀತಿಶಾಸ್ತ್ರಾಭಿಪ್ರಾಯದೊಳೀತಂ ವ್ಯಸನದೆಡೆಯೊಳ್ ರಕ್ಷಿಸಿಕೊಳಲ್ಪಟ್ಟನಪ್ಪುದಱಿಂ ಮಿತ್ರತ್ವಕ್ಕೆ ತಕ್ಕುದು, ಸಾಧುಮೃಗಂ, ಯೋಗ್ಯಸ್ಥಾನಮೆಂದು ಮಿತ್ರತ್ವಮಂ ಮಾಡಿ ಮಿತ್ರಚತುಷ್ಟಯಂ ಕೆಲವು ಕಾಲಂ ಸುಖದೊಳಿರ್ದೊಂದು ದಿವಸಂ ಚಿತ್ರಾಂಗನಾಹಾರಾರ್ಥಮಡವಿಯೊಳ್ ಪೋಗಿ ತೊೞಲುತ್ತುಂ ವ್ಯಾಧರೊಡ್ಡಿದ ಬಲೆಯೊಳ್ ಸಿಲ್ಕಿರ್ದುದಂ ಲಘುಪತನಕಂ ಕಂಡು ಕಚ್ಛಪಹಿರಣ್ಯರೋಮಂಗಳ್ಗಱಿಪಿದೊಡವೆರಡುಂ ಕಾಗೆಯ ಪಿಂತನೆ ಬೇಗಂ ಬಂದು ಪಾಶಬದ್ಧನಾಗಿರ್ದ ಚಿತ್ರಾಂಗನಂ ಕಂಡಿಂತೆಂದುವು:—ನೀನಪ್ಪೊಡೆ ಬುದ್ಧಿವಂತಂ, ಇಂತಪ್ಪೆಡೆಗೆಂತು ಬಂದು ಸಿಲ್ಕಿದೆಯೆಂದೊಡೆ ಚಿತ್ರಾಂಗನಿಂತೆಂದಂ:—

ಶ್ಲೋ|| "ಪೌಲಸ್ತ್ಯಃ ಕಥಮನ್ಯದಾರಹರಣೇ ದೋಷಂ ನ ವಿಜ್ಞಾತವಾನ್ |
ಕಾಕುತ್ಸ್ಥೇನ ನ ಹೇಮಕಾಂತಿಹರಿಣಸ್ಯಾಸಂಭವೋ ಲಕ್ಷಿತಃ ||
ಅಕ್ಷಾಣಾಂ ನ ಯುಧಿಷ್ಠಿರೇಣ ವಿಷಮೋ ದೃಷ್ಟೋ ವಿಪಾಕಃ ಕಥಂ |
ಪ್ರತ್ಯಾಸನ್ನವಿಪತ್ತಿಮೂಢಮನಸಾಂ ಪ್ರಾಯೋ ಮತಿಃ ಕ್ಷೀಯತೇ ||" ೩೦

[ಟೀಕು—ರಾವಣಂ ಸೀತೆಯನುಯ್ವಲ್ಲಿ ದೋಷವೆಂಬುದನಱಿದುದಿಲ್ಲ; ಶ್ರೀರಾಮಂ ಮಾಯಾಮೃಗವನೆಸುವಲ್ಲಿ ಕೃತಕಮೃಗವೆಂದಱಿದುದಿಲ್ಲ; ಧರ್ಮಸುತಂ ದ್ಯೂತದಲ್ಲಿ ತನಗೆ ಕೇಡೆಂಬುದನಱಿದುದಿಲ್ಲ; ವಿಪತ್ತು ಬಹ ಕಾಲಕ್ಕಂತವರುಂ ಮತಿಗಿಡುವರ್.]

ಅದಲ್ಲದೆಯುಂ,

ಮುನ್ನಿನ ಜನ್ಮದೊಳೇನೊಂ |
ದನ್ನೆರಪಿದನದನೆ ಭೋಗಿಸಲ್ ಪುಟ್ಟುವನಾ ||

ತ್ಮನ್ನಿರುತಮುದಱಿನಿಂತಿದ ।
ನೆನ್ನನುಮುಪಹರಿಸಲಱಿಯನಿನ್ನೆನ್ನಳವೇ ॥445

ವ॥ ಎಂದು ಸಾರಂಗಂ ಸಂಸಾರಸ್ವರೂಪನಿರೂಪಣಂಗೆಯ್ದಾಬಲೆಯನೆಱೆಡ್ಡಿದವ್ಯಾಧಂ ಬಾರದನ್ನೆಗಮೆನ್ನ ಬಂಧನಮಂ ಮೋಕ್ಷಂಗೆಯಿಮೆನೆ; ಹಿರಣ್ಯರೋಮಂ ಪಾಶಮಂ ಪಱಿಯೆ ಕಡಿವುದುಮಾಸಮಯಕಾಲುಬ್ಧಕಂಬರ್ಪುದುಮವನಂ ಕಂಡು ಕಾಗೆ ಮರದ ಮೇಗಣ್ಗೆ ಪೋದುದು, ಇಲಿಯುಂ ಕೆಲದೊಳಿರ್ದ ಬಿಲನಂ ಪೊಕ್ಕುದು, ಮೃಗವೋಡಿ ಪೋದುದು, ಕಚ್ಛಪಂ ಪೋಗಲಿಂಬಿಲ್ಲದೆ ಸಂಕುಚಿತಮಾಗಿರ್ಪುದುಮಾವ್ಯಾಧಂ ಬಂದು ಕಂಡು ಖಂಡಮಾಗಿರ್ದ ಬಲೆಯುಂ ಕಂಡು ಬೆಱಗಾಗಿ ಪೆಱತೇನುಮಂ ಕಾಣದೆ ಕೆಲದೊಳಿರ್ದ ಕಚ್ಛಪನಂ ಕಂಡುಮಿದನಾದೊಡಮುಯ್ವೆನೆಂದು ಕೊಂಡು ಪೋದಂ. [೧೧

ಇತ್ತ ಚಿತ್ರಾಂಗನುಂ ಲಘುಪತನಕನುಂ ಹಿರಣ್ಯರೋಮನುಮೊಂದೆಡೆಗೆ ಬಂದು ಮಂಥರನಂ ವ್ಯಾಧನುಯ್ದನೆಂದು ಮಿತ್ರವಿಯೋಗದಿಂ ಕಿಱಿದುಂ ಬೇಗಂ ದುಃಖಿತರಾಗಿರ್ದೆಗೆಯ್ವೆಮೆನೆ; ಚಿತ್ರಾಂಗನಿಂತೆಂದಂ:—

ಆಂ ಕಾರಣಮಾಗಿರೆ ನಿ ।
ಶ್ಯಂಕಮನಂ ಬಂದು ಸಿಲ್ಕಿದಂ ಕೆಳೆಯುಂ ಪೋ ॥
ಗಿಂ ಕೂರ್ಮನಾದುದಾಗದೊ । [೧೮
ಡಾಂ ಕಷ್ಟನೆಅದಱಿನಾತನಾದುದನಪ್ಪೆಂ ॥ 446

ಎನೆ; ಹಿರಣ್ಯರೋಮಂ ನಿನಗಿದುವೆ ತಕ್ಕುದಾದೊಡಮೇನಿಲ್ಲಿಗುಪಾಯಮಂ ನಾಂ ಬಲ್ಲೆಂ; ಲಘುಪತನಕನುಂ ನೀನುಂ ವ್ಯಾಧನಿಂ ಮುನ್ನಮೆ ಮುಂದೆ ಪೋಗಿ ತೊಱೆಯ ತಡಿಯೊಳ್ ನೀಂ ಕೃತಕಮೃತನಾಗಿರ್ಪುದು, ನಿನ್ನ ಮೇಲೆ ಲಘುಪತನಕಂ ಪಾಯ್ದಾಡುತ್ತುಮಿರೆ; ನಿಮ್ಮನಾವ್ಯಾಧಂ ಕಂಡು ಮಂಥರನನೀಡಾಡಿ ಪರಿತರ್ಪನಾಗಳೆ ಲಘುಪತನಕಂ ಪೋಗಿ ಮಂಥರನಂ ನೀರಂ ಪುಗಲ್ವೇೞ್ದು ನೀನುಮವಂಗೆ

ದೂರವಾಗಿ ಪೋಪುದೆನೆ; ವಾಯಸನಿದು ಕಜ್ಜಮೆಂದೆರಡುಂ ಪೊಱೆಗೆ ಸಮೀಪವಾಗಿ ಪೋಗಿ ಸಮುಕಟ್ಟಬಂದಂದದೊಳ್ ಪಟ್ಟಿರ್ಪುದು ಮಾಲುಬ್ಧಕಂ ಕಂಡಿದೊಂದು ಮೃಗಂ ಸತ್ತಿರ್ದುದೆಂದತಿಲುಬ್ಧಮನಸ್ಕನಾಗಿ ರಾಗಿಸಿ ಬಲೆಯುಮಂ ಮಂಥರನುಮಂ ನೆಲಕ್ಕಿೞಿಪಿ ಪೋಪುದುಮಾತನ ಬರವಂ ಕಂಡು ಕಾಕಂ ಕಚ್ಛಪನಲ್ಲಿಗೆ ವಂದು ಬೇಗಂ ಮಡುವಿಂಗೆ ಪುಗೆಂಬುದುಂ; ಅಂತೆಗೆಯ್ವೆನೆಂದುಮದು ಕಡುವೇಗಂ ಮಡುವಂ ಪೊಕ್ಕುದು. ಇತ್ತಂ ಚಿತ್ರಾಂಗನುಮೆದ್ದೋಡಿ ಪೋಯ್ತು. ಅದೆಲ್ಲಮನಾಕಿರಾತಂ ಕಂಡಿದೇನಾನುಮೊಂದುತ್ಪಾತಮಾಗಲೆವೇೞ್ಕುಮೆಂದು ಭೀತನಾಗಿ ಬಲೆಯಂ ಬಿಸುಟು ಕರುಳ್ ಪಱಿಯಲೋಡಿದಂ. ಲಘುಪತನಕಂ ಹಿರಣ್ಯರೋಮನನೊಡಗೊಂಡು ಕಚ್ಛಪನಲ್ಲಿಗೆ ಬಂದು ಚಿತ್ರಾಂಗನಂ ಬರಿಸಿ ಬೞಿಕ್ಕೆ ಮಂಥರನಂ ಕರೆವುದುಮದು ಮಡುವಿಂ ಪೊಱಮಟ್ಟು ಬಂದೊಂದೊಂದಱ ಕಾಲ ಮೇಲೆ ಬಿದ್ದಾನಂದಾಶ್ರುಗಳನಿಕ್ಕಿ ನಮಗೆಯೊರ್ಮೆ ದುಷ್ಕರ್ಮದ ಫಲದಿಂದಪಮೃತ್ಯು ಸಮನಿಸಿ ಬಂದು ನಮ್ಮ ಪುಣ್ಯಫಲದಿಂ ಬರ್ದುಂಕಿದೆವೆಂದು ನುಡಿದಿಂತು ಬೞಿಕ್ಕೆ ಮಂಥರನಿಂತೆಂದಂ:— [೧೬

ಕುಲಮುಂ ಚಲಮುಂ ಪೆಂಪುಂ ।
ಕಲಿತನಮುಂ ಖ್ಯಾತಿಯುಂ ವಿಭೂತಿಯುಮಱಿವುಂ ॥
ಸಲೆ ನೆಲಸಿದವರ ಕೂಟಂ ।
ಪಲತೆಱದಿಂ ಫಲವನೀವುದವರ್ಗರಿದುಂಟೇ ॥447

ಪರಮಾರ್ಥಂ ಪುರುಷಾರ್ಥಮುಳ್ಳ ಮನುಜಂ ಮಿತ್ರಂ ಧನಂ ಧಾತ್ರಿ ಕಿಂ।
ಕರರೆಂಬಂಕದ ವಸ್ತುವಂ ಪಡೆಗೆ ತಾನೀನಾಲ್ಕಱೊಳ್ ರತ್ನಮೊಂ ॥
ದೆರಡಿಲ್ಲಾದೊಡಮೇನನೂನಗುಣನಂ ಸನ್ಮಿತ್ರನಂ ಮಾೞ್ಪುದಾ ।
ದರದಿಂದಂ ಬೞಿಕಾತನಿಂ ಸಮನಿಕುಂ ಧರ್ಮಾರ್ಥಕಾಮತ್ರಯಂ ॥

(ರಥೋದ್ಧತಾವೃತ್ತಂ.)

ದಾನಶೂರನಪವಾದಭೀರು ವಿ।
ಜ್ಞಾನಮೂರ್ತಿ ಭುವನೈಕವತ್ಸಲಂ ॥
ಮಾನನೀಯಗುಣನೆಂಬ ಪೆಂಪಿನು।
ದ್ದಾನಿಯಂ ತಳೆದ ದುರ್ಗನನ್ನರಾರ್ ॥449

ಪ್ರಿಯಹಿತವಚನಂ ದಾನಂ।
ದಯೆ ದೀನಜನಾಭಿರಕ್ಷಣಂ ಸಜ್ಜನದಾ ॥
ಶ್ರಯಮೆಂಬಿವೊಂದಿ ಸಲೆ ವಸು।
ಧೆಯೊಳಗೆ ಸತ್ಪುರುಷನೆನಿಸಿ ಮೆಱೆವಂ ದುರ್ಗಂ ॥450

ನ್ಯಾಯಪರಾರ್ಥನೀಯನಭಿಮಾನಧನಂ ಸುಜನಪ್ರಿಯಂ ನಿಜಾ।
ನ್ವಾಯಸರೋಜಷಂಡದಿನಪಂ ವಿಬುಧಸ್ತುತವೃತ್ತನಾಶ್ರಿತ ॥
ಗ್ರಾಯಪರೋಪಕಾರವನೆ ಮಾಡುಗುಮಾದರದಿಂ "ಪರೋಪಕಾ।
ರಾಯ ಸತಾಂ ವಿಭೂತಿ"ಯೆನಿಕುಂ ಗುಣಿ ದುರ್ಗನಶೇಷಧಾತ್ರಿಯೊಳ್ ॥

ವಿಮಲಶ್ರೀಶ ಸರಸ್ವತೀನಿಳಯ ಕೀರ್ತಿಶ್ರೀವಧೂಕಾಂತ ಗೌ।
ತಮಗೋತ್ರಾಂಬುಜಮಿತ್ರ......ನಿನ್ನನ್ನರಂ ಕಂಡೆನಿ ॥
ಲ್ಲ ಮಹೀವಲ್ಲಭಸಂಧಿವಿಗ್ರಹಿಗಳಂ ಸದ್ವೃತ್ತರಂ ಸದ್ಗುಣೋ।
ತ್ತಮರಂ ಪಾಲಿತಸತ್ಕವೀಂದ್ರವಿಬುಧವ್ರಾತೇಶರಂ ಸ್ವಚ್ಛರಂ ॥451

ವಿಶ್ವಜನಾಳಿಗೆ ಭವದೀ।
ಯಸ್ವಂ ಕರತಳಗತಸ್ವಮನ್ಯಸ್ವಂ ಬ್ರ ॥
ಹ್ಮಸ್ವಂ ರಾಜಸ್ವಂ ದೇ।
ವಸ್ವಂ ಕೀರ್ತಿಸ್ವ ದುರ್ಗ ವಿಶ್ವಾವನಿಯೊಳ್ ॥453

ದುರ್ಗಾಧಿನಾಥನಿಯತನಿ।
ಸರ್ಗಪ್ರೀತಿಯಿನಭೀಷ್ಟಮಂ ಸಕಲಸುಹೃ ॥
ದ್ವರ್ಗಂ ಬೆರಸನುಭವಿಸುಗೆ।
ದುರ್ಗಂ ವರ್ಗತ್ರಯಪ್ರಕೃಷ್ಟೋದಯಮಂ ॥454

ಪತಿಹಿತನಂಜನಾತನಯನಾಪವನಾತ್ಮಜನಿಂ ಖಗೇಶ್ವರಂ ।
ಪತಿಹಿತನಾಮರುತ್ತನಯನಿಂ ಖಗರಾಜನಿನರ್ಕನಂದನಂ॥
ಪತಿಹಿತನಾಮರುತ್ತನಯನಿಂ ಖಗರಾಜನಿನರ್ಕಜಾತನಿಂ ।
ಪತಿಹಿತನೀತನೆಂದು ಪೊಗೞ್ಗಿಂ ಸಲೆ ದುರ್ಗನನುರ್ವರಾಜನಂ ॥

॥ ಫಲಶ್ರುತಿ ॥

ಪದವಱಿ ಕೊಳ್ಗೆ ಧಾತ್ರಿ ಪಿರಿದುಂ ಬೆಳಗುರ್ವರೆಯಂ ಧರಾಧಿಪರ್।
ಮುದದೆ ಸಧರ್ಮದಿಂದೆ ಪರಿಪಾಲಿಸುತಿರ್ಕೆ ಸಮಸ್ತವೇದಶಾ ॥
ಸ್ತ್ರದ ವಿಧಿಯಿಂದಿಳಾಮರಜನಂ ಸುರಪೂಜೆಯನೊಲ್ದು ಮಾೞ್ಕೆ ಸಂ ।
ಪದದೊಳನೂನರಕ್ಕೆ ಪರದರ್ ಸಲೆ ಧಾರ್ಮಿಕರಕ್ಕೆ [1]ಪಾದಜರ್[1] ॥
ವಿಪುಳಶ್ರೀಸುಖಮಕ್ಕೆ ಜೀವನಿವಹಕ್ಕೆಲ್ಲಂ ಕುಲಸ್ತ್ರೀಜನ ।
ಕ್ಕುಪಮಾತೀತಪತಿವ್ರತಾದಿಗುಣದಿಂದೊಪ್ಪಕ್ಕೆ ವಾಗ್ದೇವಿ ಕೂ ॥
ರ್ತು ಪಯೋಜಾಸನನಂತೆ ಮಾೞ್ಕೆ ಕಳೆಯೊಳ್ ವಿದ್ವಜ್ಜನಾನೀಕಮಂ।
ನೃಪಗೋಬ್ರಾಹ್ಮಣಶಾಂತಿಯಕ್ಕೆ ನೆಗೞ್ಗೀಕಾವ್ಯಂ ಧರಾಚಕ್ರದೊಳ್।

ಇದು ವಿನಮದಮರರಾಜಮೌಳಿಮಾಣಿಕ್ಯಮಂಜರೀಪುಂಜರಂಜಿತ
ಭಗವದ್ಭವಾನೀವಲ್ಲಭಚರಣಸರಸೀರುಹಷಟ್ಚರಣಂ
ಶ್ರೀಮನ್ಮಹಾಸಂಧಿವಿಗ್ರಹಿ ದುರ್ಗಸಿಂಹ ವಿರಚಿತಮಪ್ಪ

ಪಂಚತಂತ್ರದೊಳ್.

ಮಿತ್ರಕಾರ್ಯ ಪ್ರಕರಣಂ

ಪಂಚಮತಂತ್ರಂ ಸಮಾಪ್ತಂ.


ಪಂಚತಂತ್ರಂ
ಸಂಪೂರ್ಣಂ.

ಪಾ—1. ಶೂದ್ರಜರ್. ಕ ॥

